# ಬೇಂಬಿ

ಮೂಲ : ಫೆಲಿಕ್ಸ್ ಜಲ್ಟೇನ್

ತೆಲುಗು ಅನುವಾದ : ಡಾ॥ ಮಹೀಧರ ನಳಿನೀ ಮೋಹನರಾವ್

ಕನ್ನಡಕ್ಕೆ: ಶ್ರೀಮತಿ ಶರ್ವಾಣಿ



ಮಕ್ಕಳ ಕಾದಂಬರಿ

ಪ್ರೀತಿಯ ಸಿರಿ ... ಕುಮಾರ ...
ಪ್ರೀತಿಯಿಂದ,
ಶಾರದ,
28-5-96
ಬೆಂಗಳೂರು

# ಬೇಂಬಿ

(ಮಕ್ಕಳ ಕಾದಂಬರಿ)


ಮೂಲ : ಫೆಲಿಕ್ಸ್ ಜಲ್ಟೇನ್

ತೆಲುಗು ಅನುವಾದ : ಡಾ|| ಮಹೀಂಧರ ನಳಿನೀ ಮೋಹನರಾವ್

ಕನ್ನಡಕ್ಕೆ : "ಶರ್ವಾಣಿ"



ಶ್ರೀ ಪ್ರೇಮಸಾಯಿ ಪ್ರಕಾಶನ

'ಶ್ರೀ ಗುರುಪ್ರಸಾದ',

845, 4ನೇ ಮುಖ್ಯರಸ್ತೆ,

ವಿಜಯನಗರ, ಬೆಂಗಳೂರು-560 040

BEMBI — (A English Novel)
By Felix Jalthen, Translated into Kannada by 'SARVANI'
Published by :
SRI PREMA SAI PRAKASHANA
845, 4th Main, Vijayanagar,
Bangalore-560 040

First Edition : 1995 Pages-190 + iV



ಬೆಲೆ ರೂ : 35-00

ಕಲೆ : ನೋನಪ್ಪ

ಮುದ್ರಕರು
ನಿಮಿಷಾಂಭ ಪ್ರಿಂಟರ್ಸ್
ನಂ. 103, 'ಸಿ' ಕ್ರಾಸ್, 14ನೇ ಮುಖ್ಯ ರಸ್ತೆ,
ಜಯನಗರ, ಬೆಂಗಳೂರು-560 041

# ಮೊದಲ ಮಾತು

ವನ್ಯ ಪ್ರಾಣಿಗಳ ಬದುಕನ್ನು ಸ್ವಾರಸ್ಯವಾಗಿ ಹೃದಯಂಗಮವಾಗಿ ಸೆರೆ ಹಿಡಿದಿರುವ ಕಾದಂಬರಿಯೇ ಬೇಂಬಿ. ವನ್ಯ ಪ್ರಾಣಿಗಳೂ ಸಹ ಮಾನವರಂತೆ ಭಾವನೆಗಳನ್ನು ಹಂಚಿಕೊಳ್ಳಬಲ್ಲವು ಎಂಬುದನ್ನು ಚಿತ್ರಿಸಿರುವ ಕಾದಂಬರಿ ಕಾರರ ಕಲ್ಪನಾ ಶಕ್ತಿಯನ್ನು ಕಂಡಾಗ ವಿಸ್ಮಯವೆನಿಸುತ್ತದೆ. ಮಕ್ಕಳೇ ಅಲ್ಲದೆ ಹಿರಿಯರೂ ಸಹ ಓದಿ ಆನಂದಿಸ ಬಹುದಾದ, ವನ ಸೀಮೆಗಳಲ್ಲಿನ ವನ್ಯ ಜೀವಿಗಳ ಕೌತುಕ ಮಯವಾದ ಜೀವನ ಚಿತ್ರಣ ಇಲ್ಲಿದೆ.

ಪ್ರಪಂಚ ಪ್ರಸಿದ್ಧವಾದ ಈ ಕಾದಂಬರಿ ಚಲನಚಿತ್ರವಾಗಿಯೂ ಪ್ರೇಕ್ಷ ಕರನ್ನು ವಿಶೇಷವಾಗಿ ಆಕರ್ಷಿಸಿದೆ.

ಈ ಕಾದಂಬರಿಯನ್ನು 'ಬಾಲ ಮಂಗಳ'ದಲ್ಲಿ ಮೊದಲಬಾರಿ ಧಾರಾ ವಾಹಿಯಾಗಿ ಪ್ರಕಟಿಸಿ ಪ್ರೋತ್ಸಾಹಿಸಿದ ಪತ್ರಿಕೆಯ ಸಂಪಾದಕರಾದ ಶ್ರೀ ಬಾಬು ಕೃಷ್ಣಮೂರ್ತಿ ಅವರಿಗೆ ವಂದನೆಗಳು.

ಈಗ ಪುಸ್ತಕ ರೂಪದಲ್ಲಿ ಇದನ್ನು ಹೊರತಂದ ಶ್ರೀ ಪ್ರೇಮಸಾಯಿ ಪ್ರಕಾಶನದ ಎ. ಎಸ್. ಭಟ್ ಮತ್ತು ಸೋದರಿ ಪ್ರೇಮಾಭಟ್ ಅವರಿಗೆ ಕೃತಜ್ಞಳು. ನನ್ನ ಮಗ ಟಿ. ರವಿಯ ಸಹಕಾರವನ್ನು ನೆನೆಯುತ್ತೇನೆ.

ಕಲಾವಿದ ಮತ್ತು ಮುದ್ರಕರಿಗೆ ವಂದನೆಗಳು. ಮೂಲ ಲೇಖಕರನ್ನು ನಾನು ಇಲ್ಲಿ ಸ್ಮರಿಸಿಕೊಳ್ಳುತ್ತೇನೆ.

12.7.1995
ಹೈದರಾಬಾದ್

"ಶರ್ವಾಣಿ"
(ಎನ್. ಆರ್. ಶಾರದಮ್ಮ)

# ಪ್ರಬೋಧ ಸಾಹಿತ್ಯ ಮಾಲೆ

ಶ್ರೀ ಪ್ರೇಮಸಾಯಿ ಪ್ರಕಾಶನದ ಅಡಿಯಲ್ಲಿ ಕನ್ನಡ ನಾಡಿನ ಹಿರಿಯ ಲೇಖಕರ ಮತ್ತು ಜನಪ್ರಿಯ ಬರಹಗಾರರ ಪ್ರಬಂಧ, ವಿಚಾರ ಸಾಹಿತ್ಯ, ಕಾವ್ಯ, ಕಾದಂಬರಿ, ಹಾಸ್ಯ, ನಾಟಕ, ಜೀವನ ಚರಿತ್ರೆ, ಆತ್ಮ ಚರಿತ್ರೆ, ಪ್ರವಾಸ ಕಥನ, ವಿಮರ್ಶೆ, ವಿಜ್ಞಾನ, ಬಾಲ ಸಾಹಿತ್ಯ, ಅನುವಾದ, ಸಂಪಾದಿತ ಗ್ರಂಥ, ವಿಚಾರ ಸಾಹಿತ್ಯ, ಸಂಪಾದಕೀಯ—ಇವೇ ಮೊದಲಾದ ಬರಹಗಳನ್ನು ಓದುಗರ ಅಭಿರುಚಿಗೆ ತಕ್ಕಂತೆ ಉತ್ತಮ ರೂಪದಲ್ಲಿ ಪುಸ್ತಕಗಳನ್ನು ತರಬೇಕೆಂಬ ಅಭಿಲಾಷೆಯಿಂದ ಈ ಪ್ರಬೋಧ ಸಾಹಿತ್ಯ ಮಾಲೆಯನ್ನು ಪ್ರಾರಂಭಿಸಿದ್ದೇವೆ.

ನಮ್ಮ ಬರಹಗಾರರು, ಓದುಗ ಅಭಿಮಾನಿಗಳು ಈ ಮಾಲೆಯನ್ನು ನಡೆಸಿಕೊಂಡು ಹೋಗುವಷ್ಟು ದಿನದವರೆಗೂ ಪುಸ್ತಕಗಳು ಹೊರ ಬರುತ್ತಲೇ ಇರುತ್ತವೆ. ನೂರು ಪುಸ್ತಕಗಳನ್ನಾದರೂ ಈ ಮಾಲೆಯಲ್ಲಿ ಹೊರ ತರುವ ಗುರಿಯನ್ನು ನಾವು ಇಟ್ಟುಕೊಂಡಿದ್ದೇವೆ. ಈಗಾಗಲೇ ವಿವಿಧ ಪ್ರಕಾರಗಳ ಮೂವತ್ತು ಜನ ಲೇಖಕ—ಲೇಖಕಿಯರು ತಮ್ಮ ಕೃತಿಗಳನ್ನು ಕೊಟ್ಟು ಸಹಕರಿಸಿದ್ದಾರೆ. ಅನುಕೂಲವಾದಂತೆ ಪುಸ್ತಕಗಳು ಹೊರ ಬರುತ್ತವೆ.

ಸರಕಾರದವರು ವಿಶ್ವವಿದ್ಯಾಲಯಗಳು, ಗ್ರಂಥಾಲಯದವರು, ಪುಸ್ತಕ ವ್ಯಾಪಾರಿಗಳು, ಕಾಲೇಜು, ಹೈಸ್ಕೂಲು, ಸಂಘ—ಸಂಸ್ಥೆಗಳು ನಮ್ಮ ಮಾಲೆಯ ಪುಸ್ತಕಗಳನ್ನು ಕೊಂಡು ಕೊಳ್ಳುವುದರ ಮೂಲಕ ನೆರವನ್ನು ನೀಡಿ ಸಹಕರಿಸಬೇಕೆಂದು ವಿನಂತಿಸುತ್ತೇವೆ.

ಕೊಡುಗೈ ದಾನಿಗಳು ರೂಪಾಯಿ ಒಂದು ಸಾವಿರ ಕೊಟ್ಟಲ್ಲಿ ಅವರನ್ನು ಪೋಷಕರನ್ನಾಗಿ ತೆಗೆದುಕೊಂಡು ಪ್ರತಿ ವರ್ಷ ಪ್ರಕಟಣೆಯ ಇನ್ನೂರು ರೂಪಾಯಿಯ ಮುಖ ಬೆಲೆಯ ಪುಸ್ತಕಗಳನ್ನು ಹತ್ತು ವರ್ಷ ಕೊಡುತ್ತೇವೆಂದು ತಿಳಿಸಲು ಸಂತೋಷಪಡುತ್ತೇವೆ. ತಮ್ಮ ಕೊಡುಗೆಯನ್ನು ನಗದಾಗಿ/ಬ್ಯಾಂಕ್ ಚೆಕ್/ಡಿ.ಡಿ. ಮೂಲಕ 'ಪ್ರಬೋಧ ಸಾಹಿತ್ಯ ಮಾಲೆ', ವಿಜಯನಗರ, ಬೆಂಗಳೂರು ಪರವಾಗಿ ಕೊಟ್ಟು ರಶೀದಿಯನ್ನು ಪಡೆಯಬಹುದು. ಎ. ಎಸ್. ಭಟ್— ದೂರವಾಣಿ 3301822

# ಬೇಂಬಿ

ಕಡುಕತ್ತಲಿನಿಂದಾವೃತವಾದ, ದಟ್ಟವಾದ ಕಾಡಿನ ಒಂದು ಮೂಲೆ ಅದು, ಪೊದೆ, ಬಳ್ಳಿಗಳಿಂದ ಆವರಿಸಲ್ಪಟ್ಟ ರಹಸ್ಯ ಪ್ರದೇಶ. ಆ ಕಾಡಿನಲ್ಲಿ ಹುಟ್ಟಿ ಬೆಳೆದವರಿಗೆ ಮಾತ್ರವೇ ಗೊತ್ತಾಗುವಂತಹ ಸ್ಥಳ ಅದು, ಬೇರೆಯವರಿಗೆ ಅಂತಹ ಸ್ಥಳ ಒಂದಿದೆಯೆಂದೇ ಗೋಚರಿಸದು. ಹಾಂ, ಅಲ್ಲಿ ಅದೇ ತಾನೇ ಜನ್ಮತಾಳಿದ-ಅವನು.

ಅವನ ದೊಡ್ಡ ದೊಡ್ಡ ಕಪ್ಪನೆಯ ಕಣ್ಣುಗಳನ್ನೂ ತೆರೆದುಕೊಂಡಿರಲಿಲ್ಲ. ಮೃದುವಾದ ದೊಡ್ಡ ಕಿವಿಗಳಿಗೆ ಈ ಪ್ರಪಂಚದ ಶಬ್ದಗಳೊಂದೂ ಕೇಳಿಸುತ್ತಿರಲಿಲ್ಲ. ಆದರೆ ಆಗಲೇ ಎದ್ದು ನಿಂತುಬಿಟ್ಟಿದ್ದಾನೆ ! ಸಣ್ಣ ಪುಟಾಣಿ ಕಾಲುಗಳ ಮೇಲೆ ನಿಂತೇ ಬಿಟ್ಟಿದ್ದಾನೆ. ರೇಷ್ಮೆಯಂತಹ ಚಿನ್ನದ ಬಣ್ಣ ಚರ್ಮ ಕಂಪಿಸುತ್ತಾ. ಅಲ್ಲಲ್ಲಿ ಮುದುಡಿಕೊಳ್ಳುತ್ತಿದೆ.

“ಆಹಾ, ಆಹಾ ! ಎಷ್ಟು ಮುದ್ದಾಗಿದ್ದಾನೆ, ಮಗು !” ತನ್ನ ಆಶ್ಚರ್ಯವನ್ನು ಅಡಗಿಸಿಕೊಳ್ಳಲಾರದೆ, ಮೇಲಕ್ಕೇ ವ್ಯಕ್ತಪಡಿಸಿತು ಮೈನಾಹಕ್ಕಿ. ಅವಳು ಯಾವುದೋ ಕೆಲಸದ ಮೇಲೆ ಹೊರಕ್ಕೆ ಹೊರಟಿದ್ದಳು. ಆದರೆ ಅದನ್ನೆಲ್ಲಾ ಮರೆತು ಕುಳಿತು ಬಿಟ್ಟಳು

“ಅಬ್ಬಾ ! ಎಷ್ಟು ಸುಂದರ ಈ ಮಗು !” ಎಂದು ಮತ್ತೆ ಉದ್ಗಾರವೆತ್ತಿದಳು.

ಮೈನಾಳ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ. ಅವಳು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲೂ ಇಲ್ಲ. “ಅರೆ, ಇದೇನು ಸೋಜಿಗವಪ್ಪಾ, ಇಷ್ಟು ಪುಟ್ಟ ಮಗು. ಆಗಲೇ ಎದ್ದು ನಿಲ್ಲುತ್ತಿದ್ದಾನೆ. ಆಗಲೇ ನಡೆಯುತ್ತಿದ್ದಾನೆ ಕೂಡಾ. ಇಂತಹ ಆಶ್ಚರ್ಯ ಇದುವರೆವಿಗೂ ಕಂಡಿಲ್ಲ, ಕೇಳಿಲ್ಲ. ಇಷ್ಟಕ್ಕೂ ನನ್ನ ವಯಸ್ಸು ಮಾತ್ರ ಏನಷ್ಟು ಹೆಚ್ಚಾಗಿದೇಂತ ! ಇನ್ನೂ ಗೂಡು ಬಿಟ್ಟು ವರ್ಷವೂ ಆಗಿಲ್ಲ. ನಿಮಗೆಲ್ಲಾ ಆ ವಿಷಯ ತಿಳಿದಿದ್ದೇ ತಾನೇ

ಆದರೆ ಇದ್ದುದನ್ನು ಇದ್ದಂತೆ ಹೇಳಬೇಕು ಮಾತ್ರ! ಇಂತಹ ಪವಾಡವನ್ನು ಮಾತ್ರ ಯಾರೂ ನೋಡಿರಲಾರರು. ಇಷ್ಟಕ್ಕೂ ನಿಮ್ಮ ಜಿಂಕೆಗಳಲ್ಲಿ ಈ ತರಹ ವಿಪರೀತಗಳು ನಡೆಯುತ್ತಿರುತ್ತವೇನೊ, ನಂಗಂತೂ ಗೊತ್ತಿಲ್ಲಪ್ಪ."

ಮೈನಾ ಹಾರಿಬಂದು ಕೆಳಗಿನ ಕೊಂಬೆಯ ಮೇಲೆ ಕುಳಿತು ಬಾಗಿನೋಡುತ್ತಾ "ಅಂದಹಾಗೆ ಹುಡುಗ ಓಡಬಲ್ಲನೇ ಹೇಗೆ?" ಎಂದಿತು

"ಹಾಂ...ಹೂಂ" ಕ್ಷೀಣಕಂಠದಲ್ಲಿ ಉತ್ತರ ಹೇಳಿದಳು ಅಮ್ಮ. "ನಿಮ್ಮ ಜತೆ ಮಾತನಾಡುತ್ತಾ ಕೂರುವಷ್ಟು ಸಮಯವಿಲ್ಲ ನನಗೆ. ಎಷ್ಟೋ ಕೆಲಸಗಳಿವೆ. ತುಂಬಾ ಸುಸ್ತಾಗಿದೆ ಕೂಡಾ."

ಮೈನಾಳ ಮುಖ ಸಪ್ಪಗಾಯಿತು. "ಓಹೋ. ನಿಮಗೊಬ್ಬರಿಗೇ ಏನು ಬಿಡುವಿಲ್ಲದೇ ಇರೋದು? ನನಗೂ ಇಲ್ಲ. ಏನೋ ವಿಚಿತ್ರವಾಗಿ ಕಾಣಿಸಿತಲ್ಲಾ ಅಂತ ಕೇಳಿದೆ. ಅಷ್ಟೆ. ಇದೇ ನಮ್ಮ ಮೈನಾಗಳಲ್ಲಾದರೆ ಇಷ್ಟು ಬೇಗ ಮೇಲಕ್ಕೆ ಏಳುವುದುಂಟೆ? ಮೊಟ್ಟೆ ಒಡೆದು ಮರಿ ಹೊರಕ್ಕೆ ಬರುವುದಕ್ಕೇನೆ ಎಷ್ಟೋ ದಿನ ಬೇಕು. ಆಮೇಲೂ ಎಷ್ಟು ಸೂಕ್ಷ್ಮ ಅಂತೀರಿ? ಒಂದೇ ಒಂದು ಕೆಲಸ ಕೂಡಾ ತಾವಾಗಿ ಮಾಡಿಕೊಳ್ಳಲಾರವು. ಎಷ್ಟು ಜೋಪಾನವಾಗಿ ನೋಡಿಕೋಬೇಕು, ಎಷ್ಟು ಚಾಕರಿ ಮಾಡಬೇಕು. ಅಬ್ಬ! ಏನು ಹೇಳಲಿ? ಅವಕ್ಕೋ ಸದಾ ತಿಂಡಿಯ ಮೇಲೇ ಧ್ಯಾನ. ಆ ಪುಟ್ಟ ಹೊಟ್ಟೆಗಳನ್ನು ತುಂಬಿಸಬೇಕಾದರೆ ನಮ್ಮ ರೆಕ್ಕೆಗಳು ಬಿದ್ದು ಹೋದಂತಾಗುತ್ತೆ. ಇದರ ಮೇಲೆ ಅದಕ್ಕೆ ರೆಕ್ಕೆ-ಪುಕ್ಕ ಬರೋವರ್ಗೂ ಕಾದು ಕಾದು ಕಣ್ಣು ತೂತು ಬಿದ್ದು ಹೋಗತ್ತೆ. ಏನಂತೀರ?" ಗಟ್ಟಿಯಾಗಿ ಕೇಳಿ ಉತ್ತರಕ್ಕೋಸ್ಕರ ಎದುರು ನೋಡಿತು ಮೈನಾ.

"ಕ್ಷಮಿಸಿ, ನಿಮ್ಮ ಮಾತು ಕೇಳಿಸಿಕೊಳ್ಳಲಿಲ್ಲ ನಾನು" ಎಂದು ಸುಸ್ತಾಗಿ ಉತ್ತರ ಹೇಳಿತು ಅಮ್ಮ.

ಮೈನಾ ಮೂತಿ ಸೊಟ್ಟಗೆ ಮಾಡಿಕೊಂಡು ಹಾರಿಹೋಯಿತು. "ಎಲ್ಲೋ ಹುಚ್ಚಮ್ಮ"

ಮೈನಾ ಹೊರಟುಹೋಗಿದ್ದನ್ನು ಅಮ್ಮ ಗಮನಿಸಲೇ ಇಲ್ಲ. ಆಗ ತಾನೇ ಹುಟ್ಟಿದ ತನ್ನ ಪಾಪೂಗೆ ನೀರುಹಾಕುವ ಸಂಭ್ರಮದಲ್ಲಿತ್ತದು. ನಾಲಿಗೆ

ಯಿಂದ ಮಗುವಿನ ಮೈಯನ್ನೆಲ್ಲಾ ಶುಭ್ರವಾಗಿ ನೆಕ್ಕಿ ನೆಕ್ಕಿ ಶುಚಿಮಾಡಿತು. ಆದೇ ಸ್ನಾನ ಅದಕ್ಕೆ. ಮೈಸವರುವುದೂ ಅದೇ, ಮುದ್ದಾಡುವುದೂ ಅದೇ.

ಹುಡುಗ ನಿಲ್ಲಲಾರದೆ ಚಡಪಡಿಸಿದ. ಬೆಚ್ಚಗಿನ ನಾಲಿಗೆಯಿಂದ ಅಮ್ಮ ಮಾಡಿಸಿದ ಸ್ನಾನದಿಂದ ಬಳಲಿದೆ ಅವನು ನೆಲದಮೇಲೆ ಕುಸಿದು ಕುಳಿತ. ಅವನ ಒದ್ದೆಯಾದ ಮೈಮೇಲಿನ ಬಿಳಿಯ ಚುಕ್ಕಿಗಳು ಫಳಫಳನೆ ಹೊಳೆದುವು. ಕಣ್ಣು ಮುಚ್ಚಿಕೊಂಡಿದ್ದ ಆ ಹುಡುಗನ ಎಳೆಯ ಮುಖ, ಪ್ರಶಾಂತವಾಗಿ ಮುಗ್ಧತೆಯ ಮೈವೆತ್ತಂತಿತ್ತು.

ಮತ್ತಿ, ಬಸರಿ, ಆಲ, ನೇರಿಳೆ ಮೊದಲಾದ ಮರ ಗಿಡಗಳಿಂದ, ಒತ್ತಾದ ಪೊದೆಗಳಿಂದ, ವಿಧವಿಧವಾದ ಹೂಗಿಡಗಳು ಮತ್ತು ಬಳ್ಳಿಗಳಿಂದ ದಟ್ಟವಾಗಿತ್ತು ಅಡವಿ.

ಹಣ್ಣೆಲೆಗಳಿಂದ ತುಂಬಿ ರೊಚ್ಚು ರೊಚ್ಚಾಗಿದ್ದ ನೆಲದಮೇಲೆ ಗರಿಕೆ ಹೂವು ಹಾಸಿದಂತಿತ್ತು. ಎಲೆಗಳ ಸಂದಿಗಳಿಂದ ಚಿನ್ನದ ಬಳ್ಳಿಗಳಂತೆ ಕಾಣುತ್ತಿದ್ದ ಉದಯಕಾಲದ ಸೂರ್ಯನ ಕಿರಣಗಳು ನೆಲದಮೇಲೆ ಚೆಲ್ಲಾಟವಾಡುತ್ತಿದ್ದುವು ಪಾರಿವಾಳಗಳು ಕುವ್ ಕುವ್ ಎನ್ನುತ್ತಿದ್ದುವು ಗುಬ್ಬಚ್ಚಿ ಕಿಚ್ ಕಿಚ್ ಎನ್ನುತ್ತಿತ್ತು, ಮರಕುಟುಕ ಹಕ್ಕಿಗಳು ಟಕಟಕ ಸದ್ದು ಮಾಡುತ್ತಿದ್ದುವು. ಆಗಾಗ ನವಿಲುಗಳು ಕೇಕೆ ಹಾಕುತ್ತಿದ್ದುವು. ಆ ಶಬ್ದಗಳ ಮಧ್ಯದಿಂದ ಸೀಳಿ ಬಂದಂತೆ ಗೂಬೆಗಳು ಭಯಂಕರವಾಗಿ ಕೂಗುತ್ತಿದ್ದುವು. ಕೊಂಬೆಗಳ ತುಟ್ಟತುದಿಯಲ್ಲಿ ಕುಳಿತ ಮಂಡಕಾಗೆಗಳು ಜೋರುಧ್ವನಿಯಲ್ಲಿ ಜಗಳವಾಡುತ್ತಿದ್ದುವು. ಕೋಟಿ ಕಂಠ ಧ್ವನಿಗಳು ಒಂದರೊಡನೊಂದು ಬೆರತು ಅವ್ಯಕ್ತವಾಗಿ, ಮಧುರವಾಗಿ ಕೇಳಿಬರುತ್ತಿದ್ದುವು.

ಆ ಹುಡುಗನಿಗೆ ಆ ಧ್ವನಿಗಳನ್ನಾಗಲೀ, ಕಂಠಗಳನ್ನಾಗಲೀ ಗುರ್ತು ಹಿಡಿಯಲೂ ತಿಳಿಯದು. ಆ ಕಾಡಿನಲ್ಲಿ ಸತತವಾಗಿ ಕೇಳಿಸುತ್ತಿದ್ದ ಕೋಟಿ ಕೋಟಿ ಮಾತುಗಳಲ್ಲಿ ಒಂದೂ ಅರ್ಥವಾಗದು. ಕಾಡಿನಲ್ಲೆಲ್ಲಾ ವಿಧವಿಧವಾದ ವಾಸನೆ ಹರಡಿಕೊಂಡಿತ್ತು. ಗಾಳಿ ಇತ್ತ ಬೀಸಿದಾಗ ಅದು ಗುಪ್ಪೆಂದು ಬಡಿಯುತ್ತಿತ್ತು. ಆದರೆ ಅದೇನೆಂದು ಅವನಿಗಿನ್ನೂ ತಿಳಿಯದು. ಅವನಿಗೆ ತಿಳಿದದ್ದೆಲ್ಲಾ ಒಂದೇ, ಅಮ್ಮನ ಮುದ್ದು, ಆಕೆ ಮಾಡಿಸುವ ಸ್ನಾನ, ಹಾಗೆ

ಮಾಡಿಸುವಾಗ ಅವನ ರೇಷ್ಮೆಯಂತಹ ಚರ್ಮವನ್ನು ತಾಗುತ್ತಾ ಸಾಗುತ್ತಿದ್ದ ಬೆಚ್ಚನೆಯ ನಾಲಿಗೆಯ ಸ್ಪರ್ಶ ಒಂದೇ. ಅಮ್ಮನಿಗೆ ಮತ್ತಷ್ಟು ಹತ್ತಿರವಾಗಿ ಸರಿದು ಒತ್ತಿಕೊಂಡು ಮಲಗಿದ ಅವನು.

ಮಗ ಹಾಲು ಕುಡಿಯುತ್ತಿದ್ದಾಗ ತಾಯಿ ಅರ್ಧನಿಮೀಲಿತಳಾಗಿ "ಬೇಂಬಿ ಬೇಂಬಿ" ಎಂದು ಮೆಲುದನಿಯಲ್ಲಿ ಉಸುರುತ್ತಾ, ತಲೆ ಒದರಿ, ಕಿವಿ, ನಿಗರಿಸಿ, ದೀರ್ಘನಿಶ್ವಾಸಬಿಟ್ಟಳು. ಆನಂದದಿಂದ ನಿಶ್ಚಲವಾಗಿ ಮಗನನ್ನು ಮುದ್ದಿಸ ತೊಡಗಿದಳು.

"ಬೇಂಬೀ. ನನ್ನ ಪುಟ್ಟ ಬೇಂಬಿ" ಎಂದಳು

ವಸಂತಮಾಸದ ಪ್ರಭಾತ ಸಮಯ ಗಾಳಿ ಮಂದ ಮಂದವಾಗಿ ಬೀಸು ತ್ತಿತ್ತು. ಮರಗಳ ಕೊಂಬೆಗಳು ಮೆಲುವಾಗಿ ಆಕಾಶವನ್ನು ಸವರುತ್ತಿ ದ್ದುವು. ಬಾಲ ಸೂರ್ಯನು ಮರಗಳ ಚಿಗುರುಗಳಿಗೆ ಬಣ್ಣ ಬಳಿಯುವುದ ರಲ್ಲಿ ನಿರತನಾಗಿದ್ದ. ಪೊದೆಗಳ ಮೇಲೂ ಹುಲ್ಲಿನ ಮೇಲೆಯೂ ನೀರಿನ ಹನಿ ಗಳು ಬೆಳ್ಳಗೆ, ಕೆಂಪಗೆ ನಕ್ಷತ್ರಗಳಂತೆ ಹೊಳೆಯುತ್ತಿದ್ದುವು. ಅರಣ್ಯದ ಒಳ ಭಾಗವೆಲ್ಲಾ ವಿಧವಿಧವಾದ ಬಣ್ಣಗಳಿಂದ ರಂಗು ರಂಗಾಗಿತ್ತು. ಅರೆಬಿರಿದ ಹೂಗಳ ಮೇಲಿನಿಂದ, ಎಳೆಯ ಚಿಗುರಿನ ಮಧ್ಯದಿಂದ, ನೆನೆದ ನೆಲದಮೇಲಿ ನಿಂದ ಬರುತ್ತಿದ್ದ ವಾಸನೆ ಅಡವಿಯನ್ನೆಲ್ಲಾ ಆವರಿಸಿ ಗಮಗಮಿಸುತ್ತಿತ್ತು. ಪಕ್ಷಿಗಳ ಕಲಕಲ ಧ್ವನಿ, ಜೇನ್ನೊಣಗಳ ಝೇಂಕಾರ, ಗಾಳಿ ಬೀಸಿದಾಗ ಬಿದಿ ರಮೆಳೆಗಳಿಂದ ಹೊರಹೊಮ್ಮುತ್ತಿದ್ದ ಕೀರಲು ಧ್ವನಿ—ಎಲ್ಲಾ ಸೇರಿ ವಿಚಿತ್ರ ವಾದ ವಾದ್ಯ ಸಮ್ಮೇಳನ ಶ್ರವಣಾನಂದಕರವಾಗಿತ್ತು. ಬೇಂಬಿಯ ಬಾಲ್ಯ ಇವುಗಳ ಮಧ್ಯೆ ಕಳೆಯುತ್ತಿತ್ತು.

ಪೊದೆಗಳ ಮಧ್ಯದಲ್ಲೊಂದು ಚಿಕ್ಕದಾರಿ. ಆ ದಾರಿಯಲ್ಲಿ ತಾಯಿಯ ಹಿಂದೆ ಬೇಂಬಿ ಹೊರಟಿದ್ದ. ಎಷ್ಟು ಸೊಗಸಾದ ನಡಿಗೆ ಅವನದು! ನಡೆಯು ತ್ತಿದ್ದಾಗ ಎರಡೂ ಕಡೆ ದಟ್ಟವಾಗಿದ್ದ ಎಲೆಗಳು ಸರಿದು ಅವನ ಮೈಯನ್ನು ಮೃದುವಾಗಿ ಒರೆಸುತ್ತಿದ್ದುವು. ಅವನಿಗೆ ಚಿಕ್ಕ ಪುಟ್ಟ ವಿಷಯಗಳೆಲ್ಲಾ ಆತಂಕ ವನ್ನೇ ಉಂಟುಮಾಡುತ್ತಿದ್ದುವು. ಆದರೆ ಸುಮ್ಮನೆ ಮುಟ್ಟಿದರೆ ಸಾಕು ದಾರಿ ಬಿಟ್ಟು ಕೊಡುತ್ತಿದ್ದುವು. ದಾರಿ ನೇರವಾಗಿರಲಿಲ್ಲ. ಎಲ್ಲಾ ಅಂಕು

–ಡೊಂಕು ದಾರಿ–ಹಾವಿನಂತೆ. ಅಂತಹ ದಾರಿಗಳು ಅರಣ್ಯದ ತುಂಬಾ ಹರಡಿಕೊಂಡಿದ್ದವು. ಆ ದಾರಿಗಳ ಪರಿಚಯ ಚೆನ್ನಾಗಿತ್ತು–ಬೇಂಬಿಯ ತಾಯಿಗೆ. ಆಕೆಯ ಹಿಂದೆ ಹಿಂದೆ ಹೆಜ್ಜೆ ಹಾಕುತ್ತಿದ್ದ ಬೇಂಬಿ.

ಅವನಿಗೆ ಕಾಣಸುತ್ತಿದ್ದ ಪ್ರತಿಯೊಂದು ಅವನಿಗೆ ಸಾವಿರ ಸಂದೇಹಗಳನ್ನು ಉಂಟುಮಾಡುತ್ತಿದ್ದುವು. ಹೆಜ್ಜೆ ಹೆಜ್ಜೆಗೂ ಅದೇನು, ಇದೇನು, ಯಾಕೆ ಹೀಗೆ ಎಂದು ಪ್ರಶ್ನೆಗಳ ಸರಮಾಲೆಯನ್ನೇ ತಾಯಿಯ ಮುಂದಿಡುತ್ತಿದ್ದ. ತಾಯಿಯ ಉತ್ತರಕ್ಕಾಗಿ ಎದುರು ನೋಡುತ್ತಿದ್ದ. ತಾನು ತಾಯಿಯನ್ನು ಕೇಳಬೇಕು. ಆಕೆ ಕೊಡುವ ಉತ್ತರ ಕೇಳಬೇಕು. ಅದು ಅವನಿಗೆ ತುಂಬಾ ಸಂತೋಷವನ್ನುಂಟುಮಾಡುತ್ತಿತ್ತು. ಅವಳು ಹೇಳಿದ್ದೆಲ್ಲಾ ಅವನಿಗೆ ಅರ್ಥವಾಗುತ್ತಿತ್ತೆಂತ ಏನಿಲ್ಲ. ಆದರೂ ಸರಿ, ಕೇಳಿಯೇ ಕೇಳುತ್ತಿದ್ದ. ಪ್ರಶ್ನೆಗಳ ಬುಗ್ಗೆ ಚಿಮ್ಮುತ್ತಲೇ ಇತ್ತು. ಆಗಾಗ ಬೇಂಬಿ ತಾಯಿಯನ್ನು ಪ್ರಶ್ನಿಸದೆ ತಾನೇ ಆಲೋಚಿಸಲು ಪ್ರಯತ್ನಿಸುತ್ತಿದ್ದ. ಅದು ಅವನಿಗೆ ತುಂಬಾ ಆನಂದವನ್ನು ಕೊಡುತ್ತಿತ್ತು. ಆಗಾಗ ಅಮ್ಮ ಬೇಕೂಂತಲೇ ತನಗೆ ಉತ್ತರ ಹೇಳುತ್ತಿಲ್ಲ ಅಂತ ಬೇಂಬಿಗೆ ಗೊತ್ತಾಗಿಬಿಡುತ್ತಿತ್ತು. ಅದೂ ಒಂದು ತರಹ ಚೆನ್ನಾಗಿಯೇ ಇರುತ್ತಿತ್ತು. ಏಕೆಂದರೆ ಅದರಲ್ಲಿ ಏನೋ ರಹಸ್ಯ ಅಡಗಿದಂತೆ ನಿಸುತ್ತಿತ್ತು. ಬದುಕಿನಲ್ಲಿ ಅರ್ಥವಾಗದ ತಿರುವುಗಳು, ಅವು ಅರ್ಥವಾಗದೆ ಇರುವುದರಲ್ಲಿನ ಅನುಭವ ಮೋಜನ್ನುಂಟು ಮಾಡುತ್ತಿತ್ತು. ಅಷ್ಟರಲ್ಲಿಯೇ ಒಂದಿಷ್ಟು ಭಯ–ಎಷ್ಟೋ ಅನುಭೂತಿಗಳು,

ಬೇಂಬಿ ಕೇಳಿದ, "ಈ ದಾರಿ ಯಾರದಮ್ಮಾ?"

"ನಮ್ಮದೇ."

"ಅಂದರೆ, ನಿನ್ನದೂ ನನ್ನದೂನಾ?

"ಹೂಂ."

"ಬರೀ ನಮ್ಮಿಬ್ಬರದೇನೇನು?"

"ಅಲ್ಲ ನಮ್ಮ ಜಿಂಕೆಗಳೆಲ್ಲರದೂ."

ಬೇಂಬಿ ಆಶ್ಚರ್ಯದಿಂದ ನಕ್ಕ, "ಜಿಂಕೆಗಳೇ? ಅದಾರು?"

ಮಗನ ಕಡೆ ನೋಡಿ ತಾಯಿ ತಾನೂ ನಕ್ಕಳು.

"ನೀನೂ ಜಿಂಕೆ, ನಾನೂ ಜಿಂಕೇನೇ, ನಮ್ಮದು ಜಿಂಕೆಗಳ ಜಾತಿ. ತಿಳಿಯಿತೇ?"

ಬೇಂಬಿ ಕಿಲಕಿಲನೆ ನಕ್ಕು ಗಾಳಿಯಲ್ಲಿ ಒಂದು ಸಲ ಮೇಲಕ್ಕೆ ನೆಗೆದು ನಿಂತು ಹೇಳಿದ. "ಓ, ನನಗೀಗ ಗೊತ್ತಾಯಿತು. ನಾನು ಪುಟ್ಟ ಜಿಂಕೆ. ನೀನು ದೊಡ್ಡ ಜಿಂಕೆ. ಹಾದಲ್ಲವೇ?"

ಅಮ್ಮ ತಲೆದೂಗಿದಳು.

"ನಾನೂ ನೀನೂ ಅಲ್ಲದೆ ಇನ್ನೂ ಜಿಂಕೆಗಳಿದ್ದಾರೇನು?" ಏನನ್ನೋ ನೆನಪುಮಾಡಿಕೊಳ್ಳುವಂತೆ ನೋಡುತ್ತಾ ಕೇಳಿದ ಬೇಂಬಿ.

"ಇಲ್ಲದೇನು? ಬೇಕಾದಷ್ಟು ಮಂದಿ ಇದ್ದಾರೆ" ಎಂದಳು ಅಮ್ಮ.

"ಮತ್ತೆ ಎಲ್ಲಿದ್ದಾರೆ ಅವರೆಲ್ಲಾ?"

"ಇಲ್ಲಿಯೇ ಎಲ್ಲೆಲ್ಲೋ ಇರುತ್ತಾರೆ."

"ಹೂಂ ಹೋಗಮ್ಮಾ ನನಗೊಬ್ಬರೂ ಕಾಣಿಸುತ್ತಿಲ್ಲ" ಮುಖ ಉಬ್ಬಿಸಿ ಹೇಳಿದ ಬೇಂಬಿ.

"ಕಾಣಿಸುತ್ತಾರಪ್ಪಾ, ಸ್ವಲ್ಪ ತಾಳಿಕೋ" ಎಂದಳು ಅಮ್ಮ–ಅಕ್ಕರೆಯಿಂದ ಮಗನ ಕಡೆ ನೋಡುತ್ತಾ.

"ಎಂದು?" ಎಂದು ನಿಂತಲ್ಲಿಯೇ ನಿಂತುಬಿಟ್ಟ ಬೇಂಬಿ.

"ಬೇಗನೇ ಕಾಣಿಸುತ್ತಾರೆ" ಎಂದು ತಾಯಿ ಶಾಂತವಾಗಿ ಉತ್ತರ ಕೊಟ್ಟು ಮುಂದಕ್ಕೆ ಹೆಜ್ಜೆ ಹಾಕಿದಳು.

ಬೇಂಬಿ ಮತ್ತೆ ತಾಯಿ ಹಿಂದೆ ನಡೆಯಲಾರಂಭಿಸಿದ. ಮೌನವಾಗಿ ನಡೆಯುತ್ತಿದ್ದ ಅವನ ಪುಟ್ಟ ತಲೆಯಲ್ಲಿ ಎಷ್ಟೆಷ್ಟೋ ಆಲೋಚನೆಗಳು. ಬೇಗನೇ ಅಂದರೆ ಏನಿರಬಹುದು? ಹೂಂ, ತಿಳಿಯಿತು! ಬೇಗ ಅಂದರೆ ಈಗಲೇ ಅಲ್ಲ, ಆಮೇಲೆ ಅಂತಿರಬಹುದು. ಆಮೇಲೆ ಅಂದರೆ, ಬೇಗನೆ ಅಲ್ಲವೇನೋ."

ಹಠಾತ್ತಾಗಿ ಬೇಂಬಿ ಪ್ರಶ್ನಿಸಿದ, "ಈ ದಾರಿಯನ್ನು ಯಾರು ಮಾಡಿ

ದರವ್ಮಾ?"

"ನಾವೇ."

"ಅಂದರೆ ನೀನೂ ನಾನು ಮಾಡಿದ್ದೇ?"

"ನಾವು ಅಂದರೆ ನಮ್ಮ ಜಿಂಕೆಗಳೆಲ್ಲಾ"

"ಯಾರ್ಯಾರು?"

"ಎಲ್ಲರೂ."

ಇಬ್ಬರೂ ಮುಂದು ಮುಂದಕ್ಕೆ ನಡೆಯಲಾರಂಭಿಸಿದರು.

ಬೇಂಬಿ ತುಂಬಾ ಉಲ್ಲಾಸದಿಂದಿದ್ದ. ಧೈರ್ಯವಾಗಿ ಪಕ್ಕದಲ್ಲಿದ್ದ ಹುಲ್ಲಿನಲ್ಲಿ ಒಮ್ಮೆ ಮೇಲಕ್ಕೆ ನೆಗೆದು ಮತ್ತೆ ಓಡಿಬಂದು ತಾಯಿಯ ಹಿಂದೆ ಸೇರಿಕೊಂಡ.

ಆಕಸ್ಮಾತ್ತಾಗಿ ಪೊದೆಗಳ ಪಕ್ಕದಲ್ಲಿ ಜರ ಜರ ಸದ್ದಾಯಿತು. ಹುಲ್ಲು ದಟ್ಟವಾಗಿ ಸ್ವಲ್ಪ ಎತ್ತರವಾಗಿದ್ದಕಡೆ ಅಲುಗಾಡಿಸಿದಂತೆ ಅನ್ನಿಸಿತು. ನೋವಿನಿಂದ ನರಳಿದಂತಹ ಕ್ಷೀಣದನಿ ಕೇಳಿಸಿತು. ಅಷ್ಟೆ. ಅನಂತರ ಹುಲ್ಲಿನ ಸರ ಸರ ಸದ್ದು ಮಾತ್ರ ಕೇಳಿಸಿತು.

ಕಾಡು ಮುಂಗುಸಿಯೊಂದು ಇಲಿಯೊಂದನ್ನು ಹಿಡಿದುಕೊಂಡು ಇವರ ಪಕ್ಕದಿಂದಲೇ ದರದರನೆ ಎಳೆದು ಕೊಂಡು ಹೋಯಿತು. ದೂರದಲ್ಲಿ ಕುಳಿತು ಸುತ್ತಲೂ ನೋಡಿ, ನಿಶ್ಚಿಂತೆಯಿಂದ ಕುಳಿತು ಆಹಾರವನ್ನು ಫಲಾಹಾರ ಮಾಡತೊಡಗಿತು.

ಬೇಂಬಿ ಗಾಬರಿಯಿಂದ ತಾಯಿಯ ಪಕ್ಕಕ್ಕೆ ಸರಿದು "ಏನದು?" ಎಂದ ಮೆಲ್ಲನೆ.

"ಏನಿಲ್ಲ ಬಿಡು" ಎಂದಳು ಅಮ್ಮ.

ಬೇಂಬಿ ಇನ್ನೂ ನಡುಗುತ್ತಲೇ ಇದ್ದ. "ನೋಡಲ್ಲಿ, ಕಾಣುತ್ತಿಲ್ಲವೇ?" ಎಂದ.

"ಭಯಪಡಬೇಕಾದ್ದೇನಿಲ್ಲ ಮಗೂ. ಮುಂಗುಸಿ ಇಲಿಯನ್ನು ಕೊಂದಿತು ಅಷ್ಟೆ. ಮತ್ತೇನಿಲ್ಲ, ಹೆದರಬೇಡ."

ಆದರೂ ಬೇಂಬಿಗೆ ನಡುಕ ಕಡಿಮೆಯಾಗಲಿಲ್ಲ. ಏನೆಂದು ತಿಳಿಯದ ಹೊಸಭಾವನೆ. ಮನಸಿನ ತುಂಬಾ ತುಂಬಿದ ಕರುಣೆ. ಎದೆಯಲ್ಲಿ ಎಂತಹುದೋ ಕಂಪನ.

ಅವನ ಬಾಯಿಂದ ಬಹಳ ಹೊತ್ತಿನವರೆಗೂ ಮಾತೇ ಹೊರಡಲಿಲ್ಲ. ಕೊನೆಗೆ ಸುಮ್ಮನಿರಲಾರದೆ ಕೇಳಿದ "ಅದು ಇಲಿಯನ್ನು ಯಾಕಮ್ಮಾ ಕೊಂದಿತು ?"

"ಏಕೆ ಅಂತೀಯಾ ?" ಅಮ್ಮ ಒಂದುಕ್ಷಣ ಸುಮ್ಮನಿದ್ದಳು. ನಂತರ ಏನನ್ನೋ ನೆನಪಿಸಿಕೊಂಡಂತೆ "ನಡೆ, ನಡೆ, ಬೇಗ ಬೇಗ ಹೋಗಬೇಕು ನಾವು" ಎಂದು ಅವಸರಪಡಿಸುತ್ತಾ ಮುಂದಕ್ಕೆ ಹೆಜ್ಜೆ ಹಾಕಿತು.

ಸರಸರ ನಡೆಯುತ್ತಿದ್ದ ತಾಯಿಯನ್ನು ಅನುಸರಿಸಲು ಬೇಂಬಿ ಸ್ವಲ್ಪ ಓಡಬೇಕಾಗಿ ಬಂತು ಸಹ.

ಮತ್ತೆ ಅವರು ಮಾಮೂಲಾಗಿ ನಡೆಯಲಾರಂಭಿಸಿದ ಮೇಲೆ ಬೇಂಬಿ ತಾಯಿಯನ್ನು ಒತ್ತಿ ಒತ್ತಿ ಕೇಳಿದ. "ಮತ್ತೆ....ಹಾಗಾದರೆ....ನಾವು ಕೂಡಾ ಯಾವಾಗಲಾದರೂ ಇಲಿಗಳನ್ನು ಕೊಲ್ಲುತ್ತೇವೆಯೇನಮ್ಮಾ ?"

"ಊಹೂಂ" ಎಂದಳು ಅಮ್ಮ.

"ಎಂದಿಗೂನೂ ?"

"ಊಂ ಹೂಂ, ಎಂದಿಗೂ ಇಲ್ಲ."

"ಹಮ್ಮಯ್ಯ" ಎಂದು ನಿರಾಳವಾಗಿ ನಿಟ್ಟುಸಿರುಬಿಟ್ಟು ನಿಂತ ಬೇಂಬಿ "ಏಕಮ್ಮಾ" ಎಂದು ಕೇಳಿದ.

"ಏಕೆಂದರೆ ನಾವು ಯಾವಾಗಲೂ ಯಾರನ್ನೂ ಕೊಲ್ಲುವುದಿಲ್ಲ, ಅದಕ್ಕೆ."

ಬಸರಿಮರದ ಕೆಳಗಿನಿಂದ ನಡೆಯುತ್ತಿದ್ದ ಅವರಿಗೆ ಮೇಲಿನಿಂದ ಗಟ್ಟಿಯಾಗಿ ಕೂಗಾಡುತ್ತಿದ್ದ ಸದ್ದು ಕೇಳಿಸಿತು. ಅಮ್ಮ ಅದನ್ನು ಕಿವಿಯ ಮೇಲೆ

ಹಾರಿಕೊಳ್ಳದೆ ಪ್ರಶಾಂತವಾಗಿ ಮುಂದು ಮುಂದಕ್ಕೆ ನಡೆಯುತ್ತಿದ್ದಳು. ಬೇಂಬಿ ಮಾತ್ರ ಬೆಚ್ಚಿ ಬಿದ್ದು ನಿಂತಲ್ಲಿಯೇ ನಿಂತು ಬಿಟ್ಟ. ಅದೇನಿರಬಹುದು ಎಂದುಕೊಳ್ಳುತ್ತಾ ಮೇಲಕ್ಕೆ ನೋಡಿದ. ತುಟ್ಟ ತುದಿಯಲ್ಲಿನ ಕೊಂಬೆಯ ಮೇಲೊಂದು ಸೊಟ್ಟ ಸೊಟ್ಟನಾಗಿದ್ದ ಗೂಡು. ಅಲ್ಲಿ ಎರಡು ಹದ್ದುಗಳು ಜಗಳವಾಡುತ್ತಿದ್ದುವು.

"ತೊಲಗಾಚೆ. ಈ ಕಡೆ ಬಂದೆ ಅಂದ್ರೆ ನೋಡು. ಪುಂಡಾಕೋರ್..." ಎಂದರಚುತ್ತಿತ್ತು ಒಂದು ಹದ್ದು.

"ಅಬ್ಬಬ್ಬಬ್ಬ, ಏನು ಜೋರು ? ಇಂಥಾದ್ದನ್ನ ಸಾವಿರ ಕಂಡಿದೀನಿ, ಬಾಯಿ ಮುಚ್ಚು" ಅನ್ನುತ್ತಿತ್ತು ಎರಡನೆಯ ಹದ್ದು. "ಮೊದಲು ನನ್ನ ಗೂಡಿನಿಂದ ಹೋಗಾಚೆ. ದರೋಡೆಕೋರನ್ನ ತಂದು ! ಇಲ್ಲಾಂದರೆ ನಿನ್ನ ತಲೆ ಒಡೆದು ಚೂರು ಚೂರು ಮಾಡಿಬಿಟ್ಟೇನು ! ಏನಂದುಕೊಂಡಿದೀಯಾ ನನ್ನ ? ಥೂಥ್, ಎಷ್ಟು ಹೀನವಾದ ಬದುಕು ನಿಂದು !"

ಮರದ ಕೆಳಗೆ ನಿಂತುಬಿಟ್ಟು ಕಣ್ಣು ಬಿಟ್ಟಂತೆ ನೋಡುತ್ತಾ ನಿಂತಿದ್ದ ಬೇಂಬಿಯನ್ನು ನೋಡಿ, ಎರಡನೆಯ ಹದ್ದು ಕೆಳಗಿನ ಕೊಂಬೆಯ ಮೇಲಕ್ಕೆ ಹಾರಿಬಂದು ಗದರಿಸಿತು.

"ಏಯ್ ಹುಡುಗಾ, ಏನ್ನೋಡ್ತಾ ಇದೀಯಾ ? ಇಲ್ಲೇನಾರ ಹಣ್ಣಿನ ಬುಟ್ಟಿ ಇದೆ ಅಂದ್ಕೊಂಡೆಯಾ. ದಯಮಾಡು, ಆಚೆಗೆ."

ಬೇಂಬಿ ಗಾಬರಿಯಿಂದ ಮುಂದಕ್ಕೆ ಜಿಗಿದು ಎರಡೇ ನೆಗೆತದಲ್ಲಿ ತಾಯಿಯನ್ನು ಸೇರಿಕೊಂಡ. ಮಾತನಾಡದೆ ಭಯಪಡುತ್ತಲೇ ಅಮ್ಮನ ಹಿಂದೆ ಹಿಂದೆ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತಾ ನಡೆಯತೊಡಗಿದ. ಬೇಂಬಿ ಸ್ವಲ್ಪಹೊತ್ತು ಹಿಂದೆ ಬಿದ್ದು ಮತ್ತೆ ತನ್ನ ಬಳಿ ಸೇರಿಕೊಂಡಿದ್ದನ್ನು ತಾಯಿ ಗಮನಿಸಿದಂತೆಯೇ ಇರಲಿಲ್ಲ ಬೇಂಬಿ ಮತ್ತೆ ತಾನೇ ಮಾತು ಪ್ರಾರಂಭಿಸಿದ,

"ಅಮ್ಮಾ, ಹೀನವಾದ ಬದುಕು ಅಂದರೇನಮ್ಮಾ ?"

"ನಂಗೊತ್ತಿಲ್ಲ ಕಣಪ್ಪಾ" ಎಂದಳು ಅಮ್ಮ.

ಬೇಂಬಿ ಆಲೋಚಿಸಿ, ಮತ್ತೆ ಕೇಳಿದ.

"ಅವರಿಬ್ಬರೂ ಯಾಕೆ ಹಾಗೆ ಜಗಳವಾಡುತ್ತಿದ್ದಾರಮ್ಮಾ ?"

"ತಿಂಡಿಗಾಗಿ."

"ಹಾಗಾದರೆ ನಮ್ಮ ಜಿಂಕೆಗಳು ಕೂಡಾ ತಿಂಡಿಗಾಗಿ ಜಗಳ ಆಡಿಕೊಳ್ಳ ವೇನು ?"

"ಊಹೂಂ."

"ಏಕೆ ?"

ಏಕೆಂದರೆ ನಮಗೆ ಸಾಕಾಗುವಷ್ಟು ತಿಂಡಿ ಇಲ್ಲಿ ಸಿಗುತ್ತೆ. ಅದಕ್ಕೆ."

ಬೇಂಬಿಗೆ ತಾಯಿ ಹೇಳಿದ್ದು ಪೂರ್ತಿ ಅರ್ಥವಾಗಲಿಲ್ಲ. ಒಂದುಕ್ಷಣ ಸುಮ್ಮನಿದ್ದು ಮತ್ತೆ ಕೇಳಿದ.

"ಅಮ್ಮಾ ?"

"ಏನು ಕಂದಾ ?"

"ನಮ್ಮ ಜಿಂಕೆಗಳು ಎಂದಾದರೂ ಜಗಳ ಆಡುತ್ತವೇನು ?"

"ಇಲ್ಲಪ್ಪಾ ಇಲ್ಲ. ನಮ್ಮಲ್ಲಿ ಆ ಥರಾ ಏನೂ ಆಗೋಲ್ಲ."

ಇಬ್ಬರೂ ಮುಂದಕ್ಕೆ ಹೆಜ್ಜೆ ಹಾಕಿದರು.

ಅವರಿಗೆದುರಾಗಿ—ಕಾಡಿಗೆ ತೂತು ಬಿದ್ದಂತೆ, ಗಿಡಮರಗಳ ಗೋಡೆಗೆ ಕಿಟಕಿಯಿಟ್ಟಂತೆ, ಕಣ್ಣು ಕೋರೈಸುವ ಬೆಳಕಿನಿಂದ ಕೂಡಿದ ಖಾಲಿ ಪ್ರದೇಶ ಕಾಣಿಸಿತು.

ಅಲ್ಲಿಗೆ ದಾರಿ ಮುಗಿದು ಹೋಗಿತ್ತು. ಎದುರಿಗಿದ್ದುದು ವಿಶಾಲವಾದ ಮೈದಾನ. ಸೂರ್ಯಕಾಂತಿ ಕೆಳಗಿಳಿದು ಬಂದಂತೆ ಹೊಳೆಯುತ್ತಿತ್ತು. ಬೇಂಬಿಗೆ ಒಂದೇ ಜಿಗಿತದಲ್ಲಿ ಮೈದಾನದೊಳಕ್ಕೆ ಓಡಬೇಕೆನಿಸಿತು. ಆದರೆ ಅಮ್ಮ ಅವನನ್ನು ಆ ರೀತಿ ಹೋಗಗೊಡದೆ ದಾರಿಗಡ್ಡ ನಿಂತಳು.

"ಅಮ್ಮಾ ಇದೇನು ?" ಎಂದ ಬೇಂಬಿ. ಎದುರಾಗಿ ಕಾಣುತ್ತಿದ್ದ ಪ್ರಕೃತಿ ಸೌಂದರ್ಯ ಅವನನ್ನು ಮುಗ್ಧನನ್ನಾಗಿ ಮಾಡಿತ್ತು.

"ಮೈದಾನ" ಎಂದಳು ಅಮ್ಮ.

"ಮೈದಾನ ಅಂದರೇನು ?"

"ಏನೂಂತ ನೋಡುವಿಯಂತೆ."

ಆಕೆ ಗಂಭೀರವಾಗಿ ನಿಂತಳು. ಜಾಗರೂಕತೆಯಿಂದ ಮೈಯಲ್ಲಾ ಕಣ್ಣಾಗಿ ನೋಡಿದಳು. ಕಿವಿ ನಿಮಿರಿಸಿ, ಮುಖ ಮೇಲೆತ್ತಿ ಏನನ್ನೋ ಅತಿ ಜಾಗ್ರತೆಯಿಂದ ಕೇಳಿದಳು. ಮೂಗನ್ನು ಅಗಲಮಾಡಿ, ಗಾಢವಾಗಿ, ನೀಳ ವಾಗಿ ಉಸಿರೆಳೆದುಕೊಂಡಳು. "ಹುಂ....ಪರವಾಗಿಲ್ಲ" ಅಂದಳು.

ಬೇಂಬಿ ಜಿಗಿಯಲು ಸಿದ್ಧನಾಗಿದ್ದ. ಆದರೆ ಅವು ಮತ್ತೆ ದಾರಿಗಡ್ಡ ಬಂದಳು.

"ನಿಲ್ಲು. ನಾನು ಕರೆದಾಗ ಬರುವಿಯಂತೆ."

ಬೇಂಬಿ ಬುದ್ಧಿವಂತನಂತೆ ನಿಂತಲ್ಲೆ ನಿಂತ.

ಅಮ್ಮ ಹಿಂತಿರುಗಿ ನೋಡಿ,

"ಹಾಂ, ಹಾಗಿರಬೇಕು, ಜಾಣಮರಿ. ಈಗ ನಾನು ಹೇಳುವುದನ್ನು ಗಮನವಿಟ್ಟು ಕೇಳು."

ಅವಳ ಕಂಠದಲ್ಲಿ ಏನೋ ರಹಸ್ಯವಿದ್ದಂತಿತ್ತು. ಭಯ ಕೂಡಾ ಇದೆ ಯೆಂಬುದು ಬೇಂಬಿಗೆ ತಿಳಿದುಹೋಯಿತು. ಮೌನವಾಗಿ ಶ್ರದ್ಧೆಯಿಂದ ಅಮ್ಮ ಹೇಳಿದ್ದನ್ನು ಕೇಳಲಾರಂಭಿಸಿದ.

ಅಮ್ಮ ಹೇಳತೊಡಗಿದಳು, "ಮಗೂ, ಮೈದಾನದಲ್ಲಿ ತಿರುಗಾಡು ವುದು ಅಷ್ಟು ಸುಲಭವಾದ ಕೆಲಸವೇನಲ್ಲ. ಅದರಲ್ಲಿ ತುಂಬಾ ಅಪಾಯಗ ಳಿವೆ. ಮುಂದಕ್ಕೆ ನಿನಗೇ ಎಲ್ಲಾ ತಿಳಿಯುತ್ತೆ. ಸಧ್ಯಕ್ಕೆ ನಾನು ಹೇಳೋ ದನ್ನ ಕೇಳಿ ನೆನಪಿಟ್ಟುಕೋ, ಏನೂ?"

"ಸರಿಯಮ್ಮ" ತಲೆಯಾಡಿಸಿದ ಬೇಂಬಿ.

"ಮುಂಚೆ ನಾನೊಬ್ಬಳೇ ಹೋಗ್ತೀನಿ, ನೀನಿಲ್ಲಿಯೇ ನಿಂತಿರು. ನನ್ನ ಕಡೇನೇ ನೋಡ್ತಾ ಇರು. ನಾನೇನಾದರೂ ಸ್ವಲ್ಪ ಹಿಂದಿರುಗಿ ಓಡಿಬರುತ್ತಿ ರುವಂತೆ ಕಾಣಿಸಿತೋ, ನೀನು ಒಂದು ಕ್ಷಣವೂ ನಿಧಾನ ಮಾಡಬೇಡ, ಒಂದೇ

ಉಸುರಿಗೆ ಬಂದ ದಾರಿಯಲ್ಲಿಯೇ ಕಾಡಿನೊಳಕ್ಕೆ ಓಡಿಹೋಗು. ನಿನ್ನ ಕಾಲಿನಲ್ಲಿ ಎಷ್ಟು ಬಲವಿದೆಯೋ ಅಷ್ಟನ್ನೂ ಉಪಯೋಗಿಸಿ ಓಡಬೇಕು. ಗೊತ್ತಾಯಿತಾ ? ನಾನು ನಿನ್ನ ಹಿಂದೇನೇ ಓಡಿಬಂದು ಸೇರಿಕೋತೀನಿ."

ಬೇಂಬಿ ಆಲೋಚಿಸುತ್ತಿರುವವನಂತೆ ನಿಂತ.

ಅಮ್ಮ ಸಹ ಸ್ವಲ್ಪ ಹೊತ್ತು ಮಾತನಾಡದೆ ನಿಂತಳು. ಮತ್ತೆ ಏನೋ ನೆನಪಾಗಿ,

"ನೋಡಪ್ಪಾ, ನೀನು ಇಲ್ಲಿ ಏನು ನಡೆದರೂ ಲೆಕ್ಕಿಸದೆ ಹಿಂತಿರುಗಿ ಓಡಬೇಕು. ಒಂದುವೇಳೆ ನನಗೇನಾದರೂ ಆಯಿತೂಂತಿಟ್ಟುಕೋ. ನಾನು ಕೆಳಗೆ ಬಿದ್ದೆ ಅಂತಿಟ್ಟುಕೋ. ನೀನೇನೂ ಅದನ್ನು ಕುರಿತು ಆಲೋಚಿಸಬೇಡ. ಏನನ್ನೂ ನೋಡದವನಂತೆ, ನಿನಗೇನೂ ಕೇಳಿಸಲಿಲ್ಲವೆಂಬಂತೆ ಹಿಂತಿರುಗಿ ಕಾಡಿನೊಳಕ್ಕೆ ಓಡಬೇಕು. ಒಂದೇ ಒಂದು ಕ್ಷಣ ಸಹ ನಿಧಾನಿಸಬಾರದು. ಎಲ್ಲಿ, ಹಾಗೆ ಮಾಡ್ತೀನೀಂತ ಆಣೆ ಮಾಡು" ಎಂದಳು.

"ನೀನು ಹೇಳಿದ ಹಾಗೆಯೇ ಮಾಡ್ತೀನಮ್ಮಾ" ಮೆಲುದನಿಯಲ್ಲಿ ಹೇಳಿದ ಬೇಂಬಿ.

"ಹುಂ. ಇನ್ನು ನಾವು ಮೈದಾನದೊಳಕ್ಕೆ ಹೋಗೋಣ."

ಅಮ್ಮ ನಿಧಾನವಾಗಿ ಮುಂದಡಿ ಇಟ್ಟಳು ಹೆಜ್ಜೆಗಳನ್ನು ಎತ್ತಿ ಎತ್ತಿ ಇಡುತ್ತಾ ಮುನ್ನಡೆದಳು. ಬೇಂಬಿ ಎವೆಯಿಕ್ಕದೆ ಅಮ್ಮನ ಕಡೆ ನೋಡುತ್ತಿದ್ದ. ಇದೇಕೆ ಹೀಗೆ ಎಂಬ ಭಯ, ಆತುರ, ಆಲೋಚನೆಗಳಿಂದ ಅವನ ಪುಟ್ಟ ಮನಸ್ಸು ಉಯ್ಯಾಲೆಯಾಡುತ್ತಿತ್ತು. ಅಮ್ಮ ಎಷ್ಟು ಹುಷಾರಾಗಿ ಹೆಜ್ಜೆಯಿಡುತ್ತಿದಾಳೆ, ಕಿವಿ ನಿಮಿರಿಸಿ ಕೇಳುತ್ತಿದಾಳೆ ಎಂದು ಗಮನಿಸಿದ. ಅಮ್ಮ ಶರೀರವನ್ನು ಬಿಗಿಹಿಡಿದು ನಡೆಯುತ್ತಿದ್ದಳು. ತಾಯಿಯಂತೆಯೇ ಬೇಂಬಿ ಸಹ ನರಗಳನ್ನು ಬಿಗಿಹಿಡಿದ. ಯಾವ ಕ್ಷಣದಲ್ಲಾದರೂ ಸರಿ, ಸೂಚನೆ ಬಂದಕೂಡಲೇ ಓಡಲು ಸಿದ್ಧನಾಗಿ ನಿಂತಿದ್ದ. ಆದರೆ ಅಮ್ಮ ಹಿಂತಿರುಗಿ ನೋಡಿ ಪರವಾಗಿಲ್ಲ ಎಂದು ಸೂಚಿಸಿ "ಬಾ ಇಲ್ಲಿ" ಎಂದುಮೆಲ್ಲನೆ ಕೂಗಿದಳು.

ಬೇಂಬಿ ಮುಂದಕ್ಕೆ ಜಿಗಿದ. ಮೈದಾನವನ್ನು ನೋಡಿ ಅವನಿಗುಂಟಾದ ಸಂತೋಷ. ಅವನ ಹೆದರಿಕೆಯನ್ನು ಹಿಂದಕ್ಕಟ್ಟಿತು. ಅಡವಿಯಲ್ಲಿ ಸದಾ

ಹಸಿರಾಗಿ ದಟ್ಟವಾಗಿ ಎಲೆಗಳೇ ಕಾಣಿಸುತ್ತಿದ್ದುವು. ನೀಲಾಕಾಶ ಎಲೆಗಳ ಸಂದಿನಿಂದ ತೂತು ತೂತಾಗಿ ಕಾಣಿಸುತ್ತಿತ್ತು. ಮತ್ತೆ ಇಲ್ಲಿ? ಎತ್ತ ನೋಡಿದರೂ ವಿಶಾಲವಾದ ಆಕಾಶ ಕೆಳಗೆ ಎತ್ತ ನೋಡಿದರೂ ಹಸಿರುಹುಲ್ಲು ಎಷ್ಟು ಚೆನ್ನಾಗಿದೆ ಇಲ್ಲಿ! ಬೇಂಬಿ ಆ ಸೌಂದರ್ಯವನ್ನು ನೋಡಿ ಮುಗ್ಧನಾಗಿಬಿಟ್ಟ. ಅವನ ಹೃದಯದಲ್ಲಿನ ಹರ್ಷ, ಸಂಭ್ರಮ ಕಟ್ಟೆಯೊಡೆದು ಪ್ರವಹಿಸತೊಡಗಿತು.

ಅಡವಿಯಲ್ಲಿ ಎಂದೂ ಸೂರ್ಯನ ದರ್ಶನವೇ ಆಗಿರಲಿಲ್ಲ ಬೇಂಬಿಗೆ. ಎಲೆಗಳ ಮಧ್ಯದಿಂದ ತೂರಿಬರುವ ಬೆಳಕಿನ ಕಡ್ಡಿಗಳೇ ಸೂರ್ಯನೆಂದು ಕೊಂಡಿದ್ದ. ಈಗ ಗೊತ್ತಾಯಿತವನಿಗೆ—ಸೂರ್ಯ ಅಂದರೆ ಏನೂಂತ. ಸೂರ್ಯನ ಕಣ್ಣು ಕೋರೈಸುವ ಕಾಂತಿ, ಮಾತಿನಲ್ಲಿ ಹೇಳಲಾಗದ ಶಕ್ತಿ, ಕಣ್ಣು ಮುಚ್ಚಿಕೊಳ್ಳುವಂತೆ ಮಾಡಿತ್ತು. ಹೃದಯ ತೆರೆದಿಟ್ಟಂತೆ ಆಯಿತು. ಎಳೆಬಿಸಿಲಿನ ಬೆಳಕಿನಲ್ಲಿ ನಿಂತಿದ್ದ ಭೇಂಬಿ. ಆನಂದದಿಂದ ವಿವಶನಾಗಿದ್ದ. ಮತ್ತು ಆವರಿಸಿದಂತಾಗಿ, ತಲೆಯಲ್ಲಿ ಆಲೋಚನೆಗಳೇ ಇಲ್ಲದಾಗಿ ಮೂಕನಾಗಿದ್ದ. ನಿಂತಿದ್ದವನು ನಿಂತಿದ್ದ ಹಾಗೇ ಗಾಳಿಯಲ್ಲಿ ಮೇಲಕ್ಕೆ ಜಿಗಿದ. ಎರಡು ಸಲ, ಮೂರು ಸಲ ಐದು...ಹತ್ತು ಸಲ, ಅವನು ಬೇಕೂಂತ ಹಾಗೆ ಮಾಡುತ್ತಿರಲಿಲ್ಲ. ಜಿಗಿಯಬೇಕೆಂದೇನೂ ಜಿಗಿಯುತ್ತಿರಲಿಲ್ಲ. ಗಾಳಿಯೇ ಅವನನ್ನು ಮೇಲಕ್ಕೆಸೆಯುತ್ತಿತ್ತು. ಆ ಮೈದಾನದಲ್ಲಿ ಹುಲ್ಲಿನ ವಾಸನೆಯಿಂದ ಪರಿಮಳ ಬೀರುತ್ತಿದ್ದ ತಣ್ಣನೆಯ ಗಾಳಿ ರೊಯ್ಯನೆ ಬೀಸುತ್ತಿತ್ತು. ಹಿತವಾದ ಆ ಗಾಳಿಯನ್ನು ತೃಪ್ತಿಯಿಂದ ಹೀರಿದ ಬೇಂಬಿ. ಅವನ ಹುಡುಗಾಟದ ಕುಣಿತವನ್ನೂ, ನಗುತರಿಸುವಂತಹ ವಿಚಿತ್ರವಾದ ಆಟಗಳನ್ನೂ ನೋಡಿ, ಅಮ್ಮನ ಮಾತೃ ಹೃದಯ ಸಂತಸದಿಂದ ತುಂಬಿಹೋಯಿತು. ಆ ಪುಟ್ಟ ಹುಡುಗನ ಆನಂದ ಅವಳಿಗರ್ಥವಾಗಿತ್ತು. ಹುಟ್ಟಿದಾಗಿನಿಂದ ಕತ್ತಲಗವಿಯಂತಿದ್ದ ಅಡವಿಯಲ್ಲಿಯೇ ಇದ್ದಾಗಿತ್ತು. ಎಂದಾದರೂ ಇಂತಹ ಮೈದಾನವನ್ನು ಅವನು ನೋಡಿದ್ದನೇನು ಪಾಪ!

ಅಮ್ಮ ತಲೆ ಬಗ್ಗಿಸಿ ಮುಂದಕ್ಕೆ ಜಿಗಿದಳು. ಬೇಂಬಿ ಕಿರುನಗೆ ನಕ್ಕ. ಮರುಕ್ಷಣದಲ್ಲಿಯೇ ತಾಯಿಯಂತೆಯೇ ತಾನೂ ಜಿಗಿದ. ಎತ್ತರವಾಗಿ ಗರಿಕೆ

ಹುಲ್ಲು ಗರಗರನೆ ಸದ್ದು ಮಾಡಿತು. ಆ ಶಬ್ದ ಕೇಳಿಯೇ ಬೇಂಬಿ ಹೆದರಿದ. ಏನೂ ಮಾಡಲು ತಿಳಿಯದೆ ನಿಂತುಬಿಟ್ಟ. ಈ ಸಲ ಅಮ್ಮ ನಗುತ್ತಾ ಎದುರಾಗಿ ಬಂದಳು.

"ಎಲ್ಲಿ ನನ್ನನ್ನು ಹುಡುಕು ಮತ್ತೆ" ಎಂದು ಮತ್ತೆ ಹುಲ್ಲಿನಲ್ಲಿ ಅಡಗಿ ಮಾಯವಾದಳು ಬೇಂಬಿ ನಿಶ್ಚೇಷ್ಟಿತನಂತೆ ನಿಂತ. ಅರೆ,ಹಠಾತ್ತಾಗಿ ಅಮ್ಮ ಎಲ್ಲಿ ಮಾಯವಾಗಿಬಿಟ್ಟಳು? ಎಲ್ಲಿ ಅಡಗಿಕೊಂಡಿದ್ದಾಳೋ ಏನೋ !

ಅಷ್ಟರಲ್ಲಿ ಅಮ್ಮ ತಲೆಯೆತ್ತಿ ಕಾಣಿಸಿಕೊಂಡಳು. ಸರಸರನೆ ಓಡಿ ಬಂದಳು. ಮುಂದೆಯಿಂದ ಬೇಂಬಿಗೆ ಕಚಗುಳಿಯಿಟ್ಟಳು.

"ಮತ್ತೊಂದು ಸಲ" ಎಂದಳು ಅಮ್ಮ.

ಈ ಸಲ ಬೇಂಬಿ ತಾಯಿಯ ಹಿಂದೆ ಬಿದ್ದ. ಅದು ನಡಿಗೆಯಲ್ಲ, ಗಾಳಿಯಲ್ಲಿ ಜಿಗಿದಾಟ. ಮೇಲಕ್ಕೆ ಹಾರಿ ಕೆಳಕ್ಕೆ ಇಳಿಯುವಾಗಿನ ವಿಚಿತ್ರವಾದ ಅನುಭವ ಅವನನ್ನು ಹುಚ್ಚೆಬ್ಬಿಸಿತ್ತು. ಒಂದುಸಲ ನೆಲವನ್ನು ಮುಟ್ಟಿ ಅಷ್ಟರಲ್ಲಿ ಜುಮ್ಮೆಂದು ಮೇಲಕ್ಕೆ ಹಾರುವುದು. ಸೊಂಪಾಗಿ ಬೆಳೆದ ತೆನೆಗಳು ಕಿವಿಯ ಹಿಂದೆ ಮುಂದೆ ಕಚಗುಳಿ ಇಡುತ್ತಿದ್ದಂತೆಯೇ ಅಲ್ಲಿಂದಿಲ್ಲಿಗೆ ಓಡಿ, ಓಡಿ ಅಲೆದಾಡಿದ.

ಒಂದು ಕಡೆಯಿಂದ ಮತ್ತೊಂದು ಕಡೆಗೆ ನೆಗೆದು ಪಲ್ಟಿ ಹೊಡೆದ.

ಮಗನನ್ನು ನೋಡುತ್ತಾ ಆನಂದದಿಂದ ಮೈಮರೆತಳು ತಾಯಿ.

ಬೇಂಬಿ ಆಟದಲ್ಲಿ ತನ್ನನ್ನು ತಾನೇ ಮರೆತ. ಸ್ವಲ್ಪಹೊತ್ತು ಕುಣಿದಾಡಿ ಮತ್ತೆ ತಾಯಿಯ ಬಳಿಬಂದ. ಸಂತೋಷದಿಂದ, ಆರ್ದ್ರವಾದ, ದೊಡ್ಡ ದೊಡ್ಡ ಕಪ್ಪನೆಯ ಕಣ್ಣುಗಳಿಂದ ತಾಯಿಯ ಕಡೆ ನೋಡಿದ. ಒಬ್ಬರನ್ನೊಬ್ಬರು ಒತ್ತಿಕೊಳ್ಳುತ್ತಾ ಮೆಲ್ಲಮೆಲ್ಲನೆ ಹೆಜ್ಜೆ ಹಾಕಿದರು.

ಬೇಂಬಿಯ ಬೆನ್ನು ಬೆಚ್ಚಗಾಗಿತ್ತು. ಹಾಯಾಗಿ ಬೇಕಾದಷ್ಟು ಗಾಳಿ ಎಳೆದುಕೊಂಡ. ಯಥೇಚ್ಛೆಯಾಗಿ, ಕಟ್ಟುಪಾಡಿಲ್ಲದ ಓಡಾಡುವುದರಲ್ಲಿದ್ದ

ಮಹತ್ತರವಾದ ಆನಂದವನ್ನು ರುಚಿನೋಡಿದ. ತಲೆ ಮೇಲೆತ್ತಿ ನೋಡಿದಾಗ ಪ್ರಶಾಂತವಾದ ನೀಲಾಕಾಶ ಕಾಣುತ್ತಿತ್ತು. ಯಾವಕಡೆ ನೋಡಿದರೂ ಹಸಿರು ಹಾಸಿನಂತೆ ಹುಲ್ಲು, ಇದೇ ಮೊದಲು ಅದನ್ನೆಲ್ಲಾ ನೋಡುತ್ತಿರುವುದು ಅದರಿಂದಾಗಿ ಅವನ ಕಣ್ಣಿಗೆ ಹಬ್ಬದಂತಾಗಿತ್ತು. ಹೆಜ್ಜೆ ಹೆಜ್ಜೆಗೂ ಪ್ರತಿಯೊಂದೂ ಅವನಿಗೆ ವಿಚಿತ್ರವಾಗಿಯೇ ಕಾಣಿಸುತ್ತಿತ್ತು. ಕಾಡಿನಲ್ಲಿದ್ದಂತೆ ಇಲ್ಲಿ ರಹಸ್ಯಗಳೇನೂ ಇರಲಿಲ್ಲ. ಕಾಣದ ಸ್ಥಳವಿಲ್ಲ. ದಿಗಂತದವರೆವಿಗೂ ಪ್ರತಿಯೊಂದೂ, ಹುಲ್ಲುಕಡ್ಡಿ ಸಹ ಕಾಣಿಸುತ್ತಿತ್ತು. ಆ ಎಲೆ ಹಸುರಿನ ಮೈದಾನದಲ್ಲಿ ಅಡಿಗಡಿಗೂ ಹಳದಿ, ಕೆಂಪು ಬಿಳಿಯ ಹೂಗಳನ್ನು ತಂದಿರಿಸಿದಂತೆ ಕಾಣುತ್ತಿದ್ದುವು.

"ಅಮ್ಮಾ, ಅಮ್ಮಾ, ಅಲ್ಲಿ ನೋಡು ಹೂವು ಹಾರಿಹೋಗುತ್ತಿದೆ" ಆಶ್ಚರ್ಯದಿಂದ ಹೇಳಿದ ಬೇಂಬಿ.

"ಅದು ಹೂವಲ್ಲ ಕಣೋ, ಅದನ್ನು ಚಿಟ್ಟೆ ಅಂತಾರೆ."

ಬೇಂಬಿ ಆಶ್ಚರ್ಯದಿಂದ ನೋಡಿದ.

ಚಿಟ್ಟೆ ಹಾರುತ್ತಾ ಹಾರುತ್ತಾ ತಟ್ಟನೆ ಪಕ್ಕಕ್ಕೆ ತಿರುಗಿತು. ಅಲ್ಲಿದ್ದ ಹೂವಿನ ಮೇಲೆ ಕುಳಿತಿತು ಮತ್ತೆ ಮೇಲಕ್ಕೆ ಹಾರಿಹೋಯಿತು.

ಇಂತಹ ಹಾರುವ ಹೂಗಳು ಮೈದಾನದ ತುಂಬಾ ಬಹಳಷ್ಟು ಕಾಣಿಸಿದುವು. ಹಾರಿ ಹಾರಿ ಪಲ್ಟಿಹೊಡೆದು ಹಿಡಿಸಲಾರದ ಸಂತೋಷದಿಂದ ಹೂವುಗಳ ಬಳಿ ಹೋಗಿ ಮುತ್ತಿಟ್ಟು ಮತ್ತೆ ಹಾರಿದುವು. ಹೂವುಗಳ ಮಧ್ಯೆ, ನೋಡಲು ಅವೂ ಹೂವುಗಳಂತೆಯೇ ಕಾಣುತ್ತಿದ್ದುವು, ಹಾರುವ ಹೂವುಗಳು ! ಉಲ್ಲಾಸದ ಹೂವುಗಳು ! ಸದಾ ಇದ್ದಲ್ಲಿಯೇ ಕೊಂಬೆಗಳ ಮೇಲೆ ಕುಳಿತು, ಬೇಸರವಾಗಿ, ರೆಕ್ಕೆಗಳ ಜೋಮು ಒದರಿಕೊಳ್ಳುವಂತೆ, ಸ್ವಲ್ಪ ಹೊತ್ತು ಆಟವಾಡಿ ಬರೋಣವೆಂದು ಹೊರಟಿವೆಯೇನೋ ಅನ್ನಿಸುತ್ತಿತ್ತು. ಒಳ್ಳೆ ಸ್ಥಳ ನೋಡಿ ಕುಳಿತುಕೊಳ್ಳುವಂತೆ ಕುಳಿತು, ಮತ್ತೆ ಅಷ್ಟರಲ್ಲಿಯೇ ಬೇಡವೆನಿಸಿದಂತೆ ಏಳುತ್ತಿದ್ದುವು. ಹಾಗೆ ಹುಡುಕಿಕೊಂಡು ಹೋಗುತ್ತಲೇ ಇದ್ದುವು.

ಜೇಂಬಿಗೆ ಸಮೀಪದಿಂದ ಚಿಟ್ಟೆಗಳನ್ನು ನೋಡಬೇಕೆನಿಸಿತು. ಸ್ವಲ್ಪ ದೂರದಿಂದಲಾದರೂ ನೋಡೋಣವೇ ಎಂದುಕೊಂಡ. ಆದರೆ ಅವು ಒಂದು ಕ್ಷಣವೂ ನಿಂತಕಡೆ ನಿಲ್ಲುತ್ತಿರಲಿಲ್ಲ. ಕ್ಷಣಕ್ಕೊಮ್ಮೆ ಚಕ್ ಚಕ್ ಎಂದು ಹಾರಿ ಹೋಗುತ್ತಿರುವ ಚಿಟ್ಟೆಗಳನ್ನು ನೋಡಿ ಜೇಂಬಿಗೆ ಕಣ್ಣು ತಿರುಗಿದಂತಾಯಿತು.

ಜೇಂಬಿ ನೆಲದಕಡೆ ನೋಡಿದಾಗ ಅಲ್ಲೊಂದು ವಿಚಿತ್ರ ಕಾಣಿಸಿತು. ಅವನು ಹೆಜ್ಜೆಯಿಟ್ಟಂತೆಲ್ಲಾ ಸಣ್ಣ ಸಣ್ಣ ಹುಳುಗಳು ರಂಯನೆ ಮೇಲೇಳುತ್ತಿದ್ದುವು. ನಾಲ್ಕೂ ಮೂಲೆಗಳಿಗೂ ಹಾರಿಹೋಗುತ್ತಿದ್ದುವು. ಹಸಿರು ಮಳೆಯ ತುಂತುರುಗಳಂತೆ ಮತ್ತೆ ನೆಲದಮೇಲೆ ಬಿದ್ದು ಹುಲ್ಲಿನಲ್ಲಿ ಬೆರತು ಹೋಗುತ್ತಿದ್ದುವು.

"ಇದೇನಮ್ಮಾ ? ಎಂದು ಕೇಳಿದ ಜೇಂಬಿ.

"ಎಂಥದೋ ಸಣ್ಣ ಹುಳುಗಳು ಬಿಡಪ್ಪಾ" ಎಂದಳು ಅಮ್ಮ.

"ಅಮ್ಮಾ, ಅಮ್ಮಾ, ಇಲ್ಲಿ ನೋಡಮ್ಮಾ, ಈ ಹುಲ್ಲುಕಡ್ಡಿಗಳು ಎಷ್ಟು ಮೇಲಕ್ಕೆ ಹಾರುತ್ತಿವೆ ಅಂತ."

"ನೀನೊಬ್ಬ...ಅವು ಹುಲ್ಲುಕಡ್ಡಿಗಳಲ್ಲಕಣೋ ಗೊಲ್ಲಭಾಮೆಗಳು."

"ಅವು ಯಾಕೆ ಹಾಗೆ ಹಾರುತ್ತಿವೆ ?"

"ನಮ್ಮನ್ನು ನೋಡಿ ಹೆದರಿವೆ."

"ಅಯ್ಯೋಪಾಪ !" ಎಂದುಕೊಂಡ ಜೇಂಬಿ.

ಹತ್ತಿರದಲ್ಲಿಯೇ ಇದ್ದ ಬಿದುರಿನ ಎಲೆಯ ಮೇಲೆ ಕುಳಿತಿದ್ದ ಗೊಲ್ಲಭಾಮನನ್ನು ನೋಡಿ ಮರ್ಯಾದೆಯಿಂದ ಮಾತನಾಡಿಸಿದ ಜೇಂಬಿ.

"ಅಯ್ಯಾ, ಗೊಲ್ಲಭಾಮ ಅವರೇ, ನೀವು ನಮ್ಮನ್ನು ನೋಡಿ ಸುಮ್ಮನೇ ಹೆದರಿದಂತಿದೆ. ನಾವು ನಿಮಗೇನೂ ಅಪಕಾರ ಮಾಡುವವರಲ್ಲ' ಎಂದ.

"ಓ, ನಾನೇನು ಅಷ್ಟು ಪುಕ್ಕಲ ಅಲ್ಲಬಿಡಿ. ಆದರೆ ನನ್ನ ಹೆಂಡತಿಯು

ಜತೆ ಮಾತನಾಡುತ್ತಾ ಇದ್ದೆ. ನೀವು ಹಠಾತ್ತಾಗಿ ಬಂದದ್ದರಿಂದ ಗಮನಿಸಲಿಲ್ಲ. ಆದ್ದರಿಂದ ಸ್ವಲ್ಪ ಬೆಚ್ಚಿ ಬೀಳುವಂತಾಯಿತು, ಅಷ್ಟೆ" ಎಂದಿತು ಗೊಲ್ಲಭಾಮ.

"ನಿಮಗೆ ತೊಂದರೆ ಕೊಟ್ಟಿದ್ದಕ್ಕೆ ಕ್ಷಮಿಸಿ" ಎಂದ ಬೇಂಬಿ ಪಶ್ಚಾತ್ತಾಪ ದಿಂದ.

"ಪರವಾಗಿಲ್ಲ ಬಿಡಿ, ನೀವಾಗಿದ್ದಕ್ಕೆ ಸರಿಹೋಯಿತು. ಯಾರಿಗ್ಗೊತ್ತು, ಯಾವ ಸಮಯಕ್ಕೆ ಯಾರು ಬರ್ತಾರೇಂತ, ಅಲ್ಲವೇ? ಅದಕ್ಕೇ ನಮ್ಮ ಹುಷಾರಿನಲ್ಲಿ ನಾವಿರಬೇಕು. ಏನಂತೀರ?"

"ಹೂಂ...ಆದರೆ ಈ ಮೈದಾನದೊಳಕ್ಕೆ ನಾನು ಬಂದಿದ್ದು ಇದೇ ಮೊದಲಸಲ, ಆದ್ದರಿಂದ..." ಸ್ನೇಹಿತನೊಬ್ಬನು ಸಿಕ್ಕಿದನೆಂಬ ಸಂಭ್ರಮದಲ್ಲಿ ಬೇಂಬಿ ಏನೋ ಹೇಳಹೊರಟ.

ಗೊಲ್ಲಭಾಮ ಹೆಮ್ಮೆಯಿಂದ ಮೀಸೆ ಹುರಿ ಮಾಡಿಕೊಳ್ಳುತ್ತಾ ಹುಬ್ಬು ಗಂಟಿಕ್ಕಿ "ನಿಮ್ಮ ಮಾತು ಕೇಳುತ್ತಾ ಕುಳಿತುಕೊಳ್ಳೋದಕ್ಕೆ ನನಗೆ ಪುರಸತ್ತು ಇಲ್ಲರೀ. ನಮ್ಮಾಕೆ ನನಗಾಗಿ ಕಾಯುತ್ತಿರುತ್ತಾಳೆ" ಎಂದಿದ್ದೇ 'ಹೂಫ್' ಎಂದು ಹಾರಿಹೋಯಿತು.

ಅದು ಹಾರಿದ ರೀತಿ ಕಂಡು ಬೇಂಬಿಗೆ ವಿಪರೀತ ಆಶ್ಚರ್ಯವಾಯಿತು. ತಾನೂ 'ಹೂಫ್' ಎಂದು ಒಂದು ಜಿಗಿತದಲ್ಲಿ ತಾಯಿಯ ಬಳಿ ಸೇರಿದ.

"ಅಮ್ಮ, ಅಮ್ಮ ನಾನು ಆತನೊಂದಿಗೆ ಮಾತನಾಡಿದೆ ಕಣಮ್ಮ."

"ಯಾರೊಂದಿಗೋ?"

"ಅದೋ, ಆ ಗೊಲ್ಲಭಾಮರೊಂದಿಗೆ. ಆತ ಎಷ್ಟು ಒಳ್ಳೆಯವರೂಂ ತೀಯಾ? ನನಗೆ ತುಂಬಾ ಹಿಡಿಸಿದರು. ಚಂದುಳ್ಳ ಹಸಿರುಬಣ್ಣ, ಅಷ್ಟರಲ್ಲಿ ತೆಳ್ಳಗೆ ಎಲೆಯ ಹಾಗಾಗಿ ಬಿಡ್ತಾರೆ. ಆಚಿನದಲ್ಲಾ ಕಾಣಿಸುತ್ತಿಲ್ವ..."

"ಅದನ್ನ ರೆಕ್ಕೆ ಅಂತಾರೆ. ಬಿಚ್ಚಿಕೊಂಡರೆ ಹಾಗೆ ಕಾಣುತ್ತೆ."

"ಓ ಹಾಗೇನು? ಮತ್ತೆ ಆತನ ಮುಖ ಪುಟ್ಟದಾಗಿ ಎಷ್ಟು ಗಂಭೀರ ವಾಗಿದೇಂತ! ಎಷ್ಟು ಆಳವಾಗಿ ಆಲೋಚಿಸುತ್ತಾನೆ ಗೊತ್ತಾ? ಎಷ್ಟು ಎತ್ತ

ರೆಕ್ಕೆ ತೂರಿದ ಅಂದರೆ, ಅಬ್ಬಾ! ತುಂಬಾ ಕಷ್ಟ, ಹಾಗೆ ಹಾರೋದು. ಹೂಫ್ ಅಂದ, ಹಾರಿಯೇಬಿಟ್ಟೆ."

ಇಬ್ಬರೂ ಇನ್ನೂ ಮುಂದು ಮುಂದಕ್ಕೆ ನಡೆದರು. ಗೊಲ್ಲಭಾಮ ನೊಂದಿಗೆ ಮಾತಾನಾಡಿದ್ದು ಬೇಂಬಿಗೆ ಮಹದಾನಂದವನ್ನುಂಟು ಮಾಡಿತ್ತು. ಅವನು ಮತ್ತೊಬ್ಬರೊಡನೆ ಮಾತನಾಡಿದ್ದು ಅದೇ ಮೊದಲಸಲ. ತಾನೂ ಬಲಶಾಲಿಯಾಗಬೇಕು ಎಂದು ಮನಸಿನಲ್ಲಿಯೇ ಅಂದುಕೊಂಡ.

ಅಮ್ಮನ ಮೊಲೆ ಚೀಪುತ್ತಾ ಅರೆಗಣ್ಣು ಮುಚ್ಚಿ ಪರವಶನಾಗಿದ್ದ ಬೇಂಬಿಗೆ, ಹುಲ್ಲಿನಲ್ಲಿ ಬಿಳಿಯುಬಣ್ಣದ ಹೂವೊಂದು ಕದಲುತ್ತಿದ್ದಂತೆ ಕಾಣಿಸಿತು. ಆದರೆ ಅದು ಹೂವಲ್ಲ, ಬಣ್ಣದ ಚಿಟ್ಟೆ. ಮೆಲ್ಲನೆ ಹತ್ತಿರಹೋದ.

ಚಿಟ್ಟೆ ಎಲೆಯೊಂದರ ಮೇಲೆ ಬಿಡುವಾಗಿ ಕುಳಿತಿತ್ತು. ತನ್ನ ಪುಟಾಣಿ ರೆಕ್ಕೆಗಳನ್ನು ಅಲ್ಲಾಡಿಸುತ್ತಿತ್ತು.

"ಅಯ್ಯಾ, ಮತ್ತೂ ಸ್ವಲ್ಪ ಹೊತ್ತು ಹಾಗೆಯೇ ಕುಳಿತುಕೊಳ್ಳಿ" ಎಂದು ಬೇಡಿಕೊಂಡ ಬೇಂಬಿ.

"ಏಕಪ್ಪಾ, ಚಿಟ್ಟೆಗಳು ಎಂದಾದರೂ ಬಿಡುವಾಗಿ ಕುಳಿತುಕೊಳ್ಳುವುದುಂಟೇನು?" ಎಂದು ಆಶ್ಚರ್ಯ ವ್ಯಕ್ತಪಡಿಸಿತು ಚಿಟ್ಟೆ.

"ನಿಜಾನೇ ಅಂತಿಟ್ಟುಕೊಳ್ಳಿ. ಆದರೂ ನನಗಾಗಿ ಒಂದು ನಿಮಿಷ ಕುಳಿತುಕೊಳ್ಳಿ. ನಿಮ್ಮನ್ನು ಹತ್ತಿರದಿಂದ ನೋಡಬೇಕು ಅಂತ ಆಸೆಯಾಗಿದೆ ನನಗೆ" ಎಂದು ಮತ್ತಷ್ಟು ವಿನಯದಿಂದ ಕೇಳಿಕೊಂಡ ಬೇಂಬಿ.

"ಸರಿ, ನೀವಷ್ಟು ಕೇಳಿಕೋತಾ ಇದ್ದೀರಾದ್ದರಿಂದ ಒಂದು ನಿಮಿಷ ಅಂದರೆ ನಿಮಿಷಾನೇ ಮತ್ತೆ..." ದರ್ಪದಿಂದ ಹೇಳಿತು ಚಿಟ್ಟೆ.

"ಅಬ್ಬಾ, ಎಷ್ಟು ಮುದ್ದಾಗಿದೀರ ಹೂವಿನ ಹಾಗಿದೀರಪ್ಪಾ" ಎಂದ ಬೇಂಬಿ ಸಂಭ್ರಮ ಸಂತೋಷಗಳಿಂದ.

"ಏನಂದೆ? ಹೂವಿನಂತೆಯೇ? ಹೂವಿಗಿಂತಲೂ ನಾವೇ ಚೆನ್ನಾಗಿ ಕಾಣುತ್ತೇವೆಂದು ನಮ್ಮ ಅಭಿಪ್ರಾಯ, ಗೊತ್ತೇನು?" ಎಂದು ರೆಕ್ಕೆಗಳನ್ನು

ಪಟಪಟನೆ ಆಡಿಸಿತು ಚಿಟ್ಟೆ.

ಬೇಂಬಿ ನಾಚಿಕೊಂಡ. ''ಹೌದು, ಹೌದು. ಅಲ್ಲವೇ ಮತ್ತೆ!'' ಎಂದು ಗೊಣಗಿದ. ನಂತರ ''ಕ್ಷಮಿಸಿ. ನಾನೆಂದುಕೊಂಡದ್ದೇನೆಂದರೇ....''

''ನೀವು ಏನೆಂದುಕೊಂಡರೆ ನನಗೇನಂತೆ'' ಎಂದು ಅವನ ಮಾತುಗಳನ್ನು ಅರ್ಧದಲ್ಲಿಯೇ ತಡೆದು, ತೆಳ್ಳನೆಯ ಶರೀರವನ್ನು ವಿಲಾಸದಿಂದ ತೂಗಾಡಿಸುತ್ತಾ, ಮೀಸೆ, ರೆಕ್ಕೆಗಳನ್ನು ಅಲುಗಾಡಿಸುತ್ತಾ ವಯ್ಯಾರ ಮಾಡಿತು ಚಿಟ್ಟೆ.

''ಅಬ್ಬ, ಅಬ್ಬಾ. ಇಷ್ಟು ಚಂದ ಎಲ್ಲೂ ನೋಡಲಿಲ್ಲರೀ ನಾನು, ಬಿಳುಪಾದ ರೆಕ್ಕೆಗಳು, ಎಷ್ಟು ಚೆನ್ನಾಗಿವೆ. ಆಹಾ!''

ಚಿಟ್ಟೆ ಬಿಂಕದಿಂದ ರೆಕ್ಕೆಗಳನ್ನು ಬಿಚ್ಚಿತು. ಹಾಯಿಯಂತೆ ಎರಡೂ ಪಕ್ಕಗಳಿಗೆ ಹಾಸಿತು.

ಬೇಂಬಿ ತಲೆದೂಗುತ್ತಾ ಮೆಚ್ಚಿಕೊಂಡ. ''ಹೂಂ, ನೀವು ಹೇಳಿದ್ದು ನಿಜ. ನೋಡುತ್ತಿದ್ದರೆ ಗೊತ್ತಾಗುತ್ತಿದೆ, ನನಗೆ. ನಿಮ್ಮ ಅಂದ-ಚಂದ ಹುಚ್ಚು ಹೂಗಳಿಗೆಲ್ಲಿಯದು? ಅದೂ ಅಲ್ಲದೆ ನಿಮಗೆ ಹಾರಲೂ ಬರುತ್ತದೆ. ಹೂಗಳಿಗೇನು ಕೈಲಾಗುತ್ತೆ. ಹುಟ್ಟಿದಾಗಿನಿಂದ ಒಂದೇಕಡೆ ಇರಬೇಕು ಅವು...''

ಚಿಟ್ಟೆ ಗರ್ವದಿಂದ ರೆಕ್ಕೆ ಅಲ್ಲಾಡಿಸಿತು. ಸುನಾಯಾಸವಾಗಿ ಹಗುರವಾಗಿ ಮೇಲಕ್ಕೆ ಹಾರಿತು. ಅದು ಹಾಗೆ ಹಾರುತ್ತಿದೆಯೆಂದೇ ತಿಳಿಯಲಿಲ್ಲ ಬೇಂಬಿಗೆ. ಅದು ತನ್ನ ಬಿಳುಪಾದ ಪುಟ್ಟ ರಕ್ಕೆಗಳನ್ನು ತೂಗಾಡಿಸುತ್ತಾ ಗಾಳಿಯಲ್ಲಿ ತೇಲುತ್ತಾ ಬೇಂಬಿಯ ಸುತ್ತಲೂ ಚಕ್ರದಂತೆ ಸುತ್ತಿತು.

"ನೀವು ಅಷ್ಟಾಗಿ ಕೇಳಿಕೊಂಡಿದ್ದರಿಂದ ಇಷ್ಟು ಹೊತ್ತು ಒಂದುಕಡೆ ಕುಳಿತಿದ್ದೀನಿ. ಇಲ್ಲದೆ ಹೋದರೆ ನನಗೆ ಎಷ್ಟು ಕೆಲಸ, ಏನು ಕಥೆ, ಪುರಸತ್ತು ಇರುವುದೇ ಇಲ್ಲ ನನಗೆ" ಎನ್ನುತ್ತಾ ಆಕಾಶದ ಕಡೆ ಹಾರಿಹೋಯಿತು.

ಕಾಡಿನ ಒಳಭಾಗದ ಮೂಲೆಯಲ್ಲಿದೆ ಬೇಂಬಿ ಮತ್ತು ಅಮ್ಮನ ಪೊದೆ

ಮನೆ. ತುಂಬಾ ಪುಟ್ಟದು. ಬೇಂಬಿಗೂ ಅಮ್ಮನಿಗೂ ಸಹ ಸಾಕಾಗದಷ್ಟು ಇಕ್ಕಟ್ಟಾಗಿದೆ ಆ ಮನೆ, ಸೂರು ತುಂಬಾ ಕೆಳಕ್ಕೆ ಇದೆ. ಅಮ್ಮ ನಿಂತರೆ ಕೊಂಬೆಗಳು ತಾಗುತ್ತವೆ. ಆ ಸ್ಥಳದಿಂದ ಹತ್ತುಗಜ ದೂರದಲ್ಲಿ ಜಿಂಕೆಗಳು ಓಡಾಡುವ ಕಾಲುದಾರಿಯೊಂದಿದೆ. ಕಾಲುದಾರಿಗೆ ಅಷ್ಟು ಹತ್ತಿರವಾಗಿದ್ದರೂ ಸರಿ, ಅಲ್ಲೊಂದು ಮನೆ ಇದೆಯೆಂದು ಯಾರಿಗೂ ತಿಳಿಯುವಂತಿಲ್ಲ. ಪೊದೆಗಳ ಕಡೆ ಬಂದು ಹುಡುಕಾಡಿದರೆ ಕಾಣಬಹುದಷ್ಟೆ! ಅಡವಿಯಲ್ಲಿ ಕೊಂಬೆಗಳ, ಎಲೆಗಳ ಮಧ್ಯದಿಂದ ಹೇಗೋ ದಾರಿಮಾಡಿಕೊಂಡು, ಸೂರ್ಯನ ಬೆಳಕಿನ ಕಿರಣ ನೆಲದಮೇಲೆ ಬೀಳುತ್ತಿರುತ್ತದೆ. ಆದರೆ ಇಲ್ಲಿ ಕಳಿಡುಬಳ್ಳಿಗಳಿಂದ ಸಿಕ್ಕುಸಿಕ್ಕಾಗಿ ಹೆಣೆದುಕೊಂಡಿರುವ ಈ ಮನೆಯಲ್ಲಿ ಸೂರ್ಯನ ಬೆಳಕು ಒಂದಿಷ್ಟೂ ಬಾರದು. ಈ ಸ್ಥಳದಲ್ಲಿಯೇ ಬೇಂಬಿ ಹುಟ್ಟಿದ್ದು.

ಬಳಲಿದ ಅಮ್ಮ ಗಾಢನಿದ್ರೆಯಲ್ಲಿದ್ದಳು. ಬೇಂಬಿಗೂ ನಿದ್ರೆ ಬಂದಿತ್ತು. ಆದರ ಆಕಸ್ಮಿಕವಾಗಿ ಎಚ್ಚರವಾಗಿಬಿಟ್ಟಿತು. ತಟ್ಟನೆ ಎದ್ದುನಿಂತ, ಸುತ್ತಲೂ ನೋಡಿದ. ಮನೆಯೆಲ್ಲಾ ಮಸಕಾಗಿ, ಕತ್ತಲು ಕತ್ತಲಾಗಿ–ಸಾಯಂಕಾಲವಾಗಿ ದೆಯೇನೋ ಅನ್ನಿಸುವಂತಿತ್ತು. ಅಡವಿಯೊಳಗಿನಿಂದ ಸಣ್ಣಪುಟ್ಟ ಶಬ್ದಗಳು ಕೇಳಿಬರುತ್ತಿದ್ದುವು. ಎಂದಿನಂತೆಯೇ ಕಿಚಕಿಚ ಶಬ್ದ, ಮರಕುಟುಕನ ಕುಟುಕು ಸದ್ದು, ಕಾಗೆಗಳ ಗೊಗ್ಗರಧ್ವನಿ–ವಿಧವಿಧವಾದ ಧ್ವನಿಗಳೆಲ್ಲಾ ಅಡವಿಯಲ್ಲಿ ಬೆರತು ಗಾಢವಾಗಿ ನಿಶ್ಶಬ್ದದಲ್ಲಿ ಮುಳುಗಿ ಲೀನವಾಗುತ್ತಿತ್ತು. ಅದನ್ನು ಹುಷಾರಾಗಿ ಕೇಳಿಸಿಕೊಂಡರೆ ಪ್ರತಿ ಅಣುವೂ ಶಬ್ದಮಯವಾಗಿ ಕೇಳಿಸುತ್ತಿತ್ತು. ಗುಹೆಯಂತಿದ್ದ ಆ ಮನೆಯಲ್ಲಿ ಸೆಕೆಯಿಂದ ಒದ್ದಾಡುವಂತಾಗಿತ್ತು.

ಬೇಂಬಿ ಬಾಗಿ ಅಮ್ಮನ ಕಿವಿಯಲ್ಲುಸುರಿದ,

"ಅಮ್ಮ ನಿದ್ದೆ ಮಾಡ್ತಿದೀಯಾ ?"

ಇಲ್ಲ, ಅಮ್ಮ ಆಗಲೇ ಎದ್ದಿದ್ದಳು. ಬೇಂಬಿ ಎದ್ದು ನಿಂತಾಗಲೇ ಅವಳಿಗೆ ಎಚ್ಚರವಾಗಿತ್ತು.

"ಅಮ್ಮಾ, ಈಗ ನಾವೇನು ಮಾಡೋಣವಮ್ಮಾ?"

"ಏನೂ ಇಲ್ಲ, ಈಗ ನಾವು ಮಾಡಬೇಕಾದ ಕೆಲಸ ಏನಿಲ್ಲ. ಹಾಯಾಗಿ ಮಲಗಿ ನಿದ್ದೆಮಾಡು."

ಆದರೆ ಬೇಂಬಿಗೆ ನಿದ್ದೆ ಮಾಡಬೇಕೆನಿಸಲಿಲ್ಲ.

"ಊಹೂಂ...ಮೈದಾನದ ಕಡೆ ಹೋಗೋಣಬಾಮ್ಮಾ" ಬೇಂಬಿ ಮುದ್ದುಗರೆದ.

ಅಮ್ಮ ತಲೆಯೆತ್ತಿ ನೋಡಿದಳು. ಆಶ್ಚರ್ಯದಿಂದ ಅವಳ ಕಣ್ಣು ಇಷ್ಟಗಲವಾಯಿತು.

"ಮೈದಾನದ ಕಡೇನೇ? ಈಗಲೇ?" ಅಮ್ಮನ ಕಂಠದಲ್ಲಿ ಭಯ ಸ್ಪಷ್ಟವಾಗಿತ್ತು. "ಈಗ ಇಷ್ಟು ಹೊತ್ತಿನಲ್ಲಿ ಮೈದಾನದ ಕಡೆ ಹೋಗಲೇ ಬಾರದು" ಅಮ್ಮ ದೃಢವಾಗಿ ಒತ್ತಿ ಹೇಳಿದಳು. "ಈಗ ಹೋಗಲೇ ಬಾರದು."

ಏಕಿರಬಹುದು? ಇದರಲ್ಲೇನೋ ರಹಸ್ಯವಿದೆ, ಎಂತಹುದೋ ಪ್ರಮಾದವಿದೆಯೆಂದು ಬೇಂಬಿಗೆ ಅರ್ಥವಾಗಿಹೋಯಿತು. ಪ್ರಮಾದದಲ್ಲಿದ್ದ ಭಯ ಅವನಿಗೆ ತಿಳಿಯದು. ಅದಕ್ಕೆ ಬದಲಾಗಿ ವಿಷಯ ಏನೆಂಬುದನ್ನು ಅಮೂಲಾಗ್ರವಾಗಿ ತಿಳಿದುಕೊಳ್ಳಬೇಕೆಂಬ ಆತುರ ತಲೆಯೆತ್ತಿತು ಅವನಲ್ಲಿ.

"ಈಗೇಕೆ ಹೋಗಬಾರದು ಹೇಳು ಮತ್ತೆ."

"ದೊಡ್ಡವನಾಗುತ್ತಾ ನಿನಗೇ ಎಲ್ಲಾ ಗೊತ್ತಾಗುತ್ತೆ ಬಿಡು."

"ಊಹೂಂ, ಈಗಲೇ ಹೇಳು" ಎಂದು ಗೋಗರೆದ ಬೇಂಬಿ. ಆದರೆ ಅಮ್ಮ ಒಪ್ಪಿಕೊಳ್ಳಲಿಲ್ಲ.

"ಆಮೇಲಾಮೇಲೆ ನಿನಗೇ ಅರ್ಥವಾಗುತ್ತೆ ಬಿಡು. ನೀನಿನ್ನೂ ಚಿಕ್ಕವನು, ಚಿಕ್ಕಮಕ್ಕಳಿಗೆ ಇದೆಲ್ಲಾ ಹೇಳಬಾರದು, ಹೇಳಿದರೂ ಅರ್ಥವಾಗುವುದಿಲ್ಲ. ಹಾಡುಹಗಲು ಈಗ, ಈಗ ಮೈದಾನದ ಕಡೆ ಹೋಗುವುದುಂಟೇ? ಅಬ್ಬಾ!..."

''ಮತ್ತೆ, ನಾವು ಒಂದು ಸಲ ಮೈದಾನದೊಳಕ್ಕೆ ಹೋಗಿದ್ದೆವಲ್ಲಮ್ಮಾ.

''ಹೌದು, ಆದರೆ ಅದು ಬೆಳಗಿನ ಜಾವ.

''ಹಾಗಾದರೆ ಬೆಳಗಿನ ಜಾವ ಮಾತ್ರ ಹೋಗಬೇಕೇನು ?

ಬೇಂಬಿಗೆ ಎಲ್ಲವನ್ನೂ ತಿಳಿದುಕೊಳ್ಳಬೇಕೆನ್ನುವ ಆಸೆ, ಆತುರ. ಅಮ್ಮನಿಗೆ ಅವನು ಕೇಳುವ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳುವ ತಾಳ್ಮೆಯೂ ಸಾಕಷ್ಟಿತ್ತು.

''ಹೌದು, ಬೆಳಗಿನ ಜಾವ ಹೋಗಬಹುದು, ಕತ್ತಲಾದ ಮೇಲೂ ಹೋಗಬಹುದು...''

ಹಾಗಾದರೆ ಹಗಲಿನ ಹೊತ್ತಿನಲ್ಲಿ ಎಂದೂ ಹೋಗಲೇಬಾರದೇನು ? ಯಾವತ್ತಿಗೂ...

ಅಮ್ಮ ಒಂದುಕ್ಷಣ ಆಲೋಚಿಸಿದಳು. ನಮ್ಮವರು ಕೆಲವರು ಹಗಲಿನಲ್ಲಿಯೂ ಅಲ್ಲಿಗೆ ಹೋಗುವುದುಂಟು ಎಂದಳು. ಮತ್ತೆ ಒಂದುಕ್ಷಣ ಆಲೋಚಿಸಿ ಹೇಳಿದಳು. ಆದರೆ ಅದೆಲ್ಲಾ ಈಗಲೇ ನಿನಗೆ ಹೇಳಲಿಕ್ಕಾಗೊಲ್ಲ. ತುಂಬಾ ಚಿಕ್ಕವನು ನೀನು. ಹಗಲು ಅಲ್ಲಿ ಹೋದವರಿಗೆ ತುಂಬಾ ಅಪಾಯಕಾದಿರುತ್ತೆ

ಅಪಾಯ ಅಂದರೆ ?

ನೋಡಿದೆಯಾ ಮತ್ತೆ...ಹೇಳಿದರೆ ನಿನಗೆ ಅರ್ಥವಾಗೋಲ್ಲ.

"ಅಮ್ಮ ಸರಿಯಾಗಿ ಬಿಡಿಸಿ ಹೇಳಿದರೆ ನನಗೆ ಅರ್ಥವಾಗದೇನು ಮಾಡುತ್ತೆ ಎಂದು ಮನಸಿನಲ್ಲಿಯೇ ಅಂದುಕೊಂಡ ಬೇಂಬಿ."

ಮತ್ತೆ ಅಮ್ಮ ತಾನೇ ಹೇಳತೊಡಗಿದಳು,

ನಾವೆಲ್ಲಾ ಹಗಲು ಅಂದರೆ ಕುಣಿದಾಡುತ್ತಿದ್ದೆವು. ಚಿಕ್ಕಂದಿನಲ್ಲಿ ಮಾತ್ರಾ ಸಡಗರ. ಆದರೆ...ಆದರೆ ನಾವು ಹಗಲೆಲ್ಲಾ ಈ ರೀತಿ ಬಚ್ಚಿಟ್ಟುಕೊಂಡೇ ಕಾಲಕಳೆಯುತ್ತೇವೆ. ಕತ್ತಲಾದನಂತರ ಮತ್ತೆ ಬೆಳಗಾಗುವವರೆಗೂ

ಸನ್ನಿವೇಶ. ಎಲ್ಲಿಯಾದರೂ ಓಡಾಡಬಹುದು. ಗೊತ್ತಾಯಿತೇ ?

"ಹೂಂ ..."

ಆದ್ದರಿಂದ ನಾವು ಹಗಲು ಮನೆಯಲ್ಲಿಯೇ ಇರಬೇಕು. ಇಲ್ಲಿದ್ದರೆ ಯಾವ ಭಯವೂ ಇಲ್ಲ. ಇನ್ನು ಮಲಗು ಕಂದಾ ...

ಉಹುಂ ಬೇಂಬಿಯ ಸಂದೇಹಗಳಿನ್ನೂ ತೀರಿರಲಿಲ್ಲ.

"ಇಲ್ಲಿ ಭಯ ಏಕಿಲ್ಲ ಅಮ್ಮಾ ?"

"ಏಕೆಂದರೆ, ಈ ಪೊದೆ, ಎಲೆ, ಬಳ್ಳಿಗಳು ದಟ್ಟವಾಗಿವೆಯಲ್ಲವೇ ? ಆದ್ದರಿಂದ ನಾವು ಯಾರಿಗೂ ಕಾಣಿಸುವುದಿಲ್ಲ. ಅದೂ ಅಲ್ಲದೆ ಕಾಗಣ್ಣ ಮೇಲೆ ಹಾರುತ್ತಾ ಪಹರೆ ಕೊಡುತ್ತಿರುತ್ತಾನೆ. ಇವರೆಲ್ಲಾ ನಮಗೆ ಸ್ನೇಹಿತರೇ. ಎಲ್ಲಕ್ಕಿಂತ ಮುಖ್ಯವಾಗಿ–ನೆಲದಮೇಲೆ ಬಿದ್ದ ಒಣಗಿದ ಎಲೆಗಳಿವೆ ನೋಡು ! ಅವು ನಮಗೆ ಹತ್ತಿರದ ಸ್ನೇಹಿತರು. ಹೊರಗಿನವರು ಯಾರಾದರೂ ಈ ಪ್ರಾಂತದಲ್ಲಿ ಎಲ್ಲಿಯಾದರೂ ಬಚ್ಚಿಟ್ಟುಕೊಳ್ಳಬಹುದು. ಬಳ್ಳಿ, ಪೊದೆಗಳೂ ಅಲುಗಾಡದಂತೆ ಹುಷಾರಾಗಿ ನಡೆದುಬರಬಹುದು. ಪಹರೆ ಕಾಯುತ್ತಿರುವ ಕಾಗಣ್ಣನನ್ನು ಮೋಸಮಾಡಿ ಬರಬಹುದು. ಆದರೆ ಆ ಕಡೆ ನೋಡು. ನೆಲಕಾಣದಂತೆ ತುಂಬಿದೆಯಲ್ಲಾ ಆ ತರಗೆಲೆಗಳು, ಹೋದ ವರ್ಷ ಒಣಗಿಬಿದ್ದ ಎಲೆಗಳು. ಅವುಗಳನ್ನು ಮೋಸ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಕಾಲಿಟ್ಟಕ್ಷಣ ಗಲಗಲ ಎನ್ನುತ್ತವೆ. ಯಾರೋ ಬರುತ್ತಿದ್ದಾರೆಂದು ನಮಗೆ ಗೊತ್ತಾಗಿಬಿಡುತ್ತದೆ."

ಹೋದವರ್ಷ ಅಂದರೇನೋ, ಎಲೆ ಉದುರುವುದು ಅಂದರೇನೋ ಬೇಂಬಿಗೆ ಅರ್ಥವಾಗಲಿಲ್ಲ.

"ಬಾ ಇಲ್ಲಿ, ನನ್ನ ಹತ್ತಿರ ಕುಳಿತುಕೋ, ಎಲ್ಲ ಹೇಳ್ತೀನಿ ಎಂದಳು ಅಮ್ಮ."

ಬೇಂಬಿ ಜಾಣಮರಿಯಂತೆ ಅಮ್ಮನ ಬಳಿಸಾರಿ ಕುಳಿತು ಕೇಳತೊಡಗಿದ. ಅಮ್ಮ ತನ್ನ ಕಥೆ ಪ್ರಾರಂಭಿಸಿದಳು.

"ಇದು ಬೇಸಿಗೆಯ ಕಾಲ ಸೂರ್ಯನ ಪ್ರಕಾಶ ಹೆಚ್ಚಾಗಿರುತ್ತದೆ. ನಮಗೆ ಬೆಚ್ಚಗಿರುತ್ತದೆ. ಅಡವಿಯಲ್ಲಿ ಗಿಡಮರಗಳೆಲ್ಲಾ ಹಸಿರಾಗಿ ಕಳಕಳೆಯಾಗಿರುತ್ತವೆ. ಆದರೆ ಸದಾ ಹೀಗಿರುವುದಿಲ್ಲ. ಸೂರ್ಯನಿಗೆ ಶಕ್ತಿ ಕಡಿಮೆಯಾಗುತ್ತದೆ. ಅವನ ಕಾಂತಿಯಲ್ಲಿ ಬಿಸಿ ಇರುವುದಿಲ್ಲ. ಆಗ ಗಿಡಗಳಲ್ಲಿನ ಎಲೆಗಳ ಬಣ್ಣವೂ ಮಾಸಿ ಹಳದಿ ಬಣ್ಣಕ್ಕೆ ತಿರುಗುತ್ತದೆ. ಎಲೆಗಳು ಬಾಡಿ, ಒಣಗುತ್ತವೆ. ಮೆಲ್ಲಮೆಲ್ಲನೆ ಹಿಡಿತ ಕಳೆದುಕೊಂಡು ನೆಲದಮೇಲೆ ಬೀಳುತ್ತವೆ. ಆಗ ಈಗಿಡಮರಗಳೆಲ್ಲಾ ಬೋಳಾಗಿ ನಿಲ್ಲುತ್ತವೆ."

ಕಪ್ಪಾದ ಬೋಳು ಕೊಂಬೆಗಳನ್ನು ತೂಗಾಡಿಸುತ್ತಾ ದೈನ್ಯದಿಂದ ಆಕಾಶದ ಕಡೆ ನೋಡುತ್ತಾ ನಿಲ್ಲುತ್ತವೆ. ಕೆಳಗೆ ಬಿದ್ದ ಎಲೆಗಳು ನೆಲ ಕಾಣದಂತೆ ತುಂಬಿಕೊಳ್ಳುತ್ತವೆ. ಮುಟ್ಟಿದರೆ ಸಾಕು. ಗರಗರನೆ ಸದ್ದು ಮಾಡುತ್ತವೆ. ಎಲ್ಲಿ, ಹುಷಾರಾಗಿ. ಸದ್ದಾಗದಂತೆ ಅಲ್ಲಿಂದಿಲ್ಲಿಗೆ ನಡೆ ನೋಡೋಣ! ಈ ತರಗೆಲೆಗಳು ಎಷ್ಟು ಒಳ್ಳೆಯವು! ಎಷ್ಟೋ ವಿಶ್ವಾಸದಿಂದ ಬಳಲಿಕೆ ಅನ್ನುವುದೇ ಇಲ್ಲದೆ ಮರೆಯದೆ ತಮ್ಮ ಕರ್ತವ್ಯವನ್ನು ತಾವು ಮಾಡುತ್ತವೆ. ಕೊನೆಗೆ ಬೇಸಿಗೆಯಲ್ಲಿ ಸಹ ಎತ್ತರವಾಗಿ ಬೆಳೆದ ಹುಲ್ಲಿನಲ್ಲಿ ಬಚ್ಚಿಟ್ಟುಕೊಂಡು "ಹುಷಾರಾ ಹುಷಾರ್ ಅನ್ನುತ್ತಲೇ ಇರುತ್ತವೆ."

ಅಮ್ಮನಿಗೆ ಮತ್ತಷ್ಟು ಹತ್ತಿರ ಸರಿದ ಬೇಂಬಿ. ಮೈದಾನದ ವಿಷಯವನ್ನು ಮರೆತುಬಿಟ್ಟ. ಅಮ್ಮನ ಕಥೆ ಕೇಳಿ ದೀರ್ಘಾಲೋಚನೆಯಲ್ಲಿ ಮುಳಗಿದ. ತರಗೆಲೆಗಳ ಮೇಲೆ ಎಲ್ಲಿಲ್ಲದ ಪ್ರೀತಿ, ಅಭಿಮಾನ ಉಕ್ಕಿಬಂತು. ಎಂದೋ ಒಣಗಿ ಉದುರಿದ ಪ್ರಾಣವಿಲ್ಲದ ಎಲೆಗಳು ಇಂದಿಗೂ ಪರೋಪಕಾರ ಮಾಡುತ್ತಿವೆ. ಎಷ್ಟು ಒಳ್ಳೆಯವು ಅವು! ಅಮ್ಮನ ಮಾತಿನಲ್ಲಿ ಆಗಾಗ ಅಪಾಯ ಅಪಾಯ ಅನ್ನುವ ಮಾತು ಕೇಳುತ್ತಿದೆ. ಅದೇನಿರಬಹುದು ? ಆಲೋಚಿಸಿ, ಆಲೋಚಿಸಿ ಸಾಕಾಯಿತು. ಎಲ್ಲೆಲ್ಲೂ ನಿಶ್ಶಬ್ದ. ಅವರ ಪುಟ್ಟ ಪೊದೆ ಮನೆಯ ಮೇಲಿನ ಆಕಾಶದಲ್ಲಿನ ಗಾಳಿ. ಸೂರ್ಯನ ಬಿಸಿಲಿಗೆ ಕಾದು ಬಿಸಿಯನ್ನು ಹೊರಚೆಲ್ಲುತ್ತಿತ್ತು.

ಬೇಂಬಿ ಮತ್ತೆ ಕಣ್ಣು ಮುಚ್ಚಿ ನಿದ್ರಿಸಿದ.

ಒಂದು ದಿನ ಸಾಯಂಕಾಲ ಬೇಂಬಿ ಅಮ್ಮನೊಂದಿಗೆ ಮೈದಾನಕ್ಕೆ ಹೋದ. ಅಲ್ಲಿನ ಪ್ರದೇಶವೆಲ್ಲಾ ತನಗೆ ಚೆನ್ನಾಗಿ ಗೊತ್ತು ಎಂಬ ಹೆಮ್ಮೆ ಅಮ್ಮನಿಗೆ. ನೋಡಬೇಕಾದ್ದನ್ನೆಲ್ಲಾ ನೋಡಿದ್ದೇನೆಂದೂ. ಕೇಳಬೇಕಾದ್ದನ್ನೆಲ್ಲಾ ಕೇಳಿದ್ದೇನೆಂದೂ, ಅಂದುಕೊಂಡಿದ್ದ. ಆದರೆ ಈಗ ನೋಡುತ್ತಾ ಹೋದರೆ ತಾನು ತಿಳಿದುಕೊಳ್ಳಬೇಕಾದ್ದು ಎಷ್ಟೋ ಇದೆಯೆಂದು ಅರ್ಥವಾಗತೊಡಗಿತ್ತು.

ಮೊದ ಮೊದಲು ಎಲ್ಲಾ ಹಿಂದಿನಂತೆಯೇ ಜೂಜಾಟ ಆಡಿದ. ಮೈದಾನದಲ್ಲೆಲ್ಲಾ ಬುಗುರಿಯಂತೆ ತಿರುಗಾಡಿದ. ವಿಶಾಲವಾದ ನೀಲಾಕಶದ ಕೆಳಗೆ ಸ್ವಚ್ಛವಾದ ಗಾಳಿಯಲ್ಲಿ ತಿರುಗಾಡುತ್ತಾ ಪ್ರಪಂಚವನ್ನೇ ಮರೆತ ಅವನು ಅಷ್ಟರಲ್ಲಿ ಅಮ್ಮ ತಟ್ಟನೆ ನಿಂತು ಬಿಟ್ಟದ್ದು ಕಾಣಸಿತು. ನಾನೂ ನಿಂತುಬಿಟ್ಟೆ ಹಾಗೆ ತಟ್ಟನೆ ನಿಂತಿದ್ದರಿಂದ ನಾಲ್ಕು ಕಾಲುಗಳನ್ನೂ ನಾಲ್ಕೂ ಕಡೆಗಳಿಗೆ ಒತ್ತಿ ಹಿಡಿಯಬೇಕಾಯಿತು. ಮತ್ತೆ ಅವುಗಳನ್ನು ಒಟ್ಟುಗೂಡಿಸಬೇಕಾದರೆ ಅಷ್ಟೆತ್ತರ ಹಾರಬೇಕಾಗಿಬಂತು.

ನೋಡಿದರೆ ಅಮ್ಮ ಯಾರೊಂದಿಗೋ ಮಾತನಾಡಿಸುತ್ತಿರುವಂತೆ ಅನ್ನಿಸಿತು. ಆದರೆ ಆ ಎತ್ತರವಾದ ಹುಲ್ಲಿನಲ್ಲಿ ಮತ್ತೊಬ್ಬರು ಯಾರೆಂದು ಕಾಣಸಲಿಲ್ಲ. ಬೇಂಬಿ ಹತ್ತಿರ ಬಂದ. ಅಮ್ಮನ ಪಕ್ಕದಲ್ಲಿನ ಹುಲ್ಲು ಅಲುಗಾಡಿತು. ಅಲ್ಲಿ ಎರಡು ಕಿವಿಗಳು ಕಾಣಿಸಿದವು. ಬೇಂಬಿ ಇದುವರೆವಿಗೂ ಅಷ್ಟು ದೊಡ್ಡ ಕಿವಿಗಳನ್ನು ನೋಡಿದ್ದೇ ಇಲ್ಲ. ಸ್ವಲ್ಪ ಭಯವೆನಿಸಿ ಹಿಂದಕ್ಕೆ ಸರಿದ. ಅಮ್ಮ ಆಗ ಕೂಗಿ ಕರೆದಳು.

ಇಲ್ಲಿ ಬಾ ಪುಟ್ಟಾ ಈತ ನಮಗೆ ಸ್ನೇಹಿತ. ಮೊಲಮಾವಯ್ಯ. ಹತ್ತಿರ ಬಾ. ಏನೂ ಹೆದರಿಕೆಯಿಲ್ಲ. ನಿನ್ನ ನೋಡಬೇಕಂತೆ.

ಬೇಂಬಿ ತಡಮಾಡದೆ ಸರ್ರನೆ ಮುಂದೆ ಬಂದ. ಅಲ್ಲಿ ಎದುರಾಗಿ ಮೊಲಮಾವಯ್ಯ ಕುಳಿತಿದ್ದ. ಆತನ ದೊಡ್ಡ ದೊಡ್ಡ ಕಿವಿಗಳು ಸಾಟಿನಂತೆ ಒಂದೊಂದು ಸಲ ಎದ್ದುನಿಲ್ಲುತ್ತಿದ್ದುವು. ಮರುನಿಮಿಷದಲ್ಲಿ ಸುಸ್ತಾದಂತೆ ಕೆಳಕ್ಕೆ ಇಳಿಬೀಳುತ್ತಿದ್ದವು ಆತನ ಪುಟ್ಟ ಮೂತಿಯ ಬಳಿಯಿದ್ದ ಉದ್ದನೆಯ ಮೀಸೆಗಳು ಸದಾ ಅಲುಗಾಡುತ್ತಿದ್ದವು. ಮೊಲಮಾವಯ್ಯನನ್ನು ನೋಡಿ

ಬೇಂಬಿಗೆ ಆಶ್ಚರ್ಯವಾಯಿತು. ಅಷ್ಟು ದೊಡ್ಡ ದೊಡ್ಡ ಮೀಸೆಗಳಿದ್ದೂ ಆತನಿಗೆ ಗರ್ವವಿದ್ದಂತೆ ಕಾಣಲಿಲ್ಲ. ಮುಖ ತೀಡಿದಂತೆ ಮುದ್ದಾಗಿತ್ತು. ಅಂದವಾದ ದುಂಡುಗಣ್ಣುಗಳು ಹೊಳೆಯುತ್ತಾ ತಳುಕ್, ತಳುಕ್ ಎಂದು ಕದಲಾಡುತ್ತಿದ್ದುವು.

ಮೊಲಮಾವಯ್ಯ ತುಂಬಾ ಒಳ್ಳೆಯವನೂ ಸ್ನೇಹಪಾತ್ರನೂ ಎಂಬು ದರಲ್ಲಿ ಸಂದೇಹವೇ ಇರಲಿಲ್ಲ.

ಏನಪ್ಪಾ, ಪುಟ್ಟಾ, ಚೆನ್ನಾಗಿದ್ದೀಯ? ಎಂದು ಮಾತನಾಡಿಸಿದ ಮೊಲಮಾವ.

ಬೇಂಬಿ ತಲೆದೂಗಿ ಸುಮ್ಮನಾದ. ಆತ ಅಷ್ಟೊಂದು ಪ್ರೀತಿಯಿಂದ ಮಾತನಾಡಿಸಿದರೆ, ತಾನು ಬರೀ ತಲೆ ಅಲ್ಲಾಡಿಸಿ ಏಕೆ ಸುಮ್ಮನಾದೆನೆಂದು ಅವನಿಗೇ ಅರ್ಥವಾಗಲಿಲ್ಲ ಶಿರಃಕಂಪನ ವಿನಯ, ಮರ್ಯಾದೆಗಳನ್ನು ಸೂಚಿ ಸುವುದೆಂಬುದೇನೋ ನಿಜ. ಆದರೆ ಸ್ವಲ್ಪಮಟ್ಟಿಗೆ ಕೀಳರಿಮೆಯನ್ನೂ ವ್ಯಕ್ತ ಪಡಿಸಿತೇನೋ, ಬಹುಶಃ ಅದು ತನ್ನ ಹುಟ್ಟುಗುಣವಿರಬಹುದು.

ನಿನ್ನ ಮಗ ಯುವರಾಜನಂತಿದ್ದಾನೆ ಕಣಮ್ಮಾ ಎಂದು ಮೆಚ್ಚಿ ಕೊಂಡ ಮೊಲಮಾವಯ್ಯ ಕಿವಿಗಳನ್ನೊಮ್ಮೆ ನೆಟ್ಟಗೆ ನಿಲ್ಲಿಸಿ, ಮತ್ತೆ ಇಳಿ ಬಿಡುತ್ತಾ. ಮೊಲಮಾವಯ್ಯ ಕಿವಿ ಅಲುಗಾಡಿಸುವ ರೀತಿ ಬೇಂಬಿಗೆ ಇಷ್ಟ ವಾಗಲಿಲ್ಲ, ಬೇಕಾಗಿ ಹಾಗೆ ಮಾಡುತ್ತಿದ್ದಂತೆ ಅನ್ನಿಸುತ್ತಿತ್ತು.

ಮೊಲಮಾವಯ್ಯ ತನ್ನ ದುಂಡು ಕಣ್ಣುಗಳನ್ನು ಬೇಂಬಿ ಕಡೆ ತಿರುಗಿಸಿ ತದೇಕ ದೃಷ್ಟಿಯಿಂದ ಅವನನ್ನು ನೋಡಿದ. ಆತನ ಮೂಗು, ಬಾಯಿ, ದೊಡ್ಡ ಮೀಸೆ ಎಲ್ಲಾ ಅಪ್ರಯತ್ನವಾಗಿಯೇ ಅಲುಗಾಡತೊಡಗಿತು. ಸೀನು ಬರುತ್ತಿದೆಯೇನೋ, ಅದನ್ನು ತಡೆದುಕೊಳ್ಳುತ್ತಿದ್ದಾನೆಯೇನೋ ಅನ್ನಿಸು ವಂತಿತ್ತು.

ಬೇಂಬಿಗೆ ನಗುಬಂತು, ಪಕಪಕನೆ ನಕ್ಕುಬಿಟ್ಟ ಮೊಲಮಾವ ಸಹ ನಕ್ಕ ಆದರೆ ಅವನ ಕಣ್ಣುಗಳು ಮಾತ್ರ ಯಾವುದನ್ನೋ ಕುರಿತು ದೀರ್ಘವಾಗಿ ಆಲೋಚಿಸುತ್ತಿರುವಂತಿತ್ತು.

"ಮಗ ರತ್ನದ ಹಾಗಿದಾನೆ ಕಣಮ್ಮಾ. ಆಹಾ! ತುಂಬಾ ಅದೃಷ್ಟ ವಂತಳು ನೀನು. ಯುವರಾಜ ಯುವರಾಜನ್ನ ಹೆತ್ತಿದೀಯ..."

ಮೊಲಮಾವ ಮೈಮುರಿದುಕೊಳ್ಳುತ್ತಾ, ಹಿಂದಿನ ಕಾಲುಗಳ ಮೇಲೆ ಕುಳಿತುಕೊಂಡಿದ್ದನ್ನು ನೋಡಿ ಬೇಂಬಿ ಆಶ್ಚರ್ಯಪಟ್ಟ. ಒಂದು ಸಲ ಕಿವಿ ನಿಗರಿಸಿ ಹುಷಾರಾಗಿ ಏನನ್ನೋ ಕೇಳಿದ. ಮೂಗಿನ ತುಂಬಾ ಗಾಳಿ ಎಳೆದು ಕೊಂಡು ವಾಸನೆ ನೋಡಿದ. ಮತ್ತೆ ಸಮಾಧಾನದಿಂದ ನಾಲ್ಕು ಕಾಲಿನ ಮೇಲೆ ನಿಂತ.

"ಹಾಂ, ಇವತ್ತು ಯುವರಾಜನ್ನ ನೋಡಿದ ಹಾಗಾಯಿತು. ತುಂಬಾ ಸಂತೋಷ, ಮನೇಲಿ ತುಂಬಾ ಕೆಲಸ ಇದೆಯಮ್ಮಾ, ಅನಂತರ ಹಿಂದಿರುಗಿ ಕಿವಿಗಳನ್ನು ಬೆನ್ನಿನ ಮೇಲಕ್ಕೆ ಬಾಗಿಸಿ ಸುಯ್ಯೆಂದು ಬಾಣದಂತೆ ಓಡಿದ. "ಹೋಗಿ ಬನ್ನಿ" ಎಂದ ಬೇಂಬಿ. ಅಮ್ಮ ನಕ್ಕಳು.

"ಮೊಲಮಾವ ತುಂಬಾ ಮುಗ್ಧ, ಎಷ್ಟು ವಿನಯ ಒಳ್ಳೆಯತನ ಇದ್ದ ರೇನಂತೆ? ಅವನಿಗೆ ದಿನಗಳೆಯುವುದೇ ಕಷ್ಟವಾಗಿದೆ." ಅಮ್ಮನ ಹೃದಯ ದಲ್ಲಿ ಕರುಣೆ, ದಯೆ ಉಕ್ಕಿ ಬಂತು.

ಮತ್ತೆ ಅಮ್ಮ ಊಟ ಮಾಡುವುದರಲ್ಲಿ ಮಗ್ನಳಾದಳು. ಹಾಗೆಯೇ ತಿರುಗಾಡಿ ಬರೋಣವೆಂದು ಹೊರಟ ಬೇಂಬಿ ಹಳೆಯ ಸ್ನೇಹಿತರಾದರೂ ಕಾಣಸುತ್ತಾರೇನೋ ಎಂದು ಊಹಿಸಿಕೊಳ್ಳುತ್ತಿದ್ದ, ಹಾಗೆ ಎದುರು ನೋಡುವುದೆಂದರೆ ಅವನಿಗೆ ತುಂಬಾ ಇಷ್ಟ. ಅಷ್ಟರಲ್ಲಿ ಎಂತಹುದೋ ಸದ್ದುಅವನ ಕಿವಿಯಲ್ಲಿ ತೂರಿಹೋಯಿತು. ಯಾರದೋ ಹೆಜ್ಜೆಯ ಸಪ್ಪಳ ಬೇಂಬಿ ಸರ್ರನೆ ಹಿಂತಿರುಗಿ ಅಮ್ಮನ ಕಡೆ ನೋಡಿದ. ಅವನಿಗೆ ಏನು ಮಾಡ ಬೇಕೆಂದು ತೋಚಲಿಲ್ಲ, ಆದರೆ ಅಮ್ಮ ಹೆದರಿದಂತೇನೂ ಕಾಣಲಿಲ್ಲ, ಬಗ್ಗಿಸಿದ ತಲೆ ಮೇಲೆತ್ತದೆ ಊಟ ಮಾಡುತ್ತಿದ್ದಳು, ಆ ಹೊಸ ಜೀವಿಗಳು ತನ್ನ ಹಾಗೆಯೇ ಮೇಲಕ್ಕೆ ನೆಗೆಯುತ್ತಾ ಪಲ್ಟಿ ಹೊಡೆಯುತ್ತಿದ್ದುವು. ಬೇಂಬಿಗೆ ಸಂಕೋಚವಾಯಿತು. ಆ ಪ್ರಯತ್ನವಾಗಿಯೇಹಿಂದಕ್ಕೆ ಸರಿ ಯುತ್ತಾ ಓಡಿಹೋಗಲು ಸಿದ್ಧನಾಗಿ ನಿಂತ, ಅವನ ಗಡಿಬಿಡಿ ನೋಡಿ ಅಮ್ಮ ತಲೆ ಎತ್ತಿದಳು.

"ಏನಾಯಿತಪ್ಪಾ ?"

ಬೇಂಬಿಯ ಬಾಯಿಂದ ಮಾತೇ ಹೊರಡಲಿಲ್ಲ. ಹೊಸಜೀವಿಗಳ ಕಡೆ ತೋರಿಸುತ್ತಾ "ಅಲ್ಲಿ...ಅಲ್ಲಿ..."ಎಂದು ಗೊಣಗಿದ. ಅಮ್ಮ ಅವನು ತೋರಿಸಿದ ಕಡೆ ನೋಡಿದಳು.

"ಓಹೋ, ಅವಳೇ ? ನಮ್ಮ ಬಂಧುಗಳೇ ಕಣೋ, ಅವಳಿಗೂ ಒಂದು ಮಗು ಇರಬೇಕು. ಅರೆ... ಇಬ್ಬರು"

ಬೇಂಬಿ ಕಣ್ಣನ್ನು ಇಷ್ಟಗಲ ಮಾಡಿಕೊಂಡು ನೋಡಿದ ದೂರದಲ್ಲಿ ಮೈದಾನ ಕಾಡು ಸೇರುವ ಕಡೆ ತನ್ನ ತಾಯಿಯಂತಹುದೇ ಒಂದು ಜೀವಿ ಕಾಣಿಸಿತು. ಆಶ್ಚರ್ಯ, ಆಕೆಯನ್ನು ತಾನೂ ನೋಡಲೇ ಇಲ್ಲ. ಆಕೆಯ ಪಕ್ಕದಲ್ಲಿ ಆಗಿನಂತೆ ಯಾರೋ ಪಲ್ಟಿ ಹೊಡೆಯುತ್ತಿದ್ದದು ಕಾಣಿಸಿತು. ಎತ್ತರವಾಗಿ ಬೆಳೆದ ಆ ಹುಲ್ಲಿನ ಮಧ್ಯೆ ಅವರು ಸರಿಯಾಗಿ ಕಾಣಿಸುತ್ತಿರಲಿಲ್ಲ. ಕೆಂಪು ಬೆನ್ನು. ಅದರ ಮೇಲೆ ಸಣ್ಣ ಸಣ್ಣ ಚುಕ್ಕಿಗಳು ಮಧ್ಯೆ ಮಧ್ಯೆ ಕಾಣಿಸುತ್ತಿದ್ದವು.

"ನಡೆ ಹೋಗೋಣ, ನಿನಗೆ ಆಟವಾಡಲು ಮಕ್ಕಳ ಜತೆ ಸಿಕ್ಕಿತು" ಎಂದು ಅಮ್ಮ ಅವರಿದ್ದ ಕಡೆ ಹೆಜ್ಜೆ ಹಾಕಿದಳು.

"ಆಟವಾಡಲು ಮಕ್ಕಳ ಜತೆ" ಎಂಬ ಮಾತನ್ನು ಕೇಳಿದ ಕೂಡಲೇ ಬೇಂಬಿಗೆ ಬಾಣದಂತೆ ಓಡಿಹೋಗುವ ಮನಸ್ಸಾದರೂ ಅಮ್ಮ ನಿಧಾನವಾಗಿ, ಹೆಜ್ಜೆ ಹೆಜ್ಜೆಗೂ ಎರಡೂ ಕಡೆ ನೋಡುತ್ತಾ ಹುಷಾರಾಗಿ ನಡೆಯುತ್ತಿದ್ದುದರಿಂದ ತಾನೂ ಮೆಲ್ಲನೇ ನಡೆಯಬೇಕಾಯಿತು. ಅಷ್ಟು ನಿಧಾನವಾಗಿ ನಡೆಯುವುದು ಬೇಂಬಿಗೆ ಇಷ್ಟವಿರಲಿಲ್ಲ. ಬೇಸರವೂ ಆಯಿತು.

ಅಮ್ಮ ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಿದ್ದಳು. ಬೇಂಬಿ ಆಶ್ಚರ್ಯದಿಂದ ಕೇಳುತ್ತಿದ್ದ.

"ಏಕೆ ಕಾಣಿಸಲೇ ಇಲ್ಲ ಯಾಕೋಂತಿದ್ದೆ. ಈಗ ಗೊತ್ತಾಯಿತು– ಅವಳಿಗೂ ಮಗು ಆಗಿರಬಹುದೆಂದು, ನೋಡಿದರೆ ಅವಳಿಗಳಿದ್ದಂತಿದೆ..."

ಏಣಿ ತನ್ನ ಬಂಧುವನ್ನೂ ಅವಳ ಮಗನನ್ನೂ ನೋಡಿ, ತನ್ನ ಮಕ್ಕಳನ್ನು ಕರೆದುಕೊಂಡು ಅವರಿಗೆದುರಾಗಿ ಬಂದಳು.

ತನ್ನ ವಯಸ್ಸಿನ ಮಕ್ಕಳ ಕಡೆ ಬೇಂಬಿ ಕುತೂಹಲದಿಂದ ನೋಡತೊಡಗಿದ. ಏಣಿ ಬೇಂಬಿಯನ್ನು ಮುದ್ದಾಗಿ ಹತ್ತಿರ ಕರೆದಳು.

"ಇದು ನೋಡು ಮಗೂ, ಇವನು ಗೋಬೋ. ಇವಳು ಫಲೀನಾ. ಇವರ ಜತೆ ಆಡಿಕೋ"

ಮೂರು ಜನ ಮಕ್ಕಳೂ ಒಬ್ಬರ ಕಡೆ ಒಬ್ಬರು ರೆಪ್ಪೆ ಹಾಕದೆ ಗೊಂಬೆಗಳಂತೆ ನೋಡುತ್ತಾ ನಿಂತರು. ಫಲಿನಾಳ ಪಕ್ಕದಲ್ಲಿ ಗೋಬೋ ನಿಂತಿದ್ದ. ಅವರಿಗದುರಾಗಿ ಬೇಂಬಿ.

"ಯಾರು ಯಾರೂಂತ ಅವರೇ ತಿಳಕೋತಾರ. ಬಿಡು" ಎಂದಳು ಅಮ್ಮ.

"ನಿನ್ನ ಮಗ ಎಷ್ಟು ಚೆನ್ನಾಗಿದಾನೆ, ಬಲಿಷ್ಠನಾಗಿದಾನೆ. ಚುರುಕಾಗಿಯೂ ಇದಾನೆ" ಎಂದಳು ಏಣಿ.

ಅಮ್ಮ ಸಂತೋಷದಿಂದ ಉಬ್ಬಿಹೋದಳು. ಆದರೆ ಅದನ್ನು ತೋರಿಸಿಕೊಳ್ಳಲಿಲ್ಲ. ಹುಂ ಸುಮಾರಾಗಿದಾನೆ. ಆದರೆ ನಿನಗೆ ಇಬ್ಬರು ಮಕ್ಕಳು"

"ಹೌದು, ನಮ್ಮ ಕೈಯಲ್ಲೇನಿದೆ ಹೇಳು? ನಿನಗೂ ಗೊತ್ತಿಲ್ಲ, ನನಗೆ ಮಕ್ಕಳ ವಿಷಯದಲ್ಲಿ ಎಂದೂ ಕಡಿಮೆ ಅಂತಿಲ್ಲ."

"ನನಗೆ ಇವನೇ ಮೊದಲ ಮಗ" ಎಂದಳು ಅಮ್ಮ.

"ನಿಜ. ಮತ್ತೆ ಮತ್ತೆ ಹೆರುತ್ತೇವೋ ಇಲ್ಲವೋ ಯಾರಿಗೆ ಗೊತ್ತು? ಯಾವಾಗ ಏನಾಗಬಹುದೆಂದು ತಿಳಿಯದ ಪರಿಸ್ಥಿತಿ ನಮ್ಮದು."

ದೊಡ್ಡವರಿಬ್ಬರೂ ಮಾತಿನಲ್ಲಿ ಮುಳುಗಿದರು.

ಮಕ್ಕಳು ಅಲುಗಾಡದೆ, ಕಣ್ಣು ಮಿಟುಕಿಸುತ್ತಾ ನಿಂತಿದ್ದರು. ಸ್ವಲ್ಪ

ಹೊತ್ತು ಒಬ್ಬರೂ ಒಂದು ಮಾತನ್ನೂ ಆಡಲಿಲ್ಲ. ಅಕಸ್ಮಾತ್ತಾಗಿ ಫಲೀನಾ ಚೆಂಡಿನಂತೆ ಮೇಲಕ್ಕೆ ನೆಗೆದು ಪಕ್ಕಕ್ಕೆ ಹಾರಿದಳು. ಹೆಚ್ಚು ಹೊತ್ತು ಆ ರೀತಿ ಸುಮ್ಮನೆ ನಿಂತಿರಲಾಗಲಿಲ್ಲ ಅವಳಿಂದ.

ಬೇಂಬಿಯೂ ಅವಳ ಹಿಂದೆ ಓಡಿದ. ಗೋಬೋ ಅವರನ್ನನುಸರಿಸಿದ. ಒಬ್ಬರನ್ನೊಬ್ಬರು ಅಟ್ಟಿಸಿಕೊಂಡು ಓಡಿದರು. ಆ ಆಟ ಅವರಿಗೆ ಮಜವಾಗಿತ್ತು. ಆಯಾಸವಾದಾಗ ಏದುಸಿರುಬಿಡುತ್ತಾ ನಿಂತರು. ಇನ್ನೇನು ಪರಿಚಯವಾದಂತಾಯಿತು. ಒಬ್ಬರೊಡನೊಬ್ಬರು ಮಾತಿನಲ್ಲಿ ತೊಡಗಿದರು. ಚಿಟ್ಟೆಯೊಂದಿಗೂ, ಗೊಲ್ಲಭಾಮೆಯೊಂದಿಗೂ ತಾನು ಮಾತನಾಡಿದ ವಿಷಯ ಸ್ನೇಹಿತರಿಗೆ ಹೇಳಿಬಿಟ್ಟ ಬೇಂಬಿ.

"ನೀನು ಮಖಮಲ್ ಹುಳದ ಜತೆ ಮಾತನಾಡಿದೆಯಾ?" ಎಂದು ಕೇಳಿದಳು ಫಲೀನಾ.

ಇಲ್ಲ. ಮಖಮಲ್ ಹುಳದ ಜತೆ ಬೇಂಬಿ ಮಾತನಾಡಿಲ್ಲ. ಪರಿಚಯವೇ ಆಗಿಲ್ಲ. ನಿಜ ಹೇಳಬೇಕೆಂದರೆ ಆ ಹುಳುವನ್ನು ಕಣ್ಣಿಂದ ಸಹ ನೋಡಿಲ್ಲ.

"ನಾನು ಆಗಾಗ ಮಖಮಲ್ ಹುಳದೊಂದಿಗೆ ಮಾತನಾಡಿಲ್ಲ, ಪರಿಚಯವೇ ಆಗಿಲ್ಲ. ನಿಜ ಹೇಳಬೇಕೆಂದರೆ ಆ ಹುಳುವನ್ನು ಕಣ್ಣಿಂದ ಸಹ ನೋಡಿಲ್ಲ.

"ನಾನು ಆಗಾಗ ಮಖಮಲ್ ಹುಳದೊಂದಿಗೆ ಮಾತನಾಡುತ್ತಿರುತ್ತೇನೆ" ಎಂದಳು ಫಲೀನಾ, ಹೆಮ್ಮೆಯಿಂದ ಕತ್ತು ಕೊಂಕಿಸಿ.

"ನನ್ನನ್ನು ಹದ್ದು ಬೈದು ಗದ್ದರಿಸಿತು, ಗೊತ್ತಾ?" ಎಂದ ಬೇಂಬಿ.

"ನಿಜವಾಗಿಯೂ?" ಆಶ್ಚರ್ಯದಿಂದ ಕೇಳಿದ ಗೋಬೋ. ನಿಜವಾಗಿಯೂ ಹದ್ದು ನಿನ್ನನ್ನು ಬೈದಿತೇ?"

"ನನ್ನನ್ನು ಮುಳ್ಳುಹಂದಿ ಮೂಗಿನ ಮೇಲೆ ತಿವಿಯಿತು ಎಂದ ಗೋಬೋ.

ನಿಜ ಹೇಳಬೇಕೆಂದರೆ ಗೋಬೋ ತುಂಬಾ ಭೋಳೆ ಸ್ವಭಾವದ ಹುಡುಗ.

"ಇಷ್ಟಕ್ಕೂ ಮುಳ್ಳು ಹಂದಿ ಯಾರು ?" ಕುತೂಹಲದಿಂದ ಕೇಳಿದ ಬೇಂಬಿ.

"ಬಯಾಕ್ ! ಮುಳ್ಳು ಹಂದಿ ಎಂದರೆ ಅಸಹ್ಯ ನನಗೆ. ಮೈತುಂಬಾ ಮುಳ್ಳು. ನೋಡೋಕೆ ಏನೂ ಚೆನ್ನಾಗಿರೋಲ್ಲ. ತುಂಬಾ ಗರ್ವ ಅದಕ್ಕೆ" ಎಂದಳು ಫಲೀನಾ.

"ಪಾಪ ಗರ್ವ ಏನಿಲ್ಲ ಕಣೆ ಯಾರಿಗೂ ಅಪಕಾರ ಮಾಡೋಲ್ಲ" ಎಂದ ಗೋಬೋ.

"ಓಹೋಹೋ ! ಏನು ಹೇಳ್ತಿಯಪ್ಪ, ಪಾಪವಂತೆ ಪಾಪ, ನಿನ್ನನ್ನು ತಿವಿಯಲ್ಲಿಲ್ಲವೇ ?" ಎಂದಳು ಫಲೀನಾ.

ಆ ಮಾತನ್ನು ಗೋಬೋ ಒಪ್ಪಿಕೊಂಡ. "ಹಾದೂಂತಿಟ್ಟುಕೋ. ನಾನು ಮಾತಾಡೂಂತ ಅವನ ಹಿಂದೆ ಹಿಂದೆ ತಿರುಗಿ ಬೇಜಾರು ಪಡಿಸಿದೆ. ಅದಕ್ಕೇ ನನ್ನ ತಳ್ಳಿದ. ನನಗೇನೂ ನೋವಾಗಿಲ್ಲ ಬಿಡು."

ಬೇಂಬಿ ಗೋಬೋ ಕಡೆ ತಿರುಗಿ ಕೇಳಿದ. "ನಿನ್ನ ಜತೆ ಮಾತನಾಡೋಕೆ ಆತನಿಗೇಕಿಷ್ಟವಿಲ್ಲ ?"

ಫಲೀನಾ ಮಧ್ಯೆ ಬಾಯಿಹಾಕಿ "ಆತನಿಗೆ ಯಾರ ಜತೇಲೂ ಮಾತನಾಡೋಕೆ ಇಷ್ಟ ಇರೋಲ್ಲ. ಯಾರಾದರೂ ಹತ್ತಿರ ಬಂದರೆ ಸಾಕು, ಮುಳ್ಳು ಬಿಚ್ಚಿಕೊಂಡು ಚುಚ್ಚಿಬಿಡ್ತಾನೆ. ನಮ್ಮ ಅಮ್ಮ ಹೇಳಿದಳು. ಆತನಿಗೆ ಯಾರ ಜತೇಲೂ ಸ್ನೇಹಾನೆ ಇಲ್ಲವಂತೆ" ಎಂದಳು. "ಹೆದರಿಕೇನೋ" ಎಂದ ಗೋಬೋ. ಆ ಮಾತನ್ನು ಫಲೀನಾ ಒಪ್ಪಿಕೊಳ್ಳಲಿಲ್ಲ. "ಅಮ್ಮ ಹೇಳಿದಾಳೆ ಆತನಿಂದ ದೂರವಾಗಿರೋದೇ ಒಳ್ಳೇದೂಂತ."

ಬೇಂಬಿ ರಹಸ್ಯವಾಗಿ ಗೋಬೋನನ್ನು ಕೇಳಿದ. "ನಿನಗೆ ಅಪಾಯ ಅಂದರೆ ಏನೂಂತ ಗೊತ್ತಾ ?"

ಸ್ವಲ್ಪ ಹೊತ್ತು ಮೂರೂ ಜನ ಮಾತುಬಾರದವರಂತೆ ಒಬ್ಬರ ಕಡೆ ಒಬ್ಬರು ನೋಡುತ್ತಾ ನಿಂತುಬಿಟ್ಟರು.

ಗೋಬೋ ಆಲೋಚಿಸತೊಡಗಿದ. ಅವನಿಗೆ ಅಪಾಯವೆಂದರೇನೆಂದು ತಿಳಿದುಕೊಳ್ಳಬೇಕೆನಿಸಿತು. ಆದರೆ ಹೇಗೆ ?

ಉತ್ತರಕ್ಕಾಗಿ ಎದುರು ನೋಡುತ್ತಿದ್ದ ಬೇಂಬಿ.

"ಅಪಾಯ ಎಂದರೆ ತುಂಬಾ ಕೆಟ್ಟದ್ದು" ಗೋಬೋ ಗಟ್ಟಿಯಾಗಿ ಹೇಳಿದ.

"ಕೆಟ್ಟದ್ದೂ ಅಂತ ನನಗೂ ಗೊತ್ತಪ್ಪ. ಆದರೆ ಅದೇನೂಂತ."
ಮೂವರೂ ನಡುಗಿದರು.

ಅಷ್ಟರಲ್ಲಿ ಫಲೀನಾ ಸಂಭ್ರಮದಿಂದ ಕೂಗಿ ಹೇಳಿದಳು. "ಅಪಾಯ ಅಂದರೆ ನನಗೆ ಅರ್ಥವಾಯಿತು. ಅಪಾಯ ಅಂದರೆ ತಕ್ಷಣ ಓಡಿಹೋಗ ಬೇಕು ಅಂತ" ಎಂದು ಹೇಳಿ ಒಂದೇ ನೆಗೆತದಲ್ಲಿ ಪಕ್ಕಕ್ಕೆ ಧುಮುಕಿದಳು. ಸುಮ್ಮನೇ ಭಯಪಡುತ್ತಾ ನಿಂತುಕೊಳ್ಳಬೇಕೆಂದರೆ ಆಗದು ಫಲೀನಾಗೆ. ಗೋಬೋ. ಬೇಂಬಿ ಅವಳ ಹಿಂದೇನೇ ಓಡಿದರು.

ಆಟ ಮತ್ತೆ ಶುರುವಾಯಿತು.

ರೇಷ್ಮೆಯಂತೆ ಮೃದುವಾದ ಹುಲ್ಲಿನಲ್ಲಿ ಕಣ್ಣಾ ಮುಚ್ಚಾಲೆ ಆಡಿದರು. ಪಲ್ಟಿಹೊಡೆದರು. ಕೆಲವು ಕ್ಷಣಗಳ ಕೆಳಗೆ ಅವರನ್ನು ಹೆದರಿಸಿದ 'ಅಪಾಯದ ವಿಷಯವನ್ನೂ ಮರೆತುಬಿಟ್ಟರು' ಸಾಕಷ್ಟು ಹೊತ್ತು ಆಟವಾಡಿ ಅನಂತರ ಮತ್ತೆ ಹರಟೆ ಶುರುಮಾಡಿದರು.

ಅವರ ತಾಯಂದಿರೂ ಸಹ ವ್ಯರ್ಥಾ ಕಾಲಕಳೆಯದೆ ಹುಲ್ಲನ್ನು ತಿನ್ನುತ್ತಾ ಲೋಕಾಭಿರಾಮಾಯಣ ಮಾತನಾಡುತ್ತಿದ್ದರು.

ಇದ್ದಕ್ಕಿದ್ದಂತೆ ಏಣಿ ತಲೆಯೆತ್ತಿ ಗಟ್ಟಿಯಾಗಿ ಕೂಗಿದಳು. "ಗೋಬೋ' ಫಲೀನಾ, ನಡೀರಿ ಮನೆಗೆ ಹೋಗೋಣ."

ಬೇಂಬಿಯ ಅಮ್ಮ ಸಹ ಮಗನನ್ನು ಕೂಗಿದಳು. "ನಮಗೂ ಹೊತ್ತಾಯಿತು. ನಡೆ ನಾವೂ ಹೋಗೋಣ."

"ಅಮ್ಮಾ. ಇನ್ನೂ ಸ್ವಲ್ಪ ಹೊತ್ತಿರೋಣ. ಒಂದ್ನಿಮಿಷ ಅಂದ್ರೆ ಒಂದ್ನಿಮಿಷ" ಎಂದು ಬೇಡಿಕೊಂಡಳು ಫಲೀನಾ.

"ಇಲ್ಲಿ ಎಷ್ಟು ಚಂದ ಇದೆ, ಸ್ವಲ್ಪ ಹೊತ್ತಿದ್ದು ಹೋದರೆ ಆಗದೇ ನಮ್ಮಾ?" ಎಂದೂ ಗೋಗರೆದ ಬೇಂಬಿ.

"ಇನ್ನೂ ಸ್ವಲ್ಪ ಹೊತ್ತಿರೋಣಮ್ಮಾ" ನಾಚುತ್ತಾ ಹೇಳಿದ ಗೋಬೋ.

ಅಷ್ಟರಲ್ಲಿ ಒಂದು ವಿಚಿತ್ರ ಘಟನೆ ನಡೆಯಿತು. ಅದನ್ನು ಬೇಂಬಿ ಎಂದಿಗೂ ಮರೆಯಲಿಲ್ಲ.

ಅಡವಿಯೊಳಗಿನಿಂದ ಮೇಘಗಳು ಗರ್ಜಿಸಿದಂತಾಯಿತು. ಭೂಮಿ ಕಂಪಿಸಿದಂತೆನಿಸಿ ಮಕ್ಕಳು ಬೆಚ್ಚಿದರು. ಕೊಂಬೆಗಳು ಗರಗರನೆ ಸದ್ದು ಮಾಡಿದುವು. ಎಲೆಗಳು ಗಲಗಲ ಎಂದುವು. ಶಬ್ದಗಳೆಲ್ಲಾ ಬೆರೆತು ವಿಚಿತ್ರವಾಗಿ ಧ್ವನಿಸಿದುವು.

ಬಿರುಗಾಳಿಯಂತೆ ಇಬ್ಬರು ಮೈದಾನದ ಕಡೆ ಧಾವಿಸಿಬಂದರು. ಪೊದೆಗಳ ಮಧ್ಯದಲ್ಲಿ ಅದೃಶ್ಯರಾದರು. ಒಂದು ನಿಮಿಷದ ನಂತರ ಮತ್ತೆ ಅಲ್ಲಿಯೇ ಕಾಣಿಸಿಕೊಂಡರು. ಅಷ್ಟು ದೂರದಲ್ಲಿ ಒಬ್ಬರಿಗೆದುರಾಗಿ ಮತ್ತೊಬ್ಬರು ಶಿಲಾಪ್ರತಿಮೆಗಳಂತೆ ನಿಂತರು.

ಬೇಂಬಿ ಮಾತ್ರ ಮುಗ್ಧನಂತೆ ಅವರ ಕಡೆ ನೋಡುತ್ತಾ ನಿಂತಿದ್ದ. ಅವರೂ ಸಹ ಅಮ್ಮ, ಏಣ ಚಿಕ್ಕಮ್ಮನಂತೆಯೇ ಇದ್ದರು. ಆದರೆ ಇಬ್ಬರ ತಲೆಗಳ ಮೇಲೂ ಕಿರೀಟದಂತಹುದೇನೋ ಇತ್ತು. ಆ ಕಿರೀಟಗಳು ಸಹ ಗಿಡದಕೊಂಬೆಗಳಂತಿದ್ದುವು. ಬೂದುಬಣ್ಣದ ಮಣಿ ಪೋಣಿಸಿದಂತೆ, ಕೊನೆಯಲ್ಲಿ ಬಿಳುಪಾಗಿತ್ತು.

ಬೇಂಬಿ ಮೌನವಾಗಿ ಒಬ್ಬರನಂತರ ಇನ್ನೊಬ್ಬರನ್ನು ನೋಡುತ್ತಿದ್ದ. ಅವರಲ್ಲಿ ಒಬ್ಬರು ಸ್ವಲ್ಪ ಕುಳ್ಳಗಿದ್ದರು. ಆತನ ಕಿರೀಟ ಸಹ ಗಿಡ್ಡಕ್ಕೇ ಇತ್ತು. ಇನ್ನೊಬ್ಬಾತ ಒಳ್ಳೇ ಬೆಟ್ಟದಂತೆ ಅಷ್ಟೆತ್ತರ ಇದ್ದು ಮಹಾಗಂಭೀರವಾಗಿದ್ದ;

ಹೆಮ್ಮೆಯಿಂದ ತಲೆಯೆತ್ತಿ ನೋಡುತ್ತಿದ್ದ. ತಲೆಯ ಮೇಲಿದ್ದ, ಉದ್ದವಾದ ಶಾಖೋಪಶಾಖೆಗಳಿಂದ ಕೂಡಿದ ಕಿರೀಟ, ಬಿಳುಪಾದ ಕೊನೆಗಳಿಂದ ಥಳಥಳನೆ ಹೊಳೆಯುತ್ತಿತ್ತು.

"ಓಹೋ !" ಎಂದಳು ಫಲೀನಾ ಆಶ್ಚರ್ಯದಿಂದ.

"ಓಹೋ" ಎಂದು ಗೋಬೋ ಫಲೀನಾಳನ್ನು ಅನುಕರಿಸಿದಳು.

ಬೇಂಬಿ ನಿಶ್ಶಬ್ದವಾಗಿದ್ದ.

ಆ ದೊಡ್ಡ ಜಿಂಕೆಗಳೆರಡೂ ಮತ್ತೆ ಅಡವಿಯಲ್ಲಿನ ಬೇರೆಬೇರೆ ದಿಕ್ಕುಗಳಿಗೆ ಸಾಗಿಹೋದವು. ಆ ದೊಡ್ಡ ಜಿಂಕೆ ಮಾತ್ರ ಮಕ್ಕಳ ಪಕ್ಕದಲ್ಲಿಯೇ ನಡೆದುಹೋಯಿತು. ಠೀವಿಯಿಂದ ಹೆಜ್ಜೆ ಹಾಕುತ್ತಾ ಕಿರೀಟವನ್ನು ಮೇಲಕ್ಕೆತ್ತಿ, ಯಾರ ಕಡೆಯೂ ನೋಡದೆ ಹೊರಟುಹೋಯಿತು. ಅವು ಅಡವಿಯಲ್ಲಿ ಕಾಣದಾಗುವವರೆಗೂ ಮಕ್ಕಳು ಉಸಿರಾಡುವುದಕ್ಕೂ ಭಯಪಟ್ಟವರಂತೆ ನಿಂತಿದ್ದರು. ಅನಂತರ ಒಬ್ಬರ ಕಡೆಗೊಬ್ಬರು ನೋಡಿಕೊಂಡರು.

ಫಲೀನಾ ಮೊದಲು ಮಾತನಾಡಿದಳು "ಯಾರಾತ ?" ಅವಳ ಕಂಠ ಭಯದಿಂದಾಗಿ ಕಂಪಿಸಿತು.

"ಯಾರಾತ?" ಗೋಬೋ ಫಲೀನಾಳನ್ನು ಅನುಕರಿಸಿದ.

ಬೇಂಬಿ ನಿಶ್ಶಬ್ದವಾಗಿ ನಿಂತಿದ್ದ.

ಏನೆ ಚಿಕ್ಕಮ್ಮ ಉತ್ತರ ಹೇಳಿದಳು. "ಅವರು ಅಪ್ಪಂದಿರು." ಅದಕ್ಕಿಂತ ಹೆಚ್ಚಿಗೇನನ್ನೂ ಹೇಳಲಿಲ್ಲ.

ಅನಂತರ ಅವರು ಬೇರೆಯಾದರು. ಏನೆ ಚಿಕ್ಕಮ್ಮ ಮಕ್ಕಳನ್ನು ಕರೆದುಕೊಂಡು ಹತ್ತಿರದಲ್ಲಿದ್ದ ಪೊದೆಗಳ ಕಡೆ ಹೊರಟುಹೋದಳು. ಅವರ ಮನೆ ಆ ಕಡೆ ಇತ್ತು. ಬೇಂಬಿ, ಅವರ ತಾಯಿ ಮೈದಾನದಲ್ಲಿ ಅಡ್ಡವಾಗಿ ನಡೆದು, ಹಳೆಯ ಬಸರಿಮರದ ಪಕ್ಕದಿಂದ ಕಾಲುದಾರಿಯಲ್ಲಿ ಹೊರಟರು.

ಇಬ್ಬರೂ ಬಹಳ ಹೊತ್ತು ಮೌನವಾಗಿ ನಡೆದರು. ಕೊನೆಗೆ ಬೇಂಬಿ ತಾನೇ ಮಾತನಾಡಿದ "ಅಮ್ಮಾ, ಅವರು ನಮ್ಮನ್ನು ನೋಡಿದರೂಂತೀಯಾ?"

"ಆಹಾ, ಅವರು ಎಲ್ಲವನ್ನೂ ನೋಡುತ್ತಾರೆ" ಎಂದಳು ಅಮ್ಮ.

ಬೇಂಬಿಯ ಮನಸ್ಸಿನಲ್ಲೊಂದು ಆಲೋಚನೆ ಬಂತು. ಅದನ್ನು ತಾಯಿಯ ಬಳಿ ಕೇಳಲೋ ಬೇಡವೋ ಎಂದು ತಟಪಟಾಯಿಸತೊಡಗಿದ. ಕೊನೆಗೆ "ಮತ್ತೆ ಅವರು ಏಕೆ..." ಎಂದು ಗೊಣಗಿದ.

"ಏನಪ್ಪಾ ಅದು, ಏನು ಕೇಳಬೇಕೂಂತಿದೀಯೋ ಕೇಳಣ್ಣಾ" ಎಂದು ಪ್ರೋತ್ಸಾಹಿಸಿದಳು ಅಮ್ಮ.

"ಮತ್ತೆ ಅವರು ನಮ್ಮ ಬಳಿಗೇಕೆ ಬರಲಿಲ್ಲ ?"

"ಬರಲಿಲ್ಲ ನಿಜ. ಆ ಸಮಯ ಬಂದಾಗ, ಬರುತ್ತಾರೆ."

ಅರ್ಧದಲ್ಲಿಯೇ ತಡೆದು ಬೇಂಬಿ "ಅವರು ನಮ್ಮೊಂದಿಗೆ ಮಾತನಾಡಲಿಲ್ಲವೇಕೆ?" ಎಂದ.

"ಈಗ ಅವರು ನಮ್ಮೊಂದಿಗೆ ಮಾತನಾಡುವುದಿಲ್ಲ. ಮಾತನಾಡುವ ಸಮಯ ಬಂದಾಗ, ಬಂದು ಮಾತನಾಡುತ್ತಾರೆ. ಅದುವರೆವಿಗೂ ಸಹನೆಯಿಂದ ಎದುರು ನೋಡಬೇಕು, ಎಲ್ಲಾ ಅವರ ಇಷ್ಟಪ್ರಕಾರವೇ ನಡೆಯುತ್ತದೆ."

"ಮತ್ತೆ ಅಪ್ಪ ನನ್ನೊಂದಿಗೆ ಮಾತನಾಡುತ್ತಾರೇನು ?"

"ತಪ್ಪದೆ ಮಾತನಾಡುತ್ತಾರೆ. ನೀನು ದೊಡ್ಡವನಾದಮೇಲೆ ಅಪ್ಪನ ಬಳಿ ಹೋಗುವ ಅಧಿಕಾರ ಬರುತ್ತದೆ. ಆಗ ನಿನ್ನೊಂದಿಗೆ ಮಾತನಾಡುತ್ತಾರೆ."

ಬೇಂಬಿ ಮೌನವಾಗಿ ತಾಯಿಯ ಪಕ್ಕದಲ್ಲಿಯೇ ನಡೆಯುತ್ತಿದ್ದ. ಎಂದೋ ತಂದೆಯ ಬಳಿಗೆ ಹೋಗುತ್ತೇನೆಂಬ ಊಹೆ ಅವನ ಮನಸ್ಸಿನಲ್ಲಿ ಸಂಚಲವನ್ನುಂಟು ಮಾಡಿತ್ತು.

"ಆತ ಎಷ್ಟು ಚಂದವಾಗಿದ್ದಾರೆ ! ಎಷ್ಟು ಗಂಭೀರ !" ಎಂದ ದೊಡ್ಡ ಜಿಂಕೆಯನ್ನು ನೆನೆಸಿಕೊಳ್ಳುತ್ತಾ.

“ಹಾಗೂ ಸಣ್ಣ ಪುಟ್ಟ ಗಂಡಾಂತರಗಳೆಲ್ಲಾ ಕಳೆದು ಪ್ರಮಾದಗಳನ್ನು ದಾಟಿದರೆ ಕೆಲವು ದಿನಗಳಲ್ಲಿ ನೀನೂ ನಿಮ್ಮ ತಂದೆಯಂತೆಯೇ ದೃಢಕಾಯ ನಾಗುತ್ತೀಯ; ನಿನಗೂ ತಲೆಯ ಮೇಲೆ ಸುಂದರವಾದ ಕಿರೀಟ ಬರುತ್ತದೆ.

ಬೇಂಬಿ ದೀರ್ಘವಾಗಿ ನಿಟ್ಟುಸಿರುಬಿಟ್ಟ. ಸಂತೋಷ ಸಂಭ್ರಮ, ಆಂದೋಲನಗಳಿಂದ ಅವನ ಮನಸು ಕಲಕಿದಂತಾಗಿತ್ತು.

ದಿನಗಳು ಕಳೆಯುತ್ತಿದ್ದವು. ಬೇಂಬಿ ಪ್ರತಿದಿನವೂ ಹೊಸಹೊಸ ವಿಷಯ ಗಳನ್ನು ಕಲಿಯುತ್ತಿದ್ದ. ತಿಳಿದುಕೊಳ್ಳುತ್ತಿದ್ದ. ಇನ್ನೂ ತಿಳಿದುಕೊಳ್ಳ ಬೇಕಾದದ್ದೂ, ಕಲಿಯಬೇಕಾದದ್ದೂ, ಬೇಕಾದಷ್ಟಿತ್ತು.

ಅತಿ ಜಾಗರೂಕತೆಯಿಂದ ಆಲಿಸುವುದನ್ನು ಕಲಿತ ಬೇಂಬಿ. ಪಕ್ಕದಲ್ಲಿ ಕೇಳಿಬರುವ ಶಬ್ದಗಳನ್ನು ಕೇಳುವುದರಲ್ಲಿ ಹೆಚ್ಚಳವೂ ಇಲ್ಲ. ಜಾಣತನವೂ ಇಲ್ಲ. ಬಹಳ ದೂರದಿಂದ ಕೇಳಿಯೂ ಕೇಳಿಸದಂತೆ ಗಾಳಿಯಲ್ಲಿ ತೇಲಿಬರುವ ಶಬ್ದಗಳನ್ನು ಬೇಂಬಿ ಈಗ ಕೇಳಬಲ್ಲವನಾಗಿದ್ದ. ಕಾಡಿನಲ್ಲಿನ ಪ್ರತಿಯೊಂದು ಗಲಗಲ ಧ್ವನಿಯ ಅರ್ಥವೂ ಈಗವನಿಗೆ ತಿಳಿಯುತ್ತಿತ್ತು. ಎಲ್ಲಿಯೋ ದೂರದಲ್ಲಿ ಪೊದೆಯೊಂದರ ಪಕ್ಕದಿಂದ ಕಾಡುಕೋಳಿಯೊಂದು ಓಡಿಹೋದರೆ ಶಬ್ದದಿಂದ ಅದನ್ನು ಗ್ರಹಿಸುತ್ತಿದ್ದ. ರಾತ್ರಿಯ ಸಮಯದಲ್ಲಿ ತಲೆಕೆಳಗಾಗಿ ಹಾರುವ ಕಪಟಗಳು ಜಾರಿಹೋಗುತ್ತಿದ್ದರೆ ಆ ಧ್ವನಿಯನ್ನು ಗುರ್ತಿಸುತ್ತಿದ್ದ. ಕಾಡಿಲಿಗಳು ಪೊದೆಗಳ ಮಧ್ಯೆ ಓಡಾಡಿದರೆ ಅವುಗಳ ಮೃದುವಾದ ಹೆಜ್ಜೆಗಳ ಸದ್ದನ್ನು ಕಂಡುಕೊಳ್ಳುತ್ತಿದ್ದ. ಹಾಗೆ, ಮೈನಾಗಳ ‘ಬಹುಪರಾಕ್’ ಈಗವ ನಿಗೆ ಅರ್ಥವಾಗುತ್ತಿತ್ತು. ಹದ್ದಾಗಲೀ, ರಣಹದ್ದಾಗಲೀ ಕಂಡಾಗ ಕೋಪ ದಿಂದ ಕೂಗಾಡುವುದರಲ್ಲಿನ ವಿಶೇಷವೂ ಈಗವನಿಗೆ ಅರ್ಥವಾಗುತ್ತಿತ್ತು. ಕಾಡು ಪಾರಿವಾಳಗಳ ಕೂವ್ ಕೂವ್, ಕಾಡು ಬಾತುಗಳ ಕ್ವಾ ಕ್ವಾಗಳ ಅರ್ಥ, ಇನ್ನೂ ಎಷ್ಟೋ ವಿಶೇಷಗಳನ್ನು ತಿಳಿದುಕೊಂಡಿದಾನೆ.

ಬರಬರುತ್ತಾ ವಾಸನೆ ಹಿಡಿಯುವುದನ್ನೂ ಕಲಿತಿದಾನೆ. ಮೂಗಿನ ಹೊಳ್ಳೆಗಳನ್ನು ಹಿಗ್ಗಿಸಿ, ಗಾಳಿ ಎಳೆದು ಕೊಂಡು ವಾಸನೆ ಹಿಡಿಯುತ್ತಾನೆ. ಹಸಿರು ಹುಲ್ಲಿನ ಮೇಲಿಂದ ಬೀಸಿಬಂದ ಗಾಳಿಯಿಂದ ‘ಓ ಇದು ನಿಂಬೆ

ಹುಲ್ಲು, ಅದು ಹುಲ್ಲು ಸೇವಂತಿಗೆ, ಇಲ್ಲೇ ಎಲ್ಲೋ ಗೆಳೆಯ ಮೊಲ ಇದ್ದಾನೆ, ಹೀಗೇ ತನ್ನಲ್ಲಿ ತಾನು ಅಂದುಕೊಳ್ಳುತ್ತಿದ್ದ. ಮಣ್ಣಿನ ವಾಸನೆ, ಎಲೆಯ ವಾಸನೆಯನ್ನು ಬೇರೆ ಬೇರೆಯಾಗಿ ಗಮನಿಸಬಲ್ಲವನಾಗಿದ್ದಾನೆ. ವಾಸನೆಯಿಂದ ಕಾಡುಬೆಕ್ಕು ಬರುತ್ತಿದೆಯೆಂದೂ, ನರಿ ಬೇಟೆಗೆ ಹೊರಟಿದೆಯೆಂದೂ ತಿಳಿದುಕೊಳ್ಳಬಲ್ಲ. ಏಣಿ ಚಿಕ್ಕಮ್ಮ, ಅವಳ ಮಕ್ಕಳು ಕಣ್ಣಿಗೆ ಕಾಣುವ ಮೊದಲೇ ಅವರು ಬರುತ್ತಿರುವುದನ್ನು ಕಂಡುಕೊಳ್ಳುತ್ತಿದ್ದ.

ಬೇಂಬಿಗೆ ರಾತ್ರಿ ಸಮಯಗಳೆಂದರೆ ಈಗ ತುಂಬಾ ಇಷ್ಟ. ಹಾಡು ಹಗಲಿನಲ್ಲಿ ತಿರುಗಾಡಲು ಹೋಗಬೇಕೆಂಬ ಬಯಕೆ ಈಗಿಲ್ಲವೇ ಇಲ್ಲ. ಹಗಲೆಲ್ಲಾ ಪೊದೆಮನೆಯಲ್ಲಿ, ಆ ಮಸಕು ಬೆಳಕಿನಲ್ಲಿ ಅಮ್ಮನನ್ನು ಒತ್ತಿಕೊಂಡು, ಬೆಚ್ಚಗ ಮಲಗಿ ನಿದ್ದೆ ಮಾಡುತ್ತಾನೆ. ಆಗಾಗ ಎಚ್ಚೆತ್ತು ಜಾಗರೂಕತೆಯಿಂದ ಕಿವಿಗೊಟ್ಟು ಕೇಳುತ್ತಾನೆ. ವಾಸನೆ ಹೀರುತ್ತಾನೆ. ಸುತ್ತಲೂ ಏನು ನಡೆಯುತ್ತಿದೆಯೆಂದು ತಿಳಿದುಕೊಳ್ಳುವ ಸಲುವಾಗಿ ಹಾಗೆ ಮಾಡುತ್ತಾನೆ. ಎಲ್ಲಾ ಮಾಮೂಲಾಗಿಯೇ ಇರುತ್ತದೆ. ಗುಬ್ಬಚ್ಚಿ ಸುಮ್ಮನೇ ಕಿಚ ಕಿಚ ಎನ್ನುತ್ತಿರುತ್ತದೆ. ಬಾಯಿಮುಚ್ಚಿಕೊಂಡು ಕುಳಿತುಕೊಳ್ಳಲಾರದ ಸೊಳ್ಳೆಗಳು ಗುಂಯನ್ನುತ್ತಿರುತ್ತವೆ, ಪಾರಿವಾಳಗಳು ಮೃದುವಾಗಿ ಶಬ್ದ ಮಾಡುತ್ತಿರುತ್ತವೆ. ಅವುಗಳೊಂದಿಗೆ ತನಗೇನು ಕೆಲಸ ? ಮತ್ತೆ ಕಣ್ಣು ಮುಚ್ಚಿ ಮಲಗುತ್ತಾನೆ.

ಎಲ್ಲಕಿಂತ ಹೆಚ್ಚಾಗಿ ಬೇಂಬಿಗೆ ರಾತ್ರಿಯ ಸಮಯ ಇಷ್ಟವಾಗಿದ್ದು ಮತ್ತೊಂದು ಕಾರಣದಿಂದ. ಆಗ ಧೈರ್ಯವಾಗಿ ಹಾಯಾಗಿ ಓಡಾಡಬಹುದು. ಹಾಗೇಂತ ಹುಷಾರಾಗಿರುವುದನ್ನು ಮರೆಯಲು ಸಾಧ್ಯವೇ ಆದರೆ ಹಗಲಿಗೆ ಹೋಲಿಸಿದರೆ ರಾತ್ರಿ ವಾಸಿಯಲ್ಲವೇ ? ಸ್ವೇಚ್ಛೆಯಾಗಿ ಓಡಾಡಬಹುದು. ಸ್ನೇಹಿತರೊಡನೆ ಆಡಬಹುದು. ನಿಶ್ಶಬ್ದವಾಗಿರುತ್ತದೆ ಸಹ.

ರಾತ್ರಿಯ ವೇಳೆಯಲ್ಲಿಯೂ ಕೆಲವು ಕಂಠಗಳು ಕೇಳಿಸುತ್ತಲೇ ಇರುತ್ತವೆ. ಅದರ ವಿಷಯ ಬೇರೆ.

ಬೇಂಬಿಗೆ ಬಿಳಿಯ ಗೂಬೆ ಎಂದರೆ ತುಂಬಾ ಇಷ್ಟ. ಅದು ಶಬ್ದ ಮಾಡದೆ ಸುಲಭವಾಗಿ ಹಾರಿಹೋಗುತ್ತದೆ. ಅದರ ಮುಖದಲ್ಲಿ ಎಷ್ಟೋ ಭಾವನೆಗಳು ಕಾಣಸುತ್ತವೆ.

ದೊಡ್ಡ ದೊಡ್ಡ ಕಣ್ಣುಗಳಿಂದ ಅದು ತೀಕ್ಷ್ಣವಾಗಿ ಧೈರ್ಯವಾಗಿ ನೋಡುವುದನ್ನು ಕಂಡು ಅವನಿಗೆ ಆಶ್ಚರ್ಯವಾಗುತ್ತಿತ್ತು. ಅದು ಅಮ್ಮನೊಂದಿಗಾಗಲೀ ಮಾತನಾಡುತ್ತಿದ್ದರೆ ಕೇಳುವುದೆಂದರೆ ಬೇಂಬಿಗೆ ತುಂಬಾ ಇಷ್ಟ ಆದರೆ ತೀಕ್ಷ್ಣವಾದ ಅದರ ನೋಟವನ್ನು ಎದುರಿಸಲು ನಾಚಿ ತಲೆಬಾಗಿ ಒಂದು ಪಕ್ಕದಲ್ಲಿ ನಿಲ್ಲುತ್ತಾನೆ. ದೊಡ್ಡವರ ಮಾತುಗಳು ಅವನಿಗೆ ಪೂರಾ ಅರ್ಥವಾಗದು. ಹಾಗೆಂದು ಕೇಳದೆ ಇರಲೂ ಆರ.

“ಘೀ...ಆ...ಆ, ಘೀ...ಆ...ಆ” ಎಂದು ಬಿಳಿಯ ಗೂಬೆ ಹಾಡಲಾರಂಭಿಸುತ್ತದೆ. ಗೀಜಗ, ಹುಂಜ ಮೊದಲಾದ ಸ್ನೇಹಿತರ ಹಾಡಿನಂತಿರುವುದಿಲ್ಲ ಅದು. ಆದರೂ ಅದು ಬೇಂಬಿಗೆ ತುಂಬಾ ಇಷ್ಟ, ಅದರಲ್ಲಿ ಎಂತಹುದೋ ಗುಟ್ಟಾದ ಭಾವನೆ ಅಡಗಿದೆಯೆನಿಸುತ್ತದೆ. ತತ್ವಚಿಂತನೆ, ವ್ಯಾಕುಲ ನಿಗೂಢವಾಗಿದ್ದಂತೆನಿಸುತ್ತದೆ.

ಅದಲ್ಲದೆ ಚಿಕ್ಕ ಗೂಬೆಯೊಂದಿದೆ. ಅದು ತುಂಬಾ ಮೋಸಗಾರ. ಎಲ್ಲಾ ವಿಷಯಗಳೂ ಅದಕ್ಕೇ ಬೇಕು. ಎಲ್ಲಾದರಲ್ಲೂ ತಲೆ ಹಾಕೋದು. ಬಡಾಯಿ ಕೊಚ್ಚಿಕೊಳ್ಳೋದು. ಅಬ್ಬಾ, ಏನು ಗರ್ವಾಂತ ಅದಕ್ಕೆ.

“ಪೂ...ಇಕ್, ಊ ಇಕ್” ಎಂದು ಕಿವಿಗಡಚಿಕ್ಕುವಂತೆ ಭಯಂಕರವಾಗಿ ಕೂಗುತ್ತದೆ. ಅದನ್ನ ಕೇಳಿದರೆ ಏನೋ ದೊಡ್ಡ ಅಪಾಯ ಸಂಭವಿಸಿದಂತೆನಿಸುತ್ತದೆ. ಆದರೆ ಅದೆಲ್ಲಾ ಬರಿದೇ. ತನ್ನ ಕೂಗಿನಿಂದಾಗಿ ಯಾರಾದರೂ ಹೆದರಿದರೆ ಅದಕ್ಕೆ ಹಿಡಿಸಲಾಗದ ಸಂತೋಷ. ಅದು “ಊ ಇಕ್” ಎಂದರೆ ಸಾಕು, ಒಂದು ನಿಮಿಷ ಅಡವಿಯೆಲ್ಲಾ ಪ್ರತಿಧ್ವನಿಸುತ್ತದೆ.

ತನ್ನ ಸುತ್ತಮುತ್ತಿನವರು ಭಯಪಟ್ಟರೂ, ಏನಾದರೂ ಅಪಾಯ ಒದಗಿಬಂದಿತೇನೋ ಎಂದು ಗಾಬರಿಪಟ್ಟರೂ ಸಾಕು, ಆ ಗೂಬೆಗೆ ಸಂತೋಷವಾಗುತ್ತೆ ಅಂತ ಬೇಂಬಿಗೆ ಬೇಗನೇ ತಿಳಿದುಹೋಯಿತು. ಆಗಿನಿಂದ ಅವನು

ಅದರ ಕೂಗು ಕೇಳಿದಾಗಲೆಲ್ಲಾ ಗಾಬರಿಪಟ್ಟಂತೆ ನಟಿಸಿ, ಅದರ ಕ್ಷೇಮಸಮಾಚಾರ ವಿಚಾರಿಸಿಕೊಳ್ಳುತ್ತಿದ್ದ "ಅಯ್ಯೋ ನಿಮಗೇನೂ ಅಪಾಯವಾಗಲಿಲ್ಲವಷ್ಟೇ" ಎಂದು. ಒಂದೊಂದು ಸಲ ಹೆದರಿದಂತೆ ನಟಿಸುತ್ತಿದ್ದ "ಅಬ್ಬ ! ಎಷ್ಟು ಹೆದರಿಸಿಬಿಟ್ಟಿರಪ್ಪ ನನ್ನ" ಅಂತ.

ಆಗ ಗೂಬೆಯ ಸಂತೋಷಕ್ಕೆ ಮೇರೆಯೇ ಇರುತ್ತಿರಲಿಲ್ಲ.

"ನನ್ನ ಕೂಗು ಅಷ್ಟು ಭಯಂಕರವಾಗಿರುತ್ತದೆಯೇನು?" ಎಂದು ಕಂಕುಳನ್ನು ಅಲ್ಲಾಡಿಸುತ್ತಾ ಬೀಳುತ್ತಿತ್ತು. ರೆಕ್ಕೆ ಅಗಲಿಸಿ, ಮೈ ಉಬ್ಬಿಸಿ ದುಂಡಗೆ ಚೆಂಡಿನಂತಾಗುತ್ತಿತ್ತು.

ಒಂದುಸಲ ಗುಡುಗು ಮಿಂಚಿನೊಂದಿಗೆ ಭಾರಿ ಮಳೆ ಬಂದಿತ್ತು. ಆಗ ಹಗಲಿನ ಸಮಯವಾದ್ದರಿಂದ ಬೇಂಬಿ ಅವರ ಪುಟ್ಟ ಪೊದೆಮನೆಯಲ್ಲಿಯೇ ಇದ್ದ. ಆ ಮನೆ ಕತ್ತಲಗವಿಯಂತಾಗಿತ್ತು. ಬೇಂಬಿ ತುಂಬಾ ಹೆದರಿಬಿಟ್ಟಿದ್ದ. ಈ ಕತ್ತಲೆಲ್ಲಾ ಆಕಾಶದಿಂದ ಇಳಿದು ಬಂದಿದೆಯೇನೋ ಅನ್ನಿಸಿತ್ತು. ಗಾಳಿ ಬಿರುಸಾಗಿ ಬೀಸುತ್ತಾ ಅಡವಿಯನ್ನು ಅಲುಗಾಡಿಸುತ್ತಿತ್ತು. ಕಣ್ಣು ಕೋರೈಸುವ ಮಿಂಚು ಗುಡುಗಿನ ಶಬ್ದವಂತೂ ಕಿವಿಯನ್ನು ಅಪ್ಪಳಿಸುತ್ತಿತ್ತು. ಬೇಂಬಿ ನಿರ್ವಿಣ್ಣನಂತೆ ನಿಶ್ಚಲವಾಗಿ ಕುಳಿತಿದ್ದ. ಇನ್ನೇನು ಪ್ರಪಂಚವೆಲ್ಲಾ ಚೂರು ಚೂರಾಗುವುದು ಖಂಡಿತ ಅನ್ನಿಸಿತವನಿಗೆ.

ಮತ್ತೊಂದು ಸಲ ಅವರು ಮಧ್ಯದಾರಿಯಲ್ಲಿರುವಾಗ ಸಿಡಿಲಿನೊಂದಿಗೆ ಮಳೆ ಪ್ರಾರಂಭವಾಗಿತ್ತು. ಬೇಂಬಿ ಹೆದರಿ ಹುಚ್ಚನಾಗಿದ್ದ. ಗುಡುಗು ಗರ್ಜಿಸಿದಾಗಲೆಲ್ಲಾ ದಾರಿಬಿಟ್ಟು ಪೊದೆಗಳೊಳಕ್ಕೆ ತೂರಿಕೊಳ್ಳುತ್ತಿದ್ದ. ಮತ್ತೆ ಮಿಂಚು ಕೋರೈಸಿದಾಗ ಓಡಿಬಂದು ತಾಯಿಯ ಹಿಂದೆ ಓಡುತ್ತಿದ್ದ. ಅರಣ್ಯವೆಲ್ಲಾ ನಿರ್ಜೀವವಾಗಿ ಕಾಣಿಸಿತ್ತು. ಪ್ರಾಣಿಗಳೆಲ್ಲಾ ಎಲ್ಲಿದ್ದರಲ್ಲಿ ಅಡಗಿಕೊಂಡಿದ್ದುವು. ಹೌದು ಮತ್ತೆ, ಅಡಗಿಕೊಳ್ಳದೆ ಮತ್ತೇನು ಮಾಡಲು ಸಾಧ್ಯ? ಗಿಡಮರಗಳೂ ಪೊದೆಗಳೂ ದಾರಿ, ಎಲ್ಲಾ ಜಲಮಯವಾಗಿದ್ದುವು. ಮಿಂಚು ಕೋರೈಸಿದಾಗ ಕೋಟಿ ಕೋಟಿ ನೀರಿನ ಬಿಂದುಗಳು ಜಿಗೇಲ್ ಎಂದು ಕಾಡಿನಲ್ಲೆಲ್ಲಾ ಕೋಟಿ ದೀಪಗಳನ್ನು ಬೆಳಗಿಸಿದಂತಾಗುತ್ತಿತ್ತು.

ಅಂತಹ ಮಳೆ ಸಹ ಎಷ್ಟು ದಿನ ಇದ್ದೀತು? ಅದಕ್ಕೂ ಒಂದು ಕೊನೆಯುಂಟು. ಆಗ ಗುಡುಗಿನ ಸಪ್ಪಳ ನಿಲ್ಲುತ್ತದೆ. ಮಿಂಚಿನ ಬೆಳಕು ಆರುತ್ತದೆ. ಕೆಲವು ಕಾಲ ಮೆಲ್ಲನೆಯ ಸಪ್ಪಳ ಕೇಳಿಸಿ ಅನಂತರ ಅದೂ ಇಲ್ಲವಾಗುತ್ತದೆ. ಮಳೆ ಹಿಂದಾಗಿ ಸೂರ್ಯ ನೆನೆದ ಎಲೆಗಳ ಮರೆಯಿಂದ ಕಾಂತಿ ಬೀರತೊಡಗುತ್ತಾನೆ. ಮಳೆ ನಿಂತ ನಂತರ ಅಡವಿಯನ್ನೆಲ್ಲಾ ಹೊಸ ಗಾಳಿ ವ್ಯಾಪಿಸಿದಂತೆನಿಸುತ್ತದೆ. ಎಂತಹದೋ ಹೊಸತನ, ನೈರ್ಮಲ್ಯ ಕಾಣಿಸುತ್ತದೆ. ಈಗ ಯಾರೂ ಒಳಗೆ ಅಡಗಿ ಕೂಡುತ್ತಿಲ್ಲ. ಹೆದರಿಕೆಯನ್ನೆಲ್ಲಾ ಸೂರ್ಯ ಕಾಂತಿ ತೊಳೆದು ಓಡಿಸಿದಂತಿದೆ.

ಆ ದಿನ ಇನ್ನೂ ಸ್ವಲ್ಪ ವೇಳೆ ಇದ್ದಾಗಲೇ ಅಮ್ಮ, ಬೇಂಬಿ ಮೈದಾನಕ್ಕೆ ಬಂದಿದ್ದರು. ಗುಡುಗು, ಮಳೆಯ ನಂತರ ಮೈದಾನಕ್ಕೆ ಬರುತ್ತಿರುವುದು ಇದೇ ಮೊದಲು. ಆಕಾಶದಲ್ಲಿ ಸೂರ್ಯ ಅಷ್ಟೆತ್ತರದಲ್ಲಿದ್ದ. ಗಾಳಿ ಸ್ವಚ್ಛವಾಗಿತ್ತು. ಧೂಳಿ ದೂಸರಿಕೆಯಿಲ್ಲದೆ ಹಾಯಾಗಿ ಉಸಿರೆಳೆದುಕೊಳ್ಳೋಣವೆನಿಸುವಂತಿತ್ತು. ತಮ್ಮ-ತಮ್ಮ ಸ್ಥಳಗಳನ್ನು ಬಿಟ್ಟು ಹೊರಕ್ಕೆ ಬಂದ ಜೀವಿಗಳ ಕೂಗಾಟದಿಂದ ಅಡವಿಯೆಲ್ಲಾ ಝುಮ್ಮೆಂದು ಪ್ರತಿಧ್ವನಿಸುತ್ತಿತ್ತು.

ಮೈದಾನದಲ್ಲಿ ಕಾಲಿಡಬೇಕಾದರೆ ಬೇಂಬಿ ಮತ್ತು ಅಮ್ಮ ದಾರಿಯಲ್ಲಿದ್ದ ದೊಡ್ಡ ಬಸರಿ ಮರವನ್ನು ಸುತ್ತಿಕೊಂಡು ಹೋಗಬೇಕಾಗಿತ್ತು ಅದರ ಬೇರುಗಳು ಸಿಕ್ಕು ಸಿಕ್ಕಾಗಿ ದಾರಿಯಲ್ಲಿಯೂ ವ್ಯಾಪಿಸಿತ್ತು. ಒಂದು ಬೇರಿನ ಮೇಲೆ ಅಳಿಲು ಕುಳಿತಿತ್ತು. ಈ ತಾಯಿ ಮಕ್ಕಳಿಗೆ ಅವಳು ಹಳೆಯ ಸ್ನೇಹಿತೆ. ಬೇಂಬಿಗೆ ಅಳಿಲೆಂದರೆ ತುಂಬಾ ಇಷ್ಟ. ಅದು ತುಂಬಾ ಸರಸವಾಗಿ, ಸಿಹಿನುಡಿಗಳನ್ನಾಡುತ್ತಿತ್ತು. ವಿಚಿತ್ರವಾದ ನಡಿಗೆ, ಚಕಚಕನೆ ಓಡಾಡುತ್ತಾ, ಟಿಪ್ಪೆಂದು ಧುಮುಕುತ್ತಿತ್ತು. ಓಡುತ್ತಿತ್ತು. ಬಸರಿ ಮರದ ಕೊಂಬೆಗಳ ಮೇಲೆ ಪಲ್ಟಿ ಹೊಡೆಯುತ್ತಿತ್ತು. ಮಾತನಾಡುತ್ತ ಆಡುತ್ತಲೇ ಆ ಸಣ್ಣನೆಯ ಟೊಂಗೆಗಳ ಮೇಲೆ ಮೇಲಕ್ಕೂ ಕೆಳಕ್ಕೂ ಅನಾಯಾಸವಾಗಿ ಓಡಿಯಾಡುತ್ತಿತ್ತು. ಕೆಲಕ್ಷಣ ತೂಗಾಡುತ್ತಿದ್ದ ಪುಟ್ಟ ಕೊಂಬೆಯ ಮೇಲೆ ಕುಳಿತುಕೊಳ್ಳುತ್ತಿತ್ತು. ಕುಚ್ಚು ಬಾಲವನ್ನು ಆಡಿಸುತ್ತಿತ್ತು. ಬಿಳುಪಾದ

ಎದೆ ಕಾಣುವಂತೆ ಕುಳಿತು ಕೈ ತಿರುಗಿಸುತ್ತಿತ್ತು. ತಲೆಯನ್ನು ಆ ಕಡೆ ಈ ಕಡೆ ತಿರುಗಿಸುತ್ತಿತ್ತು. ಮತ್ತೆ ಮಾಮೂಲಾಗಿ ಲೋಕಾಭಿರಾಮವನ್ನು ಪ್ರಾರಂಭಿಸುತ್ತಿತ್ತು.

ಅವರನ್ನು ನೋಡುತ್ತಲೇ ಅಳಿಲು ಮಿಂಚಿನಂತೆ ಕೆಳಕ್ಕೆ ಧುಮುಕಿತೆಂಬುದೇ ಬೇಂಬಿಗೇ ಅರ್ಥವಾಗಲಿಲ್ಲ. ಕುಚ್ಚು ಬಾಲ ಅಲ್ಲಾಡಿಸುತ್ತಾ ಕೀರಲು ದನಿಯಲ್ಲಿ ಮಾತನಾಡಿಸಿತು.

"ಅಬ್ಬಬ್ಬಾ ! ಎಷ್ಟು ದಿನಕ್ಕೆ ಕಾಣಿಸಿದಿರಿ ! ಎಲ್ಲಾ ಸೌಖ್ಯವೇ ?"

ಬೇಂಬಿ, ಅಮ್ಮ ನಿಂತುಕೊಂಡರು ಅಳಿಲು ಇನ್ನೂ ಕೆಳಕ್ಕೆ ಇಳಿದು ಬಂತು. ಪ್ರವಾಹದಂತೆ ಮಾತುಗಳನ್ನು ಹರಿಬಿಟ್ಟಿತು.

"ಹಾಂ, ಈ ಗಾಳಿ. ಮಳೆ ಏನು ಜೋರು ! ಆಗ ಹೇಗೆ ಕಾಲ ಕಳೆದಿರಿ? ಕಾಣಿಸ್ತಾನೇ ಇದೆ. ಚೆನ್ನಾಗಿಯೇ ಇದೀರಿ. ಅಷ್ಟೆ ನಮಗೆ ಬೇಕಾದದ್ದು" ಎಂದು ಮತ್ತೆ ಸರ್ರನೆ ಮರದ ಮೇಲೇರಿತು.

"ಮತ್ತೇನಿಲ್ಲ. ಕೆಳಗೆ ಇನ್ನೂ ತಣ್ಣಗೇ ಇದೆ ಒಂದು ಕ್ಷಣ ನಿಲ್ಲಿ. ಸರಿಯಾದ ಸ್ಥಳ ನೋಡಿಕೊಂಡು ಕುಳಿತು ಕೊಳ್ತಾನೆ. ನಿಮ್ಮತ್ರ ಅರ್ಜೆಂಟಾಗಿ ಕೆಲಸ ಏನೂ ಇಲ್ಲತಾನೇ ? ಸರಿ, ಹಾಗಾದರೆ."

ಕೊಂಬೆಯ ಮೇಲೆ, ಕೆಳಕ್ಕೂ ಓಡಾಡುತ್ತಲೇ ಸಂಭಾಷಣೆ ಮುಂದುವರಿಸಿತ್ತು. ಅಳಿಲು. "ಅಬ್ಬಬ್ಬಾ ! ಏನು ಅವಸ್ಥೆಯಾಯಿತೂಂತ, ಈ ಗಾಳಿ —ಮಳೆ, ಸದ್ದು. ವಿಪರೀತ ಹೆದರಿಬಿಟ್ಟಿದ್ದೆ ನಾನು, ಹೇಳಿದರೆ ನಿಮಗರ್ಥವಾಗದು ಪೊಟರೆಯಲ್ಲಿ ಅದೇ ನಮ್ಮ ಮನೆಯಲ್ಲಿ ಮುದುಡಿ ಕುಳಿತಿದ್ದೆ. ಅಲುಗಾಡಲಿಕ್ಕೂ ಭಯ. ಆದರೆ ಈ ನಮ್ಮ ಮರ ಇದೆ ನೋಡಿ, ಇದು ಪ್ರಪಂಚದ ಮರಗಳಲೆಲ್ಲಾ ಅತ್ಯುತ್ತಮವಾದುದ್ದು. ಅದರಲ್ಲಿ ಸಂದೇಹವೇ ಇಲ್ಲ ನಾನು ಹೇಳ್ತಿದೀನಲ್ಲಾ ಈ ಸುತ್ತಮುತ್ತಲ್ಲೆಲ್ಲಾ ಜಾಲಿಸಿ ಬಿಟ್ಟಿದ್ದೀನಿ. ಆದರೇನು, ಎಷ್ಟು ಒಳ್ಳೆಯ ಮರ ಆದರೂ ಹೆದರಿಕೆ ತಪ್ಪಿದ್ದಲ್ಲವಲ್ಲಾ."

ಅಳಿಲು ತನ್ನ ಸುಂದರವಾದ ಕುಚ್ಚು ಬಾಲದಮೇಲೆ ಕುಳಿತುಕೊಂಡಿತು ಅದರ ಬಿಳುಪಾದ ಹೊಟ್ಟೆ ಅಂದವಾಗಿ ಕಾಣುತ್ತಿತ್ತು. ಕೈಗಳೆರಡನ್ನೂ ಎದೆಯಮೇಲಿಟ್ಟುಕೊಂಡು ತಾನೆಷ್ಟು ಹೆದರಿದೇನೆಂಬುವನ್ನು ತೋರಿಸಿ ಕೊಂಡಿತು.

"ನಾವೂ ಹಾಗೇ ಮೈದಾನದ ಕಡೆ ಹೊರಟಿದೀವಿ, ತುಂಬಾ ದಿನ ಆಯಿತಲ್ಲಾ. ಸ್ವಲ್ಪ ಕಾಲು ಜಾಡಿಸಿ ಓಡಾಡಿದರೆ ಒಳ್ಳೆಯದೂಂತ" ಎಂದಳು ಅಮ್ಮ.

"ಹಾಂ, ಹೌದು. ಹೌದು. ನೀವು ಹೇಳಿದ್ದು ಸರಿಯಾದ ಮಾತು. ನನಗೆ ಮೊದಲಿನಿಂದ ಗೊತ್ತು ನೀವು ಎಲ್ಲಾ ತಿಳಿದವರೂಂತ."

"ಒಂದು ನೆಗೆತದಲ್ಲಿ ಮೇಲಿನ ಕೊಂಬೆಯನ್ನು ಸೇರಿದ ಅಳಿಲು ಅಲ್ಲಿಂದಲೇ ಮಾತನಾಡುತಿತ್ತು. "ಹೂಂ, ನಾನು ಸ್ವಲ್ಪ ಬಿಸಿಲು ಕಾಸಿಕೋತೀನಿ" ಕೇಳುತ್ತಿರುವರೋ ಇಲ್ಲವೋ ಎಂಬುದನ್ನೂ ಗಮನಿಸದೆ ಒಂದೆಸಮನೆ ಮಾತನಾಡುತ್ತಿತ್ತು ಅಳಿಲು.

ಅಮ್ಮ, ಬೇಂಬಿ ಮುಂದಕ್ಕೆ ನಡೆದರು.

ಮೈದಾನದಲ್ಲಿ ಸಂಭ್ರಮವೋ ಸಂಭ್ರಮ. ಮೊಲ ಮಾವಯ್ಯ, ಅವನ ಸಂಸಾರ ಎಲ್ಲಾ ಅಲ್ಲಿಯೇ ಇತ್ತು. ಎಣ ಚಿಕ್ಕಮ್ಮ ಮಕ್ಕಳು ಆಗಲೇ ಬಂದು ಬಿಟ್ಟಿದ್ದರು.

ಈ ದಿನ ಮತ್ತೆ ಅಪ್ಪಂದಿರು ಕಾಣಿಸಿದ್ದರು ಅವರಿಬ್ಬರೂ ಮೆಲ್ಲನೆ ಅಡವಿಯೊಳಗಿನಿಂದ ಬಂದರು. ನಂತರ ಮೂರನೆಯವರೊಬ್ಬರು ಕಾಣಿಸಿದರು. ಅವರು ಗಂಭೀರವಾಗಿ ರಾಜ ಠೀವಿಯಿಂದ ಹೆಜ್ಜೆ ಹಾಕುತ್ತಾ ತಮ್ಮ ಕಡೆಗೇ ಬಂದರು. ಅವರು ತಮ್ಮಲ್ಲಿ ತಾವು ಸಹ ಮಾತನಾಡಿಕೊಳ್ಳುತ್ತಿರಲಿಲ್ಲ. ನಿಜಕ್ಕೆ ಬೇಂಬಿಯಂತಹ ಮಕ್ಕಳು ಅಲ್ಲಿದ್ದಾರೆಂಬುದನ್ನು ಅವರು ಗಮನಿಸಿದರೋ ಇಲ್ಲವೋ, ಬೇಂಬಿ ಮಾತ್ರ ಅವರು ಕಾಣುತ್ತಿದ್ದಷ್ಟು ಹೊತ್ತೂ ರೆಪ್ಪೆಹಾಕದೆ ಅವರನ್ನೇ ನೋಡುತ್ತಾ ನಿಂತಿದ್ದ. ಅವರು ಹೊರಟು

ಹೋದ ನಂತರ ತನ್ನ ಜತೆಯ ಹುಡುಗರೊಂದಿಗೆ ಆಟಗಳಲ್ಲಿ ತೊಡಗಿದ. ಗೋಬೋ—ಫಲೀನಾ ಅಲ್ಲದೆ ಮತ್ತಿಬ್ಬರು ಮಕ್ಕಳು ಬಂದಿದ್ದರು. ಎಲ್ಲರೂ ಸೇರಿ ಮೈದಾನದಲ್ಲೆಲ್ಲಾ ಇಷ್ಟ ಬಂದಂತೆ ಓಡುತ್ತಾ, ಆಡುತ್ತಾ ಕಳೆದರು.

ಮಕ್ಕಳಲ್ಲೆಲ್ಲಾ ಹೆಚ್ಚು ಚೂಟಿಯಾಗಿದ್ದವಳೆಂದರೆ ಫಲೀನಾ. ಅವಳು ಧೈರ್ಯವಂತಳೂ ಜಾಣೆಯೂ ಆಗಿದ್ದಳು. ಆಟದಲ್ಲಾಗಲಿ—ಮಾತಿನಲ್ಲಾಗಲೀ ಉತ್ಸಾಹದ ಬುಗ್ಗೆಯಾಗಿದ್ದಳು.

ಗೋಬೋ ಆಟದಲ್ಲಿ ಬಹಳ ಬೇಗ ಸುಸ್ತಾಗುತ್ತಿದ್ದ. ಮೊನ್ನಿನ ಬಿರುಗಾಳಿಯ ಪ್ರಕೋಪಕ್ಕೆ ಅವನು ತುಂಬಾ ಹೆದರಿದ್ದು, ಇನ್ನೂ ಅದರಿಂದ ಚೇತರಿಸಿಕೊಂಡಿರಲಿಲ್ಲ.

ನಿಜ ಹೇಳಬೇಕೆಂದರೆ ಸ್ವಭಾವತಃ ಅವನು ಸ್ವಲ್ಪ ಭಯಸ್ಥ, ಬಲಹೀನ ಮತ್ತು ಪುಕ್ಕಲ ಸ್ವಭಾವದವನು. ಆದರೆ ಒಳ್ಳೆಯ ಆಲೋಚನಾಪರ. ಸಹನೆಯೂ ಹೆಚ್ಚೇ. ಆದ್ದರಿಂದಲೇ ಬೇಂಬಿಗೆ ಗೋಬೋ ಎಂದರೆ ಇಷ್ಟ ಯಾವ ಕಾರಣಕ್ಕಾಗಿಯೋ ಏನೋ ಎಲ್ಲರಂತಿರದೆ ಒಂದು ಥರಹಾ ಇರುತ್ತಿದ್ದ. ಅವನ ಕಣ್ಣಿನಲ್ಲಿ ಚಿಂತೆ ಕಾಣುತ್ತಿತ್ತು. ಅದನ್ನು ಬಚ್ಚಿಟ್ಟುಕೊಳ್ಳಲು ಹೆಣಗುತ್ತಿದ್ದ.

ಎಳೆಯ ಚಿಗುರೆಲೆಗಳನ್ನು ಕಚ್ಚಿ ತಿನ್ನುವುದರಲ್ಲೂ ಗರಿಕೆ ಹುಲ್ಲನ್ನು ಹಲ್ಲಿನ ಕೊನೆಯಿಂದ ಕಡಿಯುವುದರಲ್ಲಿಯೂ ರುಚಿ ಕಂಡುಕೊಂಡಿದ್ದ ಬೇಂಬಿ. ಆದರೆ ಆಗಾಗ ಇನ್ನೂ ತಾಯಿಯ ಬಳಿ ಹಾಲು ಕುಡಿಯಲು ಬರುತ್ತಲೇ ಇದ್ದ. ಅಮ್ಮ ಆಗಾಗ ಅವನನ್ನು ಗದರಿಸುತ್ತಿದ್ದಳು.

“ನೀನೇನು ಚಿಕ್ಕ ಮಗುವಲ್ಲ. ಹೋಗು, ಹೋಗು ನನ್ನ ಬೇಜಾರು ಪಡಿಸಬೇಡ.

ಇಬ್ಬರೂ ಸೇರಿ ಆಚೆ ಹೊರಟಾಗ ಮೊದಲಿನಂತೆ ಬೇಂಬಿ ತನ್ನ ಹಿಂದೆ ಬರುತ್ತಾನೆಯೋ ಇಲ್ಲವೋ ಎಂದು ಜಾಗರೂಕತೆಯಿಂದ ನೋಡುತ್ತಾ ನಡೆಯುತ್ತಿರಲಿಲ್ಲ ಅಮ್ಮ. ಅವನ ಮೇಲಿನ ಗಮನ ಕಡಿಮೆಯಾಗಿತ್ತೀಗ.

ಒಂದು ದಿನ ಹಠಾತ್ತಾಗಿ ಅಮ್ಮ ಮಾಯವಾಗಿ ಬಿಟ್ಟಳು. ಯಾವಾಗ, ಎತ್ತ ಹೋದಳೆಂಬುದು ಸಹ ತಿಳಿಯಲಿಲ್ಲ ಬೇಂಬಿಗೆ. ನಿದ್ದೆ ಮಾಡಿ ಎದ್ದು ನೋಡಿಕೊಂಡಾಗ ಅಮ್ಮ ಪಕ್ಕದಲ್ಲಿರಲಿಲ್ಲ. ಬೇಂಬಿ ಒಬ್ಬನೇ ಮನೆಯಲ್ಲಿದ್ದದ್ದು ಅದೇ ಮೊದಲು.

ಅಮ್ಮ ಕಾಣದಾದಾಗ ಮೊದಲು ಆಶ್ಚರ್ಯವಾಯಿತು ಬೇಂಬಿಗೆ. ಅನಂತರ ಗಾಬರಿಯಾಯಿತು. ಹೆದರಿದ. ಚಿಂತೆಯಿಂದ ದಿಕ್ಕೇ ತೋಚಲಿಲ್ಲ. "ಅಮ್ಮಾ" ಎಂದು ಕೂಗಿದ ಕಳವಳದಿಂದ. ಆದರೆ ಆ ಕೂಗು ಸುತ್ತಲೂ ಪ್ರತಿಧ್ವನಿಸಿ ಅಡಗಿಹೋಯಿತು. ಉತ್ತರ ಮಾತ್ರ ಬರಲಿಲ್ಲ. ಕಿವಿ ನಿಮಿರಿಸಿ ಕೇಳಿದ. ಕತ್ತು ಮೇಲೆತ್ತಿ, ಗಟ್ಟಿಯಾಗಿ ಉಸಿರೆಳೆದುಕೊಂಡು ವಾಸನೆ ನೋಡಿದ. ಉಹೂಂ, ಏನೂ ತಿಳಿಯಲಿಲ್ಲ. ಮತ್ತೆ–ಮತ್ತೆ ಕೂಗಿದ. 'ಅಮ್ಮಾ, ಅಮ್ಮಾ ...'

ನಿರಾಸೆಯಿಂದ ಮನೆಯಿಂದ ಹೊರಗೆ ಹೊರಟ. ಎತ್ತ ಹೋಗಬೇಕೆಂಬುದೂ ತಿಳಿಯದು. ತನಗೆ ತಿಳಿದಿದ್ದ ಕಾಲುದಾರಿಯಲ್ಲಿ ನಿಧಾನವಾಗಿ ಸ್ವಲ್ಪ ದೂರ ನಡೆದ. ಕಾಲು ತಡವರಿಸಿದಂತಾಗುತ್ತಿತ್ತು. ಇನ್ನೂ ಸ್ವಲ್ಪ ಮುಂದೆ ನಡೆದ. ಅದಾವುದೋ ಹೊಸ ಸ್ಥಳ. ಇದಕ್ಕೆ ಮುಂಚೆ ಎಂದೂ ಅಲ್ಲಿಗೆ ಬಂದಂತೆನಿಸಲಿಲ್ಲ.

ಅಲ್ಲಿ ಮತ್ತೆ ಎರಡು ಜಿಂಕೆ ಮರಿಗಳ ಕಂಠ ಕೇಳಿಸಿತು. ಅವರೂ ತನ್ನಂತೆಯೇ ಗಾಬರಿಗೊಂಡು "ಅಮ್ಮ, ಅಮ್ಮಾ" ಎಂದು ಕೂಗಿಕೊಳ್ಳುತ್ತಿದ್ದರು. ಬೇಂಬಿ ನಿಧಾನವಾಗಿ ಆಲಿಸಿದ. ಅವು ಗೋಬೋ ಫಲೀನಾರ ಕಂಠಗಳೇ. ಹೌದು, ಅವರೇ, ಸಂದೇಹವೇ ಇಲ್ಲ. ಆ ಧ್ವನಿ ಕೇಳಿ ಬಂದ ಕಡೆ ಓಡಿದ. ಎಲೆಗಳ ಮರೆಯಲ್ಲಿ ಕಾಣಿಸಿದರು ಅವರು. ಒಬ್ಬರಿಗೊಬ್ಬರು ಒತ್ತಿನಿಂತು, ಪೆಚ್ಚುಮುಖ ಹಾಕಿಕೊಂಡಿದ್ದರು. ಮತ್ತಿಯ ಮರದ ಕೆಳಗೆ ನಿಂತಿದ್ದ ಅವರು "ಅಮ್ಮಾ–ಅಮ್ಮಾ" ಎಂದು ಕೂಗುತ್ತಿದ್ದರು.

ಪೊದೆಯ ಹಿಂದೆ ಕೇಳಿ ಬಂದ ಸದ್ದಿಗೆ, ಅವರಿಬ್ಬರೂ ಎಷ್ಟೋ ಸಂತೋಷದಿಂದ ಅತ್ತ ನೋಡಿದರು. ಆದರೆ ಬಂದದ್ದು ಬೇಂಬಿ. ತಮಗೆ

ಉಂಟಾದ ಆಶಾಭಂಗವನ್ನು ಆ ಪುಟ್ಟ ಮಕ್ಕಳಿಂದ ಬಚ್ಚಿಟ್ಟುಕೊಳ್ಳಲಾಗಲ್ಲಿಲ್ಲ. ಆದರೂ ಬೇಂಬಿ ಕಾಣಿಸಿದ್ದು ಅವರಿಗೆಷ್ಟೋ ಸಮಾಧಾನ ತಂದಿತ್ತು. ಬೇಂಬಿಗೂ ಅಷ್ಟೇ. ಸಧ್ಯ ಒಂಟಿತನ ತಪ್ಪಿತಲ್ಲಾ ಎಂಬ ನೆಮ್ಮದಿ.

"ನಮ್ಮ ಅಮ್ಮ ಎಲ್ಲೋ ಕಾಣಿಸುತ್ತಿಲ್ಲ" ಎಂದ ಬೇಂಬಿ.

"ನಮ್ಮ ತಾಯಿನೂ ಅಷ್ಟೆ" ಎಂದ ಗೋಬೋ.

ಏನೂ ಅರ್ಥವಾಗದವರಂತೆ ಒಬ್ಬರ ಕಡೆಗೊಬ್ಬರು ನೋಡಿಕೊಂಡರು. ಎಲ್ಲರ ಕಣ್ಣಿನಲ್ಲಿಯೂ ನೀರಾಡುತ್ತಿತ್ತು.

"ಏನೋ ಪಾತ್ರೆ !" ಎಂದು ನಿಟ್ಟುಸಿರುಬಿಟ್ಟ ಗೋಬೋ. ಅವನ ಎದೆ ಡವಡವನೆ ಬಡಿದಾಡುಕೊಳ್ಳುತಿತ್ತು.

ತಟ್ಟನೆ ಫಲೀನಾ ಹೇಳಿದಳು. "ಬಹುಶಃ ಅವರು .. ಅವರು...ಅಪ್ಪಂದಿರ ಬಳಿಗೆ ಹೋಗಿರಬಹುದು .."

ಗೋಬೋ, ಬೇಂಬಿ ಪೆದ್ದರಂತೆ ಅವಳ ಕಡೆ ನೋಡಿದರು. ಅವರಿಗೆ ಈ ವಿಷಯ ಹೆದರಿಕೆಯನ್ನುಂಟುಮಾಡಿತ್ತು.

ಫಲೀನಾಗೂ ಹೆದರಿಕೆಯಾಗಿತ್ತು, ನಿಜ. ಆದರೆ ಅವಳ ಮುಖ ನೋಡಿದರೆ, ಅವರಿಬ್ಬರಿಗಿಂತ ಅವಳಿಗೆ ಹೆಚ್ಚು ತಿಳಿದಂತೆನಿಸುತ್ತಿತ್ತು. ಅಮ್ಮಂದಿರು ಅಪ್ಪಂದಿರ ಬಳಿ ಇರಬಹುದೆಂದು ಅವಳಿಗೆ ಹೇಗೆ ಅನ್ನಿಸಿತೋ ಅವಳಿಗೇ ಗೊತ್ತಿರಲಿಲ್ಲ.

"ಹಾಗಂತೀಯಾ ?" ಎಂದು ಬೇಂಬಿ.

"ಹುಂ, ನನಗೆ ಚೆನ್ನಾಗಿ ಗೊತ್ತು" ಎಂದಳು ಫಲೀನಾ.

ಬೇಂಬಿ ಹೆಚ್ಚಾಗಿ ಆಲೋಚಿಸಲಾರದಾದ. ಅವನ ಮನಸ್ಸೆಲ್ಲಾ ಗಜಿಬಿಜಿಯಾಗಿಹೋಗಿತ್ತು. ಮುಂದಕ್ಕೆ ಹೆಜ್ಜೆ ಹಾಕಿದ. ಮಿಕ್ಕ ಇಬ್ಬರೂ ಅವನ ಹಿಂದೆ ನಡೆದರು. ಮೂರೂಜನ ಕಂಠ ಸೀಳಿಹೋಗುವಂತೆ "ಅಮ್ಮಾ, ಅಮ್ಮಾ" ಎಂದು ಕೂಗಲಾರಂಭಿಸಿದರು.

ಇಷ್ಟರಲ್ಲಿ ಫಲೀನಾ, ಗೋಬೋ ಒಂದುಕಡೆ ನಿಂತುಬಿಟ್ಟರು. ತಾವು

ಇನ್ನು ಮುಂದಕ್ಕೆ ಬರುವುದಿಲ್ಲ ಎಂದುಬಿಟ್ಟರು.

"ಏಕೆ ?"

"ಅಮ್ಮ ಹಿಂದಿರುಗಿ ಬಂದರೆ ನನಗಾಗಿ ಹುಡುಕುತ್ತಾಳೆ" ಎಂದಳು ಫಲೀನಾ.

ಆದರೆ ಬೇಂಬಿಗೆ ಒಂದುಕಡೆ ನಿಲ್ಲಲ್ಲು ಇಷ್ಟವಿಲ್ಲ. ಮುಂದು ಮುಂದಕ್ಕೆ ಮುಂದಕ್ಕೆ ನಡೆದ. ಪೊದೆಗಳನ್ನು ದಾಟಿ ಸಣ್ಣ ಸೀಳುದಾರಿಯ ಬಳಿ ಬಂದ. ಮುಂದಕ್ಕೆ ನೋಡಿದವನೇ ಪೆಚ್ಚಾಗಿ ನಿಂತುಬಿಟ್ಟ. ಅಲ್ಲಿ ಆ ಸಣ್ಣ ಸಂದಿನಿಂದ ಆಚೆ ದೊಡ್ಡ ಶೇಗದ ಮರವನ್ನು ಒರಗಿನಿಂತ ವಿಚಿತ್ರವಾದ ಆಕಾರವೊಂದು ಕಾಣಿಸಿತು. ಇದಕ್ಕೆ ಮುಂಚೆ ಅಂತಹ ಪ್ರಾಣಿಯನ್ನು ಬೇಂಬಿ ನೋಡಿಯೇ ಇರಲಿಲ್ಲ. ಆ ಜೀವಿಯಿಂದ ಬರುತ್ತಿದ್ದ ಗಬ್ಬುವಾಸನೆ ಅಸಹ್ಯಕರವಾಗಿ, ಹುಚ್ಚು ಹಿಡಿಸುವಂತೆ, ಎದೆ ಸೀಳುವಂತೆ ಇತ್ತು.

ಆ ಹೊಸ ಜೀವಿಯಿಂದ ದೃಷ್ಟಿ ಕೀಳಲಾಗಲಿಲ್ಲ ಬೇಂಬಿಗೆ. ಅದು ಎರಡೇ ಎರಡು ಸಣ್ಣ ಕಾಲುಗಳಮೇಲೆ ನೆಟ್ಟಗೆ ನಿಂತಿತ್ತು. ಮುಖ ಚಪ್ಪಟೆಯಾಗಿ ಅಸಹ್ಯವಾಗಿ, ವಿಕೃತವಾಗಿತ್ತು. ಎಂತಹುದೋ ಭೀಕರಶಕ್ತಿ. ಗದರಿಸಿ. ಅಜ್ಞಾಪಿಸುವ ಶಕ್ತಿ ಆ ಮುಖದಲ್ಲಿತ್ತು. ಆ ಶಕ್ತಿಯೇ ಬೇಂಬಿಯ ಎದೆಯನ್ನು ಹಿಂಡಿ, ದೃಷ್ಟಿ ಕೀಳದಂತೆ ಮಾಡಿತ್ತು.

ಆ ಹೊಸಜೀವಿ ಬಹಳ ಹೊತ್ತು ಕದಲದೆ ಹಾಗೆಯೇ ನಿಂತಿತ್ತು. ಅಷ್ಟರಲ್ಲಿ ಒಂದು ಕಾಲನ್ನು—ಅದು ತಲೆಯ ಬಳಿ ಇತ್ತು—ಮೇಲಕ್ಕೆತ್ತಿತು. ಆ ಜೀವಿಗೆ ಅಲ್ಲೊಂದು ಕಾಲು ಇದೆಯೆಂಬ ವಿಷಯವನ್ನು ಬೇಂಬಿ ಗಮನಿಸಿಯೇ ಇರಲಿಲ್ಲ. ಈಗತಾನೇ ನೋಡುತ್ತಿದ್ದ. ಆ ಕದಲುವಿಕೆ ಅವನನ್ನು ಭೀತಿಗೊಳಿಸಿತ್ತು. ಆ ಭೀತಿ ಅವನಿಗೆ ತಿಳಿಯದಂತೆಯೇ ಅವನನ್ನು ಪೊದೆಗಳಲ್ಲಿ ಮರೆಯಾಗುವಂತೆ ಮಾಡಿತ್ತು.

ಬೇಂಬಿ ಗಮನಿಸಿಯೇ ಇರಲಿಲ್ಲ. ಅವನ ಪಕ್ಕದಲ್ಲಿಯೇ ಅಮ್ಮ ನಿಂತಿದ್ದಳು. ಒಬ್ಬರ ಮುಖ ಒಬ್ಬರು ನೋಡಿಕೊಂಡರು ಸ್ವಲ್ಪವೂ ಸದ್ದು ಮಾಡದೆ, ಮೌನವಾಗಿ, ಒಬ್ಬರನ್ನೊಬ್ಬರು ತಾಗುವಂತೆ ನಡೆಯುತ್ತಾ ಹಿಂತಿ

ರುಗಿ ಸ್ವಲ್ಪದೂರ ನಡೆದಮೇಲೆ ಓಟಕಿತ್ತರು. ಆ ಓಟ ಮನೆ ಸೇರುವ ವರೆಗೂ ನಿಲ್ಲಲಿಲ್ಲ.

"ನೋಡಿದೆಯಾ ?" ಎಂದಳು ಅಮ್ಮ ಮೆಲ್ಲನೆ.

ಬೇಂಬಿ ಏದುಸಿರುಬಿಡುತ್ತಿದ್ದ. ಮಾತನಾಡಲೂ ಆಗಲಿಲ್ಲ. ಸುಮ್ಮನೆ ತಲೆಯಾಡಿಸಿದ ಮಾತ್ರ.

"ಅವನೇ ಮ–ನು–ಷ್ಯ" ಎಂದಳು ಅಮ್ಮ ಇಬ್ಬರೂ ಭಯದಿಂದ ನಡುಗುತ್ತಿದ್ದರು.

ಅನಂತರ ಅಮ್ಮ ಆಗಾಗ ಬೇಂಬಿಯನ್ನು ಬಿಟ್ಟು ಎಲ್ಲಿಗೋ ಹೊರಟು ಹೋಗುತ್ತಿದ್ದಳು ಆದರೆ ಬೇಂಬಿಗೆ ಮೊದಲಸಲ ಆದಹಾಗೆ ಭಯವಾಗುತ್ತಿರ ಲಿಲ್ಲ. ತಾಯಿಗಾಗಿ ಹುಡುಕುತ್ತಿದ್ದ, ಕಾಣುತ್ತಿರಲಿಲ್ಲ. ಕೂಗುತ್ತಿದ್ದ, ಉತ್ತರ ಬರುತ್ತಿರಲಿಲ್ಲ. ಅನಂತರ ಯಾವಾಗಲೋ ಅಕಸ್ಮಾತ್ತಾಗಿ ಬಂದುಬಿಡುತ್ತಿ ದ್ದಳು. ಮತ್ತೆ ಕೆಲದಿನ ಮಾಮೂಲಾಗಿಯೇ ಕಳೆಯುತ್ತಿತ್ತು.

ಒಂದುದಿನ ರಾತ್ರಿ ಅಮ್ಮ ಮತ್ತೆ ಮಾಯವಾಗಿದ್ದಳು. ಬೇಂಬಿ ಅರಣ್ಯದಲ್ಲೆಲ್ಲಾ ಹುಡುಕಾಡಿದ. ಬೆಳಗಾಗುತ್ತಾ ಬಂದಿತ್ತು. ಆಕಾಶ ಕೆಂಪು ಬಣ್ಣ ತಾಳಿತ್ತು. ಏನು ಮಾಡೋಣವೆಂದು ಆಲೋಚಿಸುತ್ತಿದ್ದಾಗ ಪಕ್ಕದ ಪೊದೆಯಲ್ಲಿ ಸದ್ದಾಯಿತು. ಎಲೆಗಳ ಗರಗರ ಸಪ್ಪಳ ಕೇಳಿಸಿತು, ತಿರುಗಿ ನೋಡಿದ. ದೂರದಲ್ಲಿ ಅಮ್ಮ ಕಾಣಿಸಿದಳು. ಅವಳ ಪಕ್ಕದಲ್ಲಿ ಯಾರೋ ಇದ್ದಂತಿತ್ತು. ಅದು ಯಾರೆಂಬುದು ಬೇಂಬಿಗೆ ತಿಳಿಯಲಿಲ್ಲ. ಒಂದುಕ್ಷಣ ಕಾಣಿಸಿಕೊಂಡು ತಕ್ಷಣ ಮಾಯವಾಗಿದ್ದಳು ಅಮ್ಮ. ಚಂಗನೆ ನೆಗೆದು ಕಣ್ಮರೆ ಯಾಗುತ್ತಿದ್ದಂತೆಯೇ ವಿಚಿತ್ರವಾಗಿ ಕೂಗಿದಳು. ಆ ತರಹದ ಕೂಗನ್ನು ಅಮ್ಮನ ಬಾಯಿಂದ ಅವನೆಂದೂ ಕೇಳಿರಲಿಲ್ಲ. ಅದು ಭಯವೋ, ಸಂತೋ ಷವೋ ಎಂಬುದು ಸಹ ಅವನಿಗರ್ಥವಾಗಲಿಲ್ಲ. ಮರುಕ್ಷಣದಲ್ಲಿ ಆ ಹೊಸಬ ಸಹ ಮಾಯವಾಗಿಬಿಟ್ಟಿದ್ದ.

ಮತ್ತೊಂದುದಿನ ಹಗಲಿನಲ್ಲಿಯೇ ಇದ್ದಕ್ಕಿಂತಲೂ ಆಶ್ಚರ್ಯಕರವಾದ ವಿಷಯ ನಡೆದಿತ್ತು. ಬೇಂಬಿ ಏನೂ ತೋಚದೆ ಅಡವಿಯಲ್ಲಿ ತಿರುಗಾಡು

ತ್ತಿದ್ದ. ಇಂತಹುದೇ ದಾರಿಯಲ್ಲಿ ಹೋಗಬೇಕೆಂದಿಲ್ಲದೆ ಎತ್ತ ಮನಸ್ಸು ಬಂದರೆ ಅತ್ತ ಹೋಗುತ್ತಿದ್ದ. ಅಷ್ಟರಲ್ಲಿ ಅಮ್ಮನ ನೆನಪಾಯಿತು "ಅಮ್ಮಾ ಅಮ್ಮಾ" ಎಂದು ಕೂಗತೊಡಗಿದ. ಭಯದಿಂದಲ್ಲ, ಒಂಟಿತನವನ್ನು ಸಹಿಸ ಲಾರದೆ–ಅಮ್ಮಾ ಎಂದು ಕೂಗಿದ.

ಅಷ್ಟರಲ್ಲಿ ಬೇಂಬಿಯ ಪಕ್ಕದಲ್ಲಿ ಹಠಾತ್ತಾಗಿ ತಂದೆಯರಲ್ಲಿ ಒಬ್ಬ ಪ್ರತ್ಯಕ್ಷನಾದ. ಆತ ಯಾವಾಗ ಬಂದನೆಂಬುದೇ ತಿಳಿಯಲಿಲ್ಲ ಬೇಂಬಿಗೆ. ಹಠಾತ್ತಾಗಿ ಕಾಣಿಸಿದ್ದರಿಂದ ಬೆಚ್ಚಿಬಿದ್ದ.

ಆತ ತಾನು ಇದಕ್ಕೆ ಮುಂಚೆ ನೋಡಿದವರಿಗಿಂತ ಬಲಿಷ್ಠನಾಗಿ, ಎತ್ತರ ವಾಗಿ ಠೀವಿಯಿಂದ ನಿಂತಿದ್ದ. ಆತನ ಚರ್ಮ ಕೆಂಪಗೆ ಹೊಳೆಯುತ್ತಿತ್ತು. ಕಣ್ಣುಗಳಲ್ಲಿ ದರ್ಪ. ನಿಶ್ಚಿತದೃಷ್ಟಿ. ಮುಖದಲ್ಲಿ ವಿಚಿತ್ರವಾದ ಗಾಂಭೀರ್ಯ ತುಂಬಿತ್ತು. ಎಲ್ಲಕ್ಕಿಂತ ಆತನ ತಲೆಯ ಮೇಲಿನ ಕಿರೀಟ ತುಂಬಾ ಸುಂದರ ವಾಗಿತ್ತು. ಆತ ಬೇಂಬಿಯ ಕಡೆ ತೀಕ್ಷ್ಣವಾಗಿ ನೋಡಿದ.

"ಯಾಕೆ ಹಾಗೆ ಕೂಗಿಕೋತಾ ಇದೀಯ? ಒಬ್ಬನೇ ಇರೋಕೆ ಹೆದರಿಕೆ ಅನ್ನೋಕೆ ನಾಚಿಕೆ ಆಗೊಲ್ಲವೇನು?"

ಬೇಂಬಿ ಕಣ್ಣು ಪಿಳಿಪಿಳಿ ಬಿಡುತ್ತಾ ನೋಡಿದ.

"ಒಂಟಿಯಾಗಿರೋದು ಇದೇನು ಮೊದಲಸಲವಲ್ಲ ನನಗೆ. ಇದಕ್ಕೂ ಮುಂಚೆ ಎಷ್ಟೋಸಲ ಒಂಟಿಯಾಗಿದೀನಿ" ಅಂತ ಹೇಳಬೇಕೆನಿಸಿತು. ಆದರೆ ನಾಲಿಗೆ ಸಹಕರಿಸಲಿಲ್ಲ. ಈತನ ಕೈಲಿ ಇಂಥಹ ಮಾತು ಅನ್ನಿಸಿಕೊಂಡೆನಲ್ಲಾ ಎಂದು ಬೇಂಬಿಗೆ ತುಂಬಾ ಅವಮಾನವೆನಿಸಿತು.

ಆ ದೊಡ್ಡ ಜಿಂಕೆ ಹಾಗೆ ಹೇಳಿ, ಕೂಡಲೇ ಬಿರುಸಾಗಿ ನಡೆದು ಪೊದೆ ಗಳಲ್ಲಿ ಮರೆಯಾಯಿತು.

ಆತನ ನಡಿಗೆ ನೋಡಿದ ಬೇಂಬಿ ಆಶ್ಚರ್ಯದಿಂದ ದಂಗಾದ. ಆತ ಹೆಜ್ಜೆಯಿಡುತ್ತಿದ್ದಾಗ ಒಂದು ಎಲೆ ಸಹ ಗಲಗಲ ಎನ್ನಲಿಲ್ಲ. ಸ್ವಲ್ಪ ಹೊತ್ತಾ ದಮೇಲೆ ಬೇಂಬಿ ವಾಸನೆ ನೋಡಿದ. ವಾಸನೆಯೇ ಬರಲಿಲ್ಲ.

ಆತನನ್ನು ಮತ್ತೊಮ್ಮೆ ನೋಡಬೇಕೆಂದೂ ನಾನು ದೊಡ್ಡವನಾಗಿದ್ದೇನೆಂದು ರುಜುವಾತುಪಡಿಸಿಕೊಳ್ಳಬೇಕೆಂದೂ ಮನಸಿನಲ್ಲಿಯೇ ನಿಶ್ಚಯಿಸಿಕೊಂಡ ಬೇಂಬಿ.

ಈ ಸಲ ಅಮ್ಮ ವಾಪಸು ಬಂದನಂತರ ನಾನು ಅಪ್ಪನನ್ನು ನೋಡಿದ ವಿಷಯ ಹೇಳಲಿಲ್ಲ. ಗುಟ್ಟಾಗಿರಿಸಲೂ. ಈ ಸಲ ಅಮ್ಮ ಮಾಯವಾದಾಗ ಅಮ್ಮನನ್ನು ಕೂಗಿ ಕರೆಯಲಿಲ್ಲ. ಒಂಟಿಯಾಗಿ ಅಡವಿಯಲ್ಲಿ ತಿರುಗಾಡುತ್ತಾ ದೊಡ್ಡ ಜಿಂಕೆ ಕಾಣಸಿಗುತ್ತದೆಯೇನೋ ಎಂದು ಮೈಯೆಲ್ಲಾ ಕಿವಿಯಾಗಿಸಿಕೊಂಡು ಎದುರುನೋಡಿದ. ನೋಡಿದಿರಾ, ನಾನೇನು ಹೆದರಿಲ್ಲ" ಎಂದು ಹೇಳಿ ಅವರ ಮೆಚ್ಚುಗೆ ಪಡೆಯಬೇಕೆಂಬುದೇ ಅವನ ಅಪೇಕ್ಷೆಯಾಗಿತ್ತು.

ಆದರೆ ತಾನು ಅಪ್ಪನನ್ನು ನೋಡಿದ ವಿಷಯವನ್ನು ಗೋಬೋ, ಫಲೀನಾರ ಬಳಿ ರಹಸ್ಯವಾಗಿರರಲಿಲ್ಲ. ಅವನು ಆ ವಿಷಯ ಹೇಳುತ್ತಿದ್ದಾಗ ಅವರಿಬ್ಬರೂ ಉಸಿರು ಬಿಗಿಹಿಡಿದು. ಕೇಳಿದರು. ಆ ಸ್ನೇಹಿತರಿಗಿದು ತುಂಬಾ ಆಶ್ಚರ್ಯಕರವಾದ ವಿಷಯವಾಗಿತ್ತು. ಅಂತಹ ಸಂಘಟನೆ ಅದುವರೆವಿಗೂ ಅವರಿಗೆ ಎದುರಾಗಿರಲಿಲ್ಲ.

"ತುಂಬಾ ಹೆದರಿರಬೇಕಲ್ಲವೇ ನೀನು ?" ಉತ್ಕಂಠತೆಯಿಂದ ಕೇಳಿದ ಗೋಬೋ.

"ಹಾಂ....ಅಲ್ಲವೇ ಮತ್ತೆ !" ಎಂದವನೇ, ಬೇಂಬಿ ಅಷ್ಟರಲ್ಲಿ ಸಾವರಿಸಿಕೊಂಡು "ಸ್ವಲ್ಪ ಹೆದರಿದ್ದು ನಿಜ. ಆದರೆ ತುಂಬಾ ಹೆದರಿಕೆಯೇನಾಗಲಿಲ್ಲ. ಪರವಾಗಿಲ್ಲ. ಮಾಮೂಲಾಗಿಯೇ ಇದ್ದೆ" ಎಂದ.

"ಅದೇ ನಾನಾಗಿದ್ದರೆ ಹೆದರಿಕೆಯಿಂದ ಸಾಯುತ್ತಿದ್ದೆ" ಎಂದ ಗೋಬೋ.

ತನಗೆ ನಿಜವಾಗಿಯೂ ಗೋಬೋ ಅಂದುಕೊಂಡಷ್ಟು ಭಯವಾಗಲಿಲ್ಲವೆನಿಸಿತು ಬೇಂಬಿಗೆ.

"ಅಬ್ಬಾ, ನನ್ನಿಂದಾಗದು ತಲೆಯೆತ್ತಿ ನೋಡಲೂ ಇರೆ. ವಿಪರೀತ ಹೆದರಿಕೆಯಾದರೆ ಎದೆ ಡವಡವನೆ ಹೊಡೆದುಕೊಳ್ಳುತ್ತೆ, ಬಾಯಿಂದ ಮಾತೇ

ಹೊರಡದು."

ಫಲೀನಾ ಮೌನವಾಗಿ ಬೇಂಬಿ ಹೇಳಿದ್ದನ್ನು ಕುರಿತು ಆಲೋಚಿಸುತ್ತಿದ್ದಳು.

ಕೆಲವು ದಿನಗಳ ನಂತರ ಅವರು ಒಬ್ಬರನ್ನೊಬ್ಬರು ನೋಡಿದಾಗ, ಬೇಂಬಿ ಕಾಣಿಸಿದ ಕೂಡಲೇ ಗೋಬೋ ಫಲೀನಾ ಅವನಿದ್ದೆಡೆಗೆ ಓಡುತ್ತಾ ಬಂದರು.

"ನಿನಗೋಸ್ಕರಾನೇ ಹುಡುಕುತ್ತಾ ಇದ್ದೀನಿ" ಎಂದ ಗೋಬೋ.

"ಹಾಂ, ಹೌದು, ನೀನು ಇದಕ್ಕೆ ಮುಂಚೆ ಒಬ್ಬರನ್ನು ನೋಡಿದೆ ಅಂತ ಹೇಳಿದೆಯಲ್ಲಾ, ಅವರು ಯಾರು ಅಂತ ಗೊತ್ತಾಯಿತು ನಮಗೆ" ಎಂದಳು ಫಲೀನಾ.

ಬೇಂಬಿ ಕುಣಿದು ಕುಪ್ಪಳಿಸಿ ಕೇಳಿದ "ಯಾರಾತ?"

"ನಿನಗೆ ಹೇಗೆ ಗೊತ್ತಾಯಿತು?"

"ನಮ್ಮ ಅಮ್ಮ ಹೇಳಿದ್ದು.

ಬೇಂಬಿ ಗಾಬರಿಯಿಂದ "ಹಾಗಾದರೆ ನನ್ನ ರಹಸ್ಯವನ್ನು ಹೇಳಿಬಿಟ್ಟರಾ?" ಎಂದ.

ಇಬ್ಬರೂ ಹೌದೆಂದು ತಲೆಯಾಡಿಸಿದರು.

"ಅದು ರಹಸ್ಯ ಎಂದು ಹೇಳಿರಲಿಲ್ಲವೇ?" ಬೇಂಬಿ ಮುಖ ದುಮ್ಮಿಸಿಕೊಂಡ.

"ನಾನಲ್ಲ ಹೇಳಿದ್ದು, ಎಲ್ಲಾ ಫಲೀನಾನೇ" ಎಂದು ಗೋಬೋ ತಾನು ನಿರ್ದೋಷಿಯೆಂದು ಹೇಳಿಕೊಂಡ.

ಫಲೀನಾ ಅದನ್ನು ಲೆಕ್ಕಿಸಲಿಲ್ಲ. ಉತ್ಸಾಹದಿಂದ "ರಹಸ್ಯ ಅಂದೆ ಅಂತಿಟ್ಟುಕೋ. ಅದರೇನಂತೆ? ನಿನಗೆ ಕಾಣಿಸಿಕ್ಕಿದ್ದು ಯಾರು ಅಂತ ತಿಳಿದುಕೊಳ್ಳಬೇಕೆನಿಸಿತು, ಕೇಳಿದೆ. ಈಗ ನಮಗೆ ವಿಷಯ ತಿಳಿಯಿತಲ್ಲಾ! ಇದು ನಿನಗೆ ಸಂತೋಷವಲ್ಲವೇ ?" ಎಂದಳು.

ಬೇಂಬಿ ಒಪ್ಪಿಕೊಳ್ಳಲೇ ಬೇಕಾಯ್ತು. ಅವನ ಜಿಜ್ಞಾಸೆಯನ್ನು ಕಂಡು, ಫಲೀನಾ ಮುದಿನಾಯಕನನ್ನು ಕುರಿತು ಎಷ್ಟೋ ವಿಷಯಗಳನ್ನು ತಿಳಿಸಿದಳು.

"ಎಲ್ಲರಿಗಿಂತಲೂ, ಎಲ್ಲಾ ವಿಷಯಗಳಲ್ಲೂ ಅಧಿಕ ಆತ.

"ನಾಯಕನಲ್ಲವೇ ಮತ್ತೆ! ಆತನಿಗೆ ಸರಿ ಸಮಾನರು ನಮ್ಮಲ್ಲಿ ಮಾತ್ರ ಯಾರೂ ಇಲ್ಲ. ಆತನ ವಯಸ್ಸು ಎಷ್ಟಿರಬಹುದೆಂದು ಯಾರಿಗೂ ತಿಳಿಯದು. ಬಂಧುಗಳು ಯಾರಾದರೂ ಇದಾರೆಂಬೋ—ಇಲ್ಲವೋ ಗೊತ್ತಿಲ್ಲ. ಆತ ಬಹಳ ಅಪರೂಪವಾಗಿ ಕಾಣಿಸಿಕೊಳ್ಳುತ್ತಾನೆ. ಕೆಲವು ದಿನಗಳಂತೂ ಆತನ ದರ್ಶನವೇ ಆಗದು. ಎಲ್ಲಿ ಹೋದನೋ, ಬದುಕಿರುವನೋ ಇಲ್ಲವೋ ಎಂದುಕೊಳ್ಳುವುದೂ ಉಂಟು. ಮತ್ತೆ ಆಕಸ್ಮಾತ್ತಾಗಿ ಕಾಣಿಸಿಕೊಳ್ಳುತ್ತಾನೆ. ಸಧ್ಯ ಬದುಕಿದ್ದಾನೆ ಅಂದುಕೊಳ್ಳುತ್ತಾರೆ.

"ಇಷ್ಟು ದಿನ ಕಾಣಿಸಲೇ ಇಲ್ಲ ಎಲ್ಲಿ ಹೋಗಿದ್ದಿರಿ?" ಅಂತ ಯಾರೂ ಕೇಳುವುದಿಲ್ಲ. ಆತ ಸಹ ಯಾರೊಂದಿಗೂ ಮಾತನಾಡುವುದಿಲ್ಲ. ಆತನ ವಾಸಸ್ಥಳ ಯಾವುದು, ಆತ ಯಾವ ದಾರಿಗಳಲ್ಲಿ ಓಡಾಡುತ್ತಾನೆ ಎಂಬುದು ಸಹ ಯಾರಿಗೂ ಗೊತ್ತಿಲ್ಲ. ಎಲ್ಲಿಯೋ ದೂರದಿಂದ ಬರಬಹುದು ಅಂದುಕೊಳ್ಳುತ್ತಾರೆ ಎಲ್ಲರೂ. ಆತನಿಗೆ ಭಯ ಎಂದರೇನೆಂಬುದೇ ಗೊತ್ತೇ ಇಲ್ಲ. ಅಪಾಯ ಅಂದರೆ ಲೆಕ್ಕವೇ ಇಲ್ಲ. ಇನ್ನೂ ಒಂದು ವಿಷಯ ಏಕೆಂದರೆ ನಮ್ಮವರು ಆಗಾಗ ತಮ್ಮಲ್ಲಿ ತಾವು ಜಗಳವಾಡುವುದುಂಟು. ಒಂದೊಂದು ಸಲ ತಮಾಷೆಗೆ ಕೆಲವೊಂದು ಸಲ ನಿಜವಾಗಿ. ಆದರೆ ಆತನಿಗೆದುರಾಗಿ ನಿಂತವರು ಒಬ್ಬರೂ ಇಲ್ಲ. ಇದ್ದರೂ ಆ ವಿಷಯ ಈಗ ಯಾರಿಗೂ ತಿಳಿಯದು. ಇದಕ್ಕೆ ಮುಂಚೆ ಆತನೊಂದಿಗೆ ಜಗಳಕಾದವರಾರಾದರೂ ಇದ್ದಿದ್ದರೂ ಈಗ ಒಬ್ಬರೂ ಬದುಕಿಲ್ಲ...ಆತ ಮಹಾನಾಯಕ."

ಬೇಂಬಿ ಮುಗ್ಧನಾಗಿ ಕೇಳಿದ. ಕೇಳಿ ಸಂತೋಷಗೊಂಡ.

ಆವನು ಫಲೀನಾ ಗೋಬೋರನ್ನು ಕ್ಷಮಿಸಿಬಿಟ್ಟ. ಅವರು ತನ್ನ

ರಹಸ್ಯವನ್ನು ಹೊರಗೆಡವದಿದ್ದರೆ ಇಷ್ಟು ವಿಷಯಗಳು ತಿಳಿಯುತ್ತಲೇ ಇರಲಿಲ್ಲ. ಆದರೂ ಬೇಂಬಿ ತನ್ನ ರಹಸ್ಯದಲ್ಲಿ ಸ್ವಲ್ಪ ಭಾಗವನ್ನು ಅವರಿಗೂ ತಿಳಿಸದೆ ತನ್ನಲ್ಲೇ ಬಚ್ಚಿಟ್ಟುಕೊಂಡಿದ್ದ. "ಒಂಟಿಯಾಗಿರಲಾರೆ ಎನ್ನಲು ನಾಚಿಕೆಯಾಗುವುದಿಲ್ಲವೇ ?" ಎಂದ ಮಾತನ್ನು ಸ್ನೇಹಿತರಿಗೆ ಹೇಳಲ್ಲಿಲ್ಲ ಅವನು. ಅದೊಂದನ್ನು ಬಿಟ್ಟು ಮಿಕ್ಕೆಲ್ಲವನ್ನೂ ಹೇಳಿದ್ದ. 'ಅದನ್ನೂ ಹೇಳಿಬಿಟ್ಟಿದ್ದರೆ ನಾಲ್ಕೂ ಜನದ ಮುಂದೆ ತಲೆ ತಗ್ಗಿಸಬೇಕಾಗುತ್ತಿತ್ತು' ಎಂದುಕೊಂಡ.

ಆ ರಾತ್ರಿ ಚಂದ್ರೋದಯವಾದ ಮೇಲೆ ಅಮ್ಮ ಹಿಂತಿರುಗಿ ಬಂದಿದ್ದಳು. ಅಕಸ್ಮಾತ್ತಾಗಿ ಮತ್ತಿಮರದ ಹಿಂದಿನಿಂದ ನುಸುಳಿ ಬಂದಿದ್ದಳು. ಬಂದ ನಂತರವೂ ಏನೂ ಮಾತನಾಡಲಿಲ್ಲ. ನಿಶ್ಶಬ್ದವಾಗಿ ನಿಂತು ಬೇಂಬಿಯ ಕಡೆ ನೋಡಿದಳವಳು. ಅವನೇ ಅವಳ ಹತ್ತಿರ ಹೋದ.

ಆ ರಾತ್ರಿ ಬೇಂಬಿಗೆ ಮತ್ತಷ್ಟು ಹೊಸ ವಿಷಯಗಳು ತಿಳಿದು ಬಂದವು.

ಅಮ್ಮ ತುಂಬಾ ಬಳಲಿದ್ದಳು. ಅವಳಿಗೆ ತುಂಬಾ ಹಸಿವೂ ಆಗಿತ್ತು. ಆದ್ದರಿಂದಲೇ ಅವರಿಬ್ಬರೂ ಹೆಚ್ಚು ದೂರ ತಿರುಗಾಡಲು ಹೋಗಲ್ಲಿಲ್ಲ. ಇಬ್ಬರೂ ಮೆಲ್ಲನೆಯಲ್ಲಿ ಮೈದಾನದ ಕಡೆ ಹೊರಟರು. ಮಂಜಿನಲ್ಲಿ ನೆನೆದ ತಣ್ಣನೆಯ ಗರಿಕೆ ಹುಲ್ಲನ್ನು ಅಮ್ಮ ತಿನ್ನಲಾರಂಭಿಸಿದಳು. ಅದಾದ ನಂತರ, ಇಬ್ಬರೂ ಚಿಕ್ಕಂದಿನಲ್ಲಿ ಆಡಿದಂತೆ ಜೂಜಾಟ, ಕಣ್ಣುಮುಚ್ಚಾಲೆ ಆಟ ಆಡಿದರು. ಆಡುತ್ತಾ ಆಡುತ್ತಾ, ಮೈಮರೆತು ಅಡವಿಯ ಮಧ್ಯದ ವರೆಗೂ ಹೋಗಿಬಿಟ್ಟರು. ಪೊದೆಗಳಲ್ಲಿ ಕೀಟಗಳ ಸದ್ದು ಕಿವಿಗಳಲ್ಲಿ ಮೊರೆಯುವಂತೆ ಕೇಳಿಬರುತ್ತಿತ್ತು. ಇಷ್ಟರಲ್ಲಿ ಅಮ್ಮ 'ಆ—ವೂ ! ಆ—ವೂ !' ಎಂದು ಗಟ್ಟಿಯಾಗಿ ಕೂಗಿದಳು.

ಬೇಂಬಿಗೆ ಅದೇಕೆಂದು ಅರ್ಥವಾಗಿಲಿಲ್ಲ. ಆಶ್ಚರ್ಯದಿಂದ ಅಮ್ಮನ ಕಡೆ ನೋಡಿದ.

ಇಷ್ಟರಲ್ಲಿ ಗಿಡಗಳ ಮರೆಯಿಂದ ಹೊಸ ಜೀವಿಯೊಂದು ಕಾಣಿಸಿಕೊಂಡಿತು.

ಅದೂ ಸಹ ತನ್ನ ತಾಯಿಯಂತೆ ಏಣಿ ಚಿಕ್ಕಮ್ಮನಂತೆ, ತನ್ನ ಇತರ ಬಂಧುಗಳಂತೆಯೋ ಇತ್ತು. ಆದರೆ ಒಂದು ವ್ಯತ್ಯಾಸ ಮಾತ್ರವಿತ್ತು. ಅದು ಆಕಾರದಲ್ಲಿ ತನ್ನವರಿಗಿಂತಾ ತುಂಬಾ ದೊಡ್ಡದಾಗಿತ್ತು. ಅದನ್ನು ನೋಡಲು ಕತ್ತನ್ನು ಮೇಲೆತ್ತಬೇಕಾಗಿ ಬಂತು ಬೇಂಬಿಗೆ.

ಬೇಂಬಿ ಸಹ ಗಟ್ಟಿಯಾಗಿ "ಆ—ವ್ಹಾ ! ಆ—ವ್ಹಾ !" ಎಂದು ಕೂಗಿದ.

ಆದರೆ ತಾನೇಕೆ ಹಾಗೆ ಕೂಗಿದನೆಂದು ತಿಳಿಯದು. ಕೂಗದೇ ಇರಲಾರದಾದ, ಅಷ್ಟೇ.

ಅಷ್ಟರಲ್ಲಿ ಅವರ ಹಿಂದೆ ಮತ್ತೆರಡು ಅಂತಹುದೇ ಜೀವಿಗಳು ಹೊರ ಬಂದವು. ಅವರ ಹಿಂದೆ ಮತ್ತೊಂದು. ಕೊನೆಗಲ್ಲಿ ಬಂದ ಜೀವಿ ಎಲ್ಲಕ್ಕಿಂತ ದೊಡ್ಡದಾಗಿ ಪರ್ವತದಂತಿತ್ತು. ಕತ್ತಿನ ಮೇಲೆ ಜೂಲಿನಂತಹುದೇನೋ ಇತ್ತು. ನೆತ್ತಿಯಮೇಲೆ ಗಿಡದಂತಿದ್ದ ಕಿರೀಟ.

ಅವರನ್ನು ನೋಡಿದರೆ ಬೇಂಬಿಗೆ ಭಯವೆನಿಸಲಿಲ್ಲ. ಅವರ ಮುಂದೆ ತಾವು ಎಷ್ಟು ಚಿಕ್ಕವರಾಗಿದೇವಲ್ಲಾ ಎನಿಸಿತು. "ಆ—ವ್ಹಾ ! ಆ—ವ್ಹಾ !" ಎಂದು ಮತ್ತೆ ಕೂಗಿದ.

ಆ ಜೀವಿಗಳು ಮತ್ತೆ ಅಲ್ಲಿಂದ ದೂರವಾಗಿ ಹೋದವು. ಬೇಂಬಿ ಮಾತ್ರ ಆಗಾಗ "ಆ. ವ್ಹಾ. ಆ. ವ್ಹಾ" ಎಂದು ಕೂಗುತ್ತಲೇ ಇದ್ದ.

"ಇನ್ನು ಸಾಕು, ಸುಮ್ಮನಿರು. ಅವರು ಹೊರಟು ಹೋದರು" ಎಂದಳು ಅಮ್ಮ.

"ಅಮ್ಮಾ, ಅವರು ಯಾರಮ್ಮಾ ?" ಎಂದು ಕೇಳಿದ ಬೇಂಬಿ.

"ಅವರೇ ? ನಮಗೆ ದೂರದ ಬಂಧುಗಳು. ಉತ್ತರ ದಿಕ್ಕಿನ ಕೊನೆಯಲ್ಲಿನ ಪ್ರದೇಶದಲ್ಲಿರುತ್ತಾರೆ. ತುಂಬಾ ಒಳ್ಳೆಯವರು."

"ಅವರು ಯಾರನ್ನೂ ಏನೂ ಮಾಡುವುದಿಲ್ಲವಷ್ಟೇ !"

"ನನಗೆ ತಿಳಿದ ಮಟ್ಟಿಗೆ ಯಾರನ್ನೂ ಏನೂ ಮಾಡಿಲ್ಲ. ಆದರೆ

ಅವರನ್ನು ಕುರಿತು ತರಹವಾರಿ ಮಾತನಾಡಿಕೊಳ್ಳುವವರ ಮಾತು ನಮಗೇಕೆ ಬಿಡು."

"ದೂರದ ಬಂಧುಗಳಾದಲ್ಲಿ ನಮಗೇಕೆ ಅಪಕಾರ ಮಾಡುತ್ತಾರೆ ಬಿಡು" ಎಂದ ಬೇಂಬಿ, ಸ್ವಗತದಂತೆ.

"ಹೌದು ಅವರೇನೂ ಮಾಡೋಲ್ಲ" ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದು, ಮತ್ತೆ ಹೇಳಿದಳು. "ಅವರು ಬಂದಾಕ್ಷಣ ಎಲ್ಲರೂ ಹೆದರುತ್ತಾರೆ. ಕಾರಣವೂ ಗೊತ್ತಿಲ್ಲ. ನನಗೂ ಸಹ ಏನೋ ಗಾಬರಿ, ಯಾಕೇಂತ ಗೊತ್ತಿಲ್ಲ. ಯಾವಾಗಲೂ ಹೀಗೇನೇ"

ಬೇಂಬಿ ಆ ನಂತರವೂ ಅವರನ್ನೇ ಕುರಿತು ಆಲೋಚಿಸುತ್ತಿದ್ದ. ಸರಿಯಾಗಿ ಇದೇ ಸಮಯದಲ್ಲಿ ಗೂಬೆ ಎಂದಿನಂತೆ ಭಯಂಕರವಾಗಿ ಕೂಗಿತು. ಆದರೆ ಬೇಂಬಿ ತನ್ನ ಆಲೋಚನೆಯಲ್ಲಿ ತಾನಿದ್ದುದರಿಂದ ಆ ಕೂಗನ್ನು ಅಲಕ್ಷಿಸಿದ್ದ.

ಗೂಬೆ ಕೆಳಗಿನ ಕೊಂಬೆಯವರೆವಿಗೂ ಇಳಿದು ಬಂದು ತಾನಾಗಿಯೇ ಮಾತನಾಡಿಸಿತು. "ನಾನು ನಿಮ್ಮನ್ನು ಭಯಪಡಿಸಿದಂತೆ ಕಾಣುತ್ತದೆ, ಅಲ್ಲವೇ ?"

"ಹೌದು, ನಾನು ತುಂಬಾ ಹೆದರಿಬಿಟ್ಟೆ."

ಗೂಬೆ ಸಂತೋಷವಾಯಿತು. ಅದನ್ನು ತೋರಿಸಿಕೊಳ್ಳದೆ ಕ್ಷಮಾಪಣೆ ಕೇಳಿಕೊಳ್ಳುವಂತೆ "ತಪ್ಪು ತಿಳಿದುಕೊಳ್ಳಬೇಡಿ, ನನ್ನದೊಂದು ದುರಭ್ಯಾಸವಾಗಿಬಿಟ್ಟಿದೆ" ಎಂದು ರೆಕ್ಕೆಗಳನ್ನು ಪಟಪಟನೆ ಬಡಿದು, ಮೈಯನ್ನು ಹಿಗ್ಗಿಸಿ, ಚೆಂಡಿನಂತೆ ಉಬ್ಬಿಸಿ ಮೂಗಿನಿಂದ ರೆಕ್ಕೆಗಳನ್ನು ಸವರಿಕೊಳ್ಳುತ್ತಾ ಕುಳಿತುಕೊಂಡಿತು.

"ಪರವಾಗಿಲ್ಲ ಬಿಡಿ, ಈಗ ತಾನೇ ನಿಮಗಿಂತ ಹೆದರಿದವರನ್ನ ನೋಡಿದೆ" ಎಂದ ಬೇಂಬಿ.

ಗೂಬೆಗೆ ನಿರುತ್ಸಾಹವುಂಟಾಯಿತು. ಕುತೂಹಲದಿಂದ "ಯಾರದು ?" ಎಂದು ಕೇಳಿತು.

ಬೇಂಬಿ ತನ್ನ ದೂರದ ಜ್ಞಾತಿಗಳನ್ನು ಕುರಿತು ಹೇಳಿದ.

"ಓ ನಮಗೆಷ್ಟು ಜನ ಜ್ಞಾತಿಗಳಿದ್ದಾರೆಂತ ಲೆಕ್ಕವೇ ಇಲ್ಲ. ಹಗಲು ಸ್ವಲ್ಪ ಹೊತ್ತು ಮುಖ ತೋರಿಸಿದರೆ ಸಾಕು, ಜಿಡ್ಡಿನಂತೆ ಅಂಟಿಕೊಂಡು ಬಿಡುತ್ತಾರೆ. ಬಿಡಿಸಿಕೊಳ್ಳೋದೇ ಕಷ್ಟವಾಗತ್ತೆ. ನನಗೆ ಈ ಜ್ಞಾತಿಗಳೆಂದರೆ ಆಗೋಲ್ಲ. ಅವರನ್ನು ಆದಷ್ಟು ದೂರದಲ್ಲೇ ಇಟ್ಟಿರಬೇಕು" ಎಂದಿತು ಗೂಬೆ.

"ನಮ್ಮ ಜ್ಞಾತಿಗಳನ್ನು ಕುರಿತು ನನಗೇನೂ ಗೊತ್ತೇ ಇಲ್ಲರೀ" ಎಂದು ಬೇಂಬಿ ನಾಚುತ್ತಾ.

"ಹಾಂ, ಅದೇ ಒಳ್ಳೇದು, ತಿಳಿದುಕೊಳ್ಳದ ಹೋದರೆ ಏನೀಗ ಮುಳುಗಿ ಹೋದದ್ದು ? ನಾನು ಹೇಳ್ತೀನಿ ಕೇಳಿ. ಅವರ ಜತೆ ಸ್ನೇಹ ಒಳ್ಳೇದಲ್ಲ. ಈಗ ನಾನಿದೀನಿ ನಾವಿಬ್ಬರೂ ಸ್ನೇಹಿತರು. ಇದು ಇಬ್ಬರಿಗೂ ಒಳ್ಳೇದು."

ಬೇಂಬಿ ಮಧ್ಯದಲ್ಲಿ ಏನೋ ಹೇಳ ಹೋದ. ಆದರ ಅವನಿಗೆ ಆ ಅವಕಾಶ ಕೊಡಲಿಲ್ಲ.

"ನಿಮಗೇನು ಗೊತ್ತು, ಇನ್ನೂ ಹುಡುಗುತನ. ನಾನಾದರೆ ಅನುಭವದಿಂದ ಹೇಳ್ತಿದೀನಿ. ಇದರ ಮೇಲೆ ನಿಮ್ಮಿಷ್ಟ. ಅದೂ ಅಲ್ಲದೆ ನಿಮ್ಮ ಕುಟುಂಬದ ವಿಷಯದಲ್ಲಿ ನಾನು ತಲೆ ಹಾಕಬಾರದಲ್ಲವೇ ?" ಎಂದಿತು, ಕಣ್ಣು ತಿರುಗಿಸುತ್ತಾ.

ಒಂದು ದಿನ ತುಂಬಾ ಭಯಂಕರವಾದ ಸಂಘಟನೆಯೊಂದು ಒದಗಿತು.

ಆ ದಿನ ಮುಂಜಾನೆ ಎಷ್ಟೋ ಪ್ರಶಾಂತವಾಗಿತ್ತು. ಎಲೆಗಳ ಮೇಲೆಲ್ಲಾ ಸ್ವಚ್ಛವಾದ ಮಂಜಿನ ಹನಿ ಕಾಣುತ್ತಿತ್ತು ಮೆಲ್ಲ-ಮೆಲ್ಲನೆ ಬೀಸುತ್ತಿದ್ದ ಗಾಳಿ ಸುವಾಸನೆಯಿಂದ ಕೂಡಿತ್ತು. ಮೋಡಗಳಿಲ್ಲದ ಆಕಾಶ, ನೀಲವಾಗಿ, ಶುಭ್ರವಾಗಿತ್ತು, ಮೈದಾನ ಎಂದಿಗಿಂತ ಒಳ್ಳೆಯ ಪರಿಮಳದಿಂದ ಕೂಡಿತ್ತು.

"ಕಿಚ್, ರಿಚ್, ರಿಚ್" ಎಂದು ಗುಬ್ಬಚ್ಚಿಗಳು ಒಂದನ್ನೊಂದು ಮೂಗಿನಿಂದ ಚುಚ್ಚುತ್ತಾ ಆಟವಾಡುತ್ತಿದ್ದುವು.

"ಊಂಗ್, ಊಂಗ್" ಎಂದು ಪಾರಿವಾಳ ಅವುಗಳನ್ನು ಗದರಿಸಿತು. "ಬೆಳಗಾಯಿತೋ ಇಲ್ಲವೋ, ಆಗಲೇ ಶುರುಮಾಡಿದಿರಾ ನಿಮ್ಮ ಗಲಾಟೆ" ಎಂಬಂತೆ.

"ಟಿಚ್ ! ಟಿಚ್ ! ರರ್ ರರ್" ಎಂದು ಮರಕುಟುಕ ತನ್ನ ಸಿಟ್ಟನ್ನು ವ್ಯಕ್ತಪಡಿಸಿತು. "ನಿಮಗೆ ಬೇಡವಾದರೆ, ಇನ್ನ್ಯಾರಿಗೂ ನಿದ್ದೆ ಬೇಡವೇ" ಎಂಬಂತೆ.

ನೂರಾರು ಇಂಪಾದ ಕಂಠಗಳು, ಮೆಲುದನಿಯಲ್ಲಿ ಪ್ರಭಾತ ಗೀತೆಯನ್ನು ಆಲಾಪಿಸಲು ಪ್ರಾರಂಭಿಸಿದ್ದುವು.

"ಓಪ್ಪೂ ! ಓಪ್ಪೂ ಕುಯುಚ್, ಕಾಯುಚ್ ಟ್ರಿಕ್, ಟ್ರಿಕ್" ಮೈನಾ ಹಾರಿಬಂದು ಮತ್ತಿಮರದ ಕೊಟ್ಟ ಕೊನೆಯ ಕೊಂಬೆಯ ಮೇಲೆ ಕುಳಿತುಕೊಂಡಿತು. ಅರಣ್ಯದ ಕಾವಲುಗಾರರಲ್ಲಿ ನಾನೂ ಒಬ್ಬಳು ಎಂಬಂತೆ ಕತ್ತು ಚಾಚಿ ನೋಟ ಹರಿದಷ್ಟು ದೂರ. ನಾಲ್ಕೂಕಡೆ ಜಾಗರೂಕತೆಯಿಂದ ಪರಿಶೀಲಿಸಿ ನೋಡಿತು.

ದೂರದ ಮೂಡಣ ದಿಕ್ಕಿನಲ್ಲಿ ಆಕಾಶದ ಅಂಚಿನಲ್ಲಿ ಕುಸುಮ ಪರಾಗ ರಂಜಿತವಾದಂತೆ ಬಣ್ಣ ಬಣ್ಣಗಳಿಂದ, ಆಕಾಶ ಅರಳುತ್ತಿದೆಯೇನೋ ಎಂಬಂತೆ ಕಾಣುತ್ತಿತ್ತು. ಮತ್ತೊಂದು ಕೊಂಬೆಯ ಮೇಲೆ ಕೋಗಿಲೆ ರಾಗಾಲಾಪನೆಯನ್ನು ಪ್ರಾರಂಭಿಸಿತ್ತು. ಅದರ ಪಂಚಮ ಸ್ವರದ ತರಂಗಗಳು ತೆರೆ ತೆರೆಯಾಗಿ. ಜೇನಿನ ಹೊಳೆಯಾಗಿ. ಅರಣ್ಯವನ್ನೆಲ್ಲಾ ಆವರಿಸಿತ್ತು.

ಪಾರಿವಾಳಗಳು ರೆಕ್ಕೆ ಬಡಿಯುತ್ತಾ, ಕೊಂಬೆಯಿಂದ ಕೊಂಬೆಗೆ ಹಾರುತ್ತಿದ್ದುವು. ನವಿಲು ತನ್ನ ಪಂಚವರ್ಣದ ಕೊರಳನ್ನು ವೈಯ್ಯಾರದಿಂದ ತಿರುಗಿಸುತ್ತಾ, ರಾತ್ರಿ ತಾನು ನಿದ್ದೆಮಾಡಿದ ಕೊಂಬೆಗಳ ಮೇಲಿಂದ ವಿಲಾಸದಿಂದ ಇಳಿದು ಬರುತ್ತಿತ್ತು—ನಿನ್ನವರೊಂದಿಗೆ ಅವುಗಳ ಕೂಗು ಎಲ್ಲಾ ಪಕ್ಷಿಗಳ

ಕೂಗನ್ನೂ ಅಧಿಗಮಿಸಿ ಕೇಳಿ ಬರುತ್ತಿತ್ತು.

ಕಾಡು ಕಾಗೆಗಳು ತಮ್ಮ ಗೊಗ್ಗರ ಕಂಠಗಳಿಂದ ಮಯೂರಗಳ ಷಡ್ಜಮ ಕ್ರೇಂಕಾರಗಳಿಗೆ ಅಪಶ್ರುತಿ ಹಾಡುತ್ತಿದ್ದುವು.

ಅರಣ್ಯ ನಿದ್ರೆಯಿಂದ ಎಚ್ಚೆತ್ತ ಪ್ರಭಾತ ಸಮಯ ಅದು.

ಬೇಂಬಿ ತನ್ನ ಪೊದೆಮನೆಯಿಂದ ಹೊರಬಿದ್ದು, ಬಸರಿಮರವನ್ನು ದಾಟಿ ಮೈದಾನವನ್ನು ಪ್ರವೇಶಿಸಿದ. ಎಳೆಯ ಚಿಗುರಿನಿಂದ ಕೂಡಿದ ಹಸಿರು ಹುಲ್ಲು. ಹುಲ್ಲಿನತುಂಬಾ ಬಣ್ಣ ಬಣ್ಣದ ಹೂಗಳು. ಹೂಗಳ ಮೇಲೆ ಅದೇ ತಾನೇ ಬಿದ್ದ ಮಂಜಿನಹನಿ. ಅಷ್ಟೇ ಅಲ್ಲದೆ ಮೈ ಮರೆಯುವಂತೆ ಮಾಡುವ ಸುವಾಸನೆ ವಾತಾವರಣದಲ್ಲಿ ಹರಡಿಕೊಂಡಿತ್ತು. ಮೈದಾನದ ತುಂಬಾ ಎಲ್ಲಾ ವಿಧವಾದ ಜೀವಿಗಳು, ಪಕ್ಷಿಗಳು, ಕೀಟಗಳು ತುಂಬಿದ್ದವು.

ಬೇಂಬಿಯ ಸ್ನೇಹಿತರೆಲ್ಲಾ ಆಗಲೇ ಬಂದು ಬಿಟ್ಟಿದ್ದರು. ಮೊಲಮಾವ ಒಂದು ಕಡೆ ಕುಳಿತು ದೀರ್ಘಾಲೋಚನೆಯಲ್ಲಿ ಮುಳುಗಿದಂತಿದ್ದ. ನೆಲ ತಾಕುತ್ತಿದ್ದ ತನ್ನ ಗರಿಗಳನ್ನು ಮೆಲ್ಲ ಮೆಲ್ಲನೆ ಅಲುಗಾಡಿಸುತ್ತಾ ಹೆಮ್ಮೆ ಯಿಂದ ಬೀಗುತ್ತಾ, ಮೆಲ್ಲಡಿಯಿಡುತ್ತಿತ್ತು ನವಿಲು.

ಬೇಂಬಿಯ ಪಕ್ಕದಲ್ಲಿಯೇ ಒಬ್ಬಾತ ಮೇವು ತಿನ್ನುತ್ತಿದ್ದ. ಯವ್ವನ ದಲ್ಲಿದ್ದ ಆತನ ಶರೀರ, ಮಂಜಿನಿಂದ ನೆನೆದು ಕೆಂಪಗೆ ಹೊಳೆಯುತ್ತಿತ್ತು. ಬೇಂಬಿಯನ್ನು ಆತ ಗಮನಿಸಿದನೋ ಇಲ್ಲವೋ, ಇಲ್ಲಾ ಗಮನಿಸಿದರೂ ಮಕ್ಕಳೊಂದಿಗೆ ನನಗೇನು ಎನ್ನುವ ನಿರ್ಲಕ್ಷ್ಯವೋ, ಮತ್ತೆ, ತಲೆಯೆತ್ತದೆ ತನ್ನಷ್ಟಕ್ಕೆ ತಾನು ಎತ್ತರವಾಗಿ ಸೊಂಪಾಗಿ ಬೆಳೆದ ಹುಲ್ಲಿನ ಕೊನೆಗಳನ್ನು ಕಡಿ ಕಡಿದು ತಿನ್ನುವುದರಲ್ಲಿ ಮಗ್ನನಾಗಿದ್ದ.

ತನ್ನ ಸಮೀಪದಲ್ಲಿಯೇ ದೊಡ್ಡ ಜಿಂಕೆಯೊಂದನ್ನು ಕಂಡು ಬೇಂಬಿ ಮೊದಲು ಗಾಬರಿಯಾದ. ಅಷ್ಟರಲ್ಲಿ ಧೈರ್ಯ ತಂದುಕೊಂಡ. ಆತನೊಂ ದಿಗೆ ಮಾತನಾಡೋಣವೇ ಅನಿಸಿತು. ಅವನು ಇದುವರೆಗೂ ಹೊಸಬರಾದ ದೊಡ್ಡವರನ್ನು ಮಾತನಾಡಿಸಿದ್ದಿಲ್ಲ ಹೇಗೆ ಮಾತನಾಡಿಸಬೇಕೆಂದೂ ಗೊತ್ತಿಲ್ಲ.

ತಾನು ಮಾತನಾಡಿಸಿದರೆ ಆತ ಏನೆಂದುಕೊಳ್ಳುತ್ತಾನ್ನೋ ಏನೋ ಎಂಬ ಶಂಕೆ ಬೇರೆ. 'ಹೋಗಲಿ, ಅಮ್ಮನನ್ನು ಕೇಳಿದರಾಯಿತು' ಎಂದುಕೊಂಡ. ತಲೆಯೆತ್ತಿ ನೋಡಿದ.

ಅಮ್ಮ ತುಂಬಾ ದೂರದಲ್ಲಿ ಏಣಾ ಚಿಕ್ಕಮ್ಮನೊಂದಿಗೆ ಮಾತನಾಡುತ್ತಿದ್ದಳು. ಆಕೆಯ ಹತ್ತಿರ ಹೋಗಬೇಕಾದರೆ ಈ ಹೊಸಬ ಜಿಂಕೆಯ ಪಕ್ಕದಿಂದಲೇ ಹಾದು ಹೋಗಬೇಕು. ಅದು ಮರ್ಯಾದೆಯಲ್ಲವೆನಿಸಿತು.

ಆಲೋಚಿಸಿದಾಗ 'ಅಮ್ಮನನ್ನು ಇದಕ್ಕಾಗಿ ಕೇಳಬೇಕಾದ ಅವಶ್ಯಕತೆಯಾದರೂ ಏನಿದೆ ?' ಅನಿಸಿತು. ಇದಕ್ಕೆ ಮುಂಚೆ ತಾನು ಹಿರಿಯನಾಯಕನೊಂದಿಗೆ ಮಾತನಾಡಿದ್ದೆ. ಆಗ ಅಮ್ಮನನ್ನು ಕೇಳಿರಲಿಲ್ಲವಲ್ಲಾ, ಈಗ ಮಾತ್ರ ಯಾಕೆ ಕೇಳಬೇಕು ? ನಾನೇ ಮಾತನಾಡಿಸಿಬಿಡುತ್ತೇನೆ. 'ಅಯ್ಯಾ ನಮಸ್ಕಾರ' ಎನ್ನುತ್ತೇನೆ. ಅವರಿಗೆ ಕೋಪ ಬಂದರೆ ಕೂಡಲೇ ಅಲ್ಲಿಂದ ಹೊರಟುಬಿಡುತ್ತೇನೆ, ಎಂದುಕೊಳ್ಳುತ್ತಾ ಬೇಂಬಿ ಗಂಟಲು ಸರಿಮಾಡಿಕೊಂಡ.

ಆ ಜಿಂಕೆ ಪೊದೆಯ ಬಳಿಯಿಂದ ಪಕ್ಕಕ್ಕೆ ಹೆಜ್ಜೆ ಹಾಕಿತು. 'ಹಾ, ಇದೇ ಸರಿಯಾದ ಸಮಯ, ಮಾತನಾಡಿಸಲು' ಎಂದುಕೊಂಡ ಬೇಂಬಿ. ಆಗ ನಡೆದಿತ್ತು ಆ ಸಂಘಟನೆ.

ಸಿಡಿಲು ಬಡಿದಂತೆ, ಭಯಂಕರವಾದ ಸದ್ದು ಕೇಳಿಸಿತ್ತು. ಅದೇನೆಂದು ಬೇಂಬಿಗೆ ಅರ್ಥವಾಗಲಿಲ್ಲ.

ಆದರೆ ಬೇಂಬಿ ಮಾತನಾಡಿಸಲು ಹಾತೊರೆಯುತ್ತಿದ್ದ ಯವ್ವನದಿಂದ ಹೊಳೆಯುತ್ತಿದ್ದ, ಸುಂದರವಾದ ಆ ಜಿಂಕೆ ಅಷ್ಟೆತ್ತರ ಹಾರಿ, ಬೇಂಬಿಯ ಪಕ್ಕದಲ್ಲಿಯೇ ಪೊದೆಯ ಬಳಿ ಅಂಗಾತನ ಬಿದ್ದು ಬಿಟ್ಟಿತ್ತು.

ಆ ಭಯಂಕರವಾದ ಸದ್ದಿನ ಝೇಂಕಾರ ಅವನ ಕಿವಿಯಲ್ಲಿನ್ನೂ ಗುಂಯ್‌ಗುಟ್ಟುತ್ತಲೇ ಇತ್ತು. ಅಷ್ಟರಲ್ಲಿ ಅಮ್ಮ, ಏಣಾ ಚಿಕ್ಕಮ್ಮ, ಗೊಬೋ ಫಲೀನಾ ಪೊದೆಗಳ ಒಳಭಾಗಕ್ಕೆ ಮಿಂಚಿನಂತೆ ಓಡುತ್ತಾ ಕಾಣಿಸಿದರು. ಮೊಲಮಾಮ ಒಂದೇಟಿಗೆ ಕಣ್ಮರೆಯಾಗಿದ್ದ. ಸೊಟ್ಟಕಾಲು ತಡವರಿಸಿದ್ದರೂ, ಬಹಳ

ಕಷ್ಟದಿಂದ ನವಿಲೂ ಅಲ್ಲಿಂದ ಓಡಿತು. ಎಲ್ಲೆಲ್ಲೂ ನಿಶ್ಶಬ್ದ.

ಅಲ್ಲಿ ಚಲನವಿಲ್ಲದೆ ಬಿದ್ದಿದ್ದ ಜಿಂಕೆಯ ಸುತ್ತಲೂ ತಿರುಗಿನೋಡಿದ ಬೇಂಬಿ. ಅವನ ಮುಂದಿನ ಭುಜದಮೇಲೆ ದೊಡ್ಡ ಗಾಯವಾಗಿ ರಕ್ತ ಹರಿಯುತ್ತಿತ್ತು.

"ಅಲ್ಲಿ ನಿಲ್ಲಬೇಡ. ಓಡು, ಓಡಿಹೋಗು. ಅಪಾಯ ಅಪಾಯ" ಎಂಬ ಮಾತುಗಳು ಕೇಳಿಸಿದುವು. ತಿರುಗಿ ನೋಡಿದ. ಪಕ್ಕದಲ್ಲಿಯೇ ಅಮ್ಮ ನಿಂತಿದ್ದಳು.

ಕಂಪಿಸುತ್ತಿದ್ದ ಅಮ್ಮನ ದನಿ ಕೇಳಿ ಬೇಂಬಿ ಒಂದುಕ್ಷಣವೂ ತಡ ಮಾಡದೆ, ಬಲವನ್ನೆಲ್ಲಾ ಉಪಯೋಗಿಸಿ ಅಡವಿಯ ಕಡೆ ಓಡಿದ.

ಓಡಓಡುತ್ತಲೇ ಕೇಳಿದ "ಏನಾಯಿತಮ್ಮಾ ?"

"ಮ ನು ಷ್ಯ" ಅಮ್ಮ ಏದುಸಿರುಬಿಡುತ್ತಾ ಹೇಳಿದಳು.

ತುಂಬಾದೂರ ಓಡಿದನಂತರ ಕೊನೆಗೊಂದುಕಡೆ ನಿಂತರು ಬೇಂಬಿ. ಅಮ್ಮ.

"ಏನು ನೀವಂದಿದ್ದು, ನನಗೆ ಸರಿಯಾಗಿ ಕೇಳಿಸಲಿಲ್ಲ. ಇನ್ನೊಂದುಸಲ ಹೇಳಿ" ಎಂಬ ಮಾತು ಕೇಳಿಸಿತು.

ಬೇಂಬಿ ತಲೆಯೆತ್ತಿ ನೋಡಿದ. ಮರದ ಕೊಂಬೆಗಳ ಮೇಲೆ ಗಾಬರಿ ಯಿಂದ ಅತ್ತಿಂದಿತ್ತ ಓಡಾಡುತ್ತಿತ್ತು, ಅಳಿಲು.

"ನಾನೂ ನಿಮ್ಮ ಹಿಂದೇನೇ ಬಂದೆ. ಎಷ್ಟು ಭಯವಾಯ್ತು ಅಂತ.

"ನೀವೂ ಅಲ್ಲಿಯೇ ಇದ್ದಿರೇನು ?" ಎಂದಳು ಅಮ್ಮ.

"ಹೂಂ, ಮತ್ತೆ ನೆನಸಿಕೊಂಡರೆ ಗಡಗಡಾ ನಡುಗೋಹಾಗಾಗ್ತಿದೆ" ಎಂದಿತು ಅಳಿಲು ಹಿಂದಿನ ಕಾಲ ಮೇಲೆ ಕುಳಿತು, ಬಿಳುಪಾದ ಎದೆಗೆ ಕೈಗ ಳನ್ನು ಒತ್ತಿಕೊಳ್ಳುತ್ತಾ, ಮತ್ತೆ ಹೇಳಿತು "ಆ ಸದ್ದು ಕೇಳಿದಾಕ್ಷಣ ನನ್ನ

ಪ್ರಾಣ ಹೋಗಿಹೋಬಿಟ್ಟಿತು ಅಂದುಕೊಂಡೆ."

ಅಲ್ಲಿ ಮನುಷ್ಯ ಇದಾನೇಂತ ನಾವು ಯಾರೂ ಗಮನಿಸಲೇ ಇಲ್ಲ" ಎಂದಳು ಅಮ್ಮ.

"ಅಯ್ಯೋ ನಾನು ಬಹಳ ಹೊತ್ತಿನಿಂದ ನೋಡ್ತಾನೇ ಇದೀನಿ' ಆ ಪ್ರಾಣೀನ" ಎಂದಿತು ಅಳಿಲು.

"ನಾನೂ ನೋಡಿದೆ" ಎಂದಿತು ಮತ್ತೊಂದು ಕಂಠ. ಅದು ಮೈನಾಳ ಕಂಠ.

"ನಾನೂ ನೋಡಿದೆ" ಅಂದಿತು ಇನ್ನೂ ಮೇಲಿನ ಕೊಂಬೆಯಲ್ಲಿ ಕುಳಿತ ಗೀಜಗ.

ಎಲ್ಲಕ್ಕಿಂತ ಎತ್ತರದಲ್ಲಿ ಕುಳಿತ ಕಾಗೆಗಳೆರಡು ಚಿಂತಾಕ್ರಾಂತವಾಗಿ "ಮನುಷ್ಯನ್ನ ನಾವೂ ನೋಡಿದಿವಿ" ಎಂದುವು. ಹೆದರಿದ ಅಡವಿಯ ಜಂತುಗಳೆಲ್ಲಾ ತಾವು ಯಾವಾಗ, ಎಲ್ಲಿ ಮನುಷ್ಯನ್ನ ನೋಡಿದೆವೆಂಬ ವಿಷಯವನ್ನು ಕುರಿತು ಮಾತನಾಡ ತೊಡಗಿದುವು.

"ಪಾಪ ! ಆ ಜಿಂಕೆ ಅವರಿಗೆ 'ಅಪಾಯಕಾರಿ' ಅಂತ ಹೇಳಬೇಕೂಂತ ಎಷ್ಟು ಪ್ರಯತ್ನ ಮಾಡಿದೇಂತ..." ಎಂದಿತು ಅಳಿಲು, ಕೈಗಳನ್ನು ಎದೆಗೆ ಒತ್ತಿಕೊಳುತ್ತಾ.

"ನಾನೂ ಅಷ್ಟೆ, ಎಷ್ಟು ಜೋರಾಗಿ ಕೂಗಿಕೊಂಡರೂ ಅತ್ತ ಕೇಳಿಸಿಕೊಳ್ಳಲೇ ಇಲ್ಲ" ಎಂದಿತು ಗೀಜಗ,

"ಅಯ್ಯೋ, ಅದೇನು ಹೇಳ್ತೀರಿ, ಕೂಗಿ ಕೂಗಿ ಸಾಕಾಗಿ "ಇಲ್ಲಿ ನೋಡಯ್ಯಾ ಸ್ವಾಮಿ" ಅಂತ ಹೇಳೋಣ ಅಂತ ಹತ್ತಿರಹೋಗುತ್ತಿದ್ದೆ. ಅಷ್ಟರಲ್ಲಿ ಈ ಘೋರ ಪ್ರಮಾದ ನಡೆದೇಹೋಯಿತು" ಎಂದಿತು ಮೈನಾ.

"ನಿಮ್ಮೆಲ್ಲರ ಕಂಠಗಳಿಗಿಂತ ನನ್ನ ಕಂಠ ದೊಡ್ಡದಲ್ಲವೆ? ನಾನು ಕಿರಿಚಿ ಕೋತಾನೇ ಇದೀನಿ, ಏನು ಪ್ರಯೋಜನ? ಆ ದೊಡ್ಡವರಿಗೆ

ನಮ್ಮಂತಹ ಸಣ್ಣ ಪುಟ್ಟ ಜೀವಿಗಳ ಮಾತೊಂದರ ಲಕ್ಷ್ಯವೇ ಇರೋಲ್ಲ" ಎಂದಿತು ಕಾಡುಕಾಗೆ.

"ನಿಜ ...ನಿಜ..." ಎಂದು ಸಮರ್ಥಿಸಿತು ಅಳಿಲು.

"ನಾವು ಮಾಡಬಹುದಾದ್ದೆಲ್ಲವನ್ನೂ ಮಾಡಿದಿವಿ. ಅದರ ಮೇಲೆ ಅಪಾಯವಾದರೆ ಯಾರೇನು ಮಾಡಬಲ್ಲೆವು ?" ಎಂದು ರೆಕ್ಕೆ ಒದರಿತು ಮೈನಾ.

"ಎಷ್ಟು ಚಂದದ ಹುಡುಗ, ಎಂತಹ ವಯಸ್ಸು. ಅನ್ಯಾಯವಾಯಿತು" ಎಂದು ಕಣ್ಣೀರಿಟ್ಟಿತು ಅಳಿಲು.

"ಹಾಂ. ಸುಮ್ಮನೆ ತನ್ನ ಪ್ರಪಂಚದಲ್ಲಿ ತಾನಿದ್ದು ಬಿಟ್ಟರ ಹೇಗಾದೀತು? ಬೇರೆಯವರೇ ಏನಂತಿದಾರೇಂತ ಸ್ವಲ್ಪ ಕಿವಿಗೊಡಬೇಕು ಮತ್ತೆ..." ಎಂದಿತು ಗೀಜಗ.

"ಸರಿ, ಸರಿ, ಅವರ ಜಿಂಕೆ ಜಾತಿಯಲ್ಲಿ ಯುವರಾಜರೆಲ್ಲಾ ಹಾಗೆಂಯೇ ಇರ್ತಾರೆ" ಎಂದಿತು ಅಳಿಲು.

"ಸ್ವಲ್ಪ ಮಂದಮತಿಯಿರಬಹುದು" ಎಂದಿತು ಪಾರಿವಾಳ.

"ನೀನೇ ಮಂದಮತಿ, ನಿನಗಿಂತ ಮಂದಮತಿಗಳು ಈ ಕಾಡಿನಲ್ಲೇ ಇಲ್ಲ" ಎಂದು ಗಟ್ಟಿಯಾಗಿ ಕಿರುಚಿತು ಕಾಗೆ.

"ನಾನೇ ? ನಾನು ಮಂದಮತಿ ಅಂತೀಯಾ? ಇದುವರೆಗೂ ಯಾರೂ ನನ್ನನ್ನ ಆ ರೀತಿ ಅಂದವರಿಲ್ಲ. ಇದ್ದರೆ ಸ್ವಲ್ಪ ಮರೆವು ಇರಬಹುದು. ಅಷ್ಟೇ ಆಗಲಿ, ಬುದ್ಧಿಯಿಲ್ಲ ಅಂದರೆ ನಾನು ಸುಮ್ಮನಿರೋಲ್ಲ" ಎಂದಿತು ಪಾರಿವಾಳ. ಅವಮಾನದಿಂದಾಗಿ ಅದರ ಕಂಠರುದ್ಧವಾಗಿತ್ತು.

ಕಾಗೆ ತನ್ನನ್ನು ತಾನು ಸಂಭಾಳಿಸಿಕೊಳ್ಳುತ್ತಾ "ತಪ್ಪಾಯಿತು, ಏನೋ ಅಂದುಬಿಟ್ಟೆ. ತಪ್ಪು ತಿಳಿದುಕೋಬೇಡ. ಆದರೆ ಒಂದು ವಿಷಯ ನೆನಪಿಟ್ಟುಕೋ. ಯುವರಾಜರು ಸತ್ತು ಹೋದರೂ ಅಂದರೆ ಅದಕ್ಕೆ ಅವರ ಮೂರ್ಖತನ ಕಾರಣವಲ್ಲ. ಆ ಮನುಷ್ಯ ಅನ್ನೋನಿಗೆ ಎದುರು ನಿಲ್ಲುವವರು

ಆದರೆ ಬೇಂಬಿಯ ಮನಸ್ಸು ಕಲಕಿದಂತಾಗಿತ್ತು. ಹೃದಯ ಒಂಡಿದಂತಹ ಅನುಭವ. ಎಲ್ಲರೂ ಇಷ್ಟು ಬೇಗ ನಡೆದದ್ದನ್ನೆಲ್ಲಾ ಮರೆತು ಹೇಗೆ ಸಂತೋಷವಾಗಿದ್ದಾರೆಂಬುವೇ ಅವನಿಗರ್ಥವಾಗಲಿಲ್ಲ. ಬದುಕು ಎಷ್ಟು ಅಲ್ಪವಾದದ್ದು! ಹೆಜ್ಜೆ ಹೆಜ್ಜೆಗೂ ಅಪಾಯ ತಪ್ಪಿದ್ದಲ್ಲ. ದಟ್ಟವಾದ ಅರಣ್ಯದ ಒಳಭಾಗದಲ್ಲಿ ಬೇಕಾದಷ್ಟು ರಹಸ್ಯವಾದ ಸ್ಥಳಗಳಿವೆ. ಅಲ್ಲಿ ನಿರ್ಭಯವಾಗಿ ವಿಹರಿಸಬಹುದು. ಆದರೂ ಈ ಹಾಳಾದ ಮೈದಾನದ ಕಡೆ ಏಕೆ ಬರುತ್ತಾರೋ ಕಾಣೆ. ಈ ಮೈದಾನದಲ್ಲಿ ಲಭಿಸುವ ಸ್ವಲ್ಪ ಆನಂದಕ್ಕೆ ಬದಲಾಗಿ ಎಂತಹ ಶಿಕ್ಷೆ!

ಪಕ್ಕದ ಪೊದೆಗಳ ಬಳಿ ಸದ್ದಾಯಿತು. ಬೇಂಬಿ ತನ್ನ ಆಲೋಚನೆಯಿಂದ ಹೊರಬಂದು ಸರ್ರನೆ ಹಿಂತಿರುಗಿ ನೋಡಿದ. ಅವನಿಗೆದುರಾಗಿ ಮುದಿನಾಯಕ ನಿಂತಿದ್ದ. ಓಡಿಹೋಗೋಣವೆಂದಿದ್ದ ಬೇಂಬಿ ಅಲ್ಲಿಯೇ ನಿಂತ. ನಾಯಕ ನಿಶಿತದೃಷ್ಟಿಯಿಂದ ಬೇಂಬಿಯ ಕಡೆ ನೋಡಿದ.

"ಅದು ನಡೆದಾಗ ನೀನು ಅಲ್ಲಿಯೇ ಇದ್ದಿಯೇನು?"

"ಹೂಂ ..." ಎಂದ ಬೇಂಬಿ, ತಲೆಬಗ್ಗಿಸಿಕೊಂಡು. ಆ ವಿಷಯ ನೆನಪಾದೊಡನೆಯೇ ಅವನ ಎದೆ ತೀವ್ರವಾಗಿ ಬಡಿದುಕೊಳ್ಳಲಾರಂಭಿಸಿತು.

"ನಿಮ್ಮ ಅಮ್ಮ ಎಲ್ಲಿ?"

"ಗೊತ್ತಿಲ್ಲ" ಎಂದ ಬೇಂಬಿ ವ್ಯಾಕುಲದಿಂದ.

"ಮತ್ತೆ ಅಮ್ಮನಿಗಾಗಿ ಕೂಗುತ್ತಿಲ್ಲವೇಕೆ?"

ಬೇಂಬಿ ತಲೆಯೆತ್ತಿ ಮುದಿ ನಾಯಕನ ಕಡೆ ನೋಡಿದ. ಈ ಮಾತು ಅವನ ಪೌರುಷವನ್ನು ಹೊಡೆದೆಬ್ಬಿಸಿತು.

"ಈಗ ನಾನು ಒಂಟಿಯಾಗಿರಬಲ್ಲೆನು" ಎಂದ.

ನಾಯಕನ ದೃಷ್ಟಿ ವಾತ್ಸಲ್ಯಪೂರಿತವಾಗಿ ಬೇಂಬಿಯ ಮೇಲೆ ಪ್ರಸ

ರಿಸಿತು. ಪ್ರೀತಿ ತುಂಬಿದ ಮೃದುಸ್ವರದಿಂದ "ಆ ದಿನ ಅಮ್ಮನಿಗೋಸ್ಕರ ಅತ್ತಿದ್ದು ನೀನೇ ಅಲ್ಲವೇ ?" ಎಂದ.

ಬೇಂಬಿ ನಾಚಿಕೆಯಿಂದ ಮುದುಡಿಕೊಳ್ಳುತ್ತಾ "ಹೌದುರೀ" ಎಂದು ಗೊಣಗಿದ.

ನಾಯಕ ಮೌನವಾಗಿ ಬೇಂಬಿಯನ್ನು ಆಪಾದಮಸ್ತಕ ಪರಿಶೀಲಿಸಿ ನೋಡಿದ. ಅವನ ಕಣ್ಣಿನಲ್ಲಿ ತುಂಬಿ ತುಳುಕುತ್ತಿದ್ದ ಪ್ರೀತಿ ವಾತ್ಸಲ್ಯ ಬೇಂಬಿಗೆ ಧೈರ್ಯತಂದುಕೊಟ್ಟಿತು.

"ಹಾಗಾದರೆ ತಾವು ನನ್ನನ್ನು ಗುರ್ತು ಹಿಡಿದಿರಿ. ಆಗ ಅಮ್ಮನನ್ನು ಬಿಟ್ಟಿರಲಾಗುತ್ತಿರಲಿಲ್ಲ ನನಗೆ. ಈಗ ಅಂತಹ ಭಯವಿಲ್ಲರೀ" ಎಂದ ವಿನಯ ದಿಂದ.

ನಾಯಕ ತದೇಕಚಿತ್ತದಿಂದ ಬೇಂಬಿಯನ್ನು ನೋಡಿದ. ಆತನ ಆಳವಾದ ನೋಟದಲ್ಲಿ ಮಂದಹಾಸ ಇಣಕಿ ನೋಡಿತು. ಬೇಂಬಿ ಮತ್ತಷ್ಟು ಧೈರ್ಯ ತಂದುಕೊಂಡು ಕೇಳಿದ.

"ಅಯ್ಯಾ, ಈ ದಿನ ಏನು ನಡೆಯಿತು ? ಎಲ್ಲರೂ ಮನುಷ್ಯ ಮನುಷ್ಯ ಅನುತ್ತಿದ್ದಾರೆ ಯಾರು ಆ ಮನುಷ್ಯ ಅಂದರೆ ?"

ನಾಯಕ ತನ್ನ ದೃಷ್ಟಿಯನ್ನು ಬೇಂಬಿಯ ಮೇಲಿಂದ ಶೂನ್ಯದ ಕಡೆ ತಿರುಗಿಸಿದ. ಸ್ವಲ್ಪಹೊತ್ತು ಸುಮ್ಮನಿದ್ದು ನಂತರ ಹೀಗೆ ಹೇಳಿದ.

"ಜಾಗರೂಕತೆಯಿಂದ ಕೇಳಿಸಿಕೊಳ್ಳುವುದನ್ನು ಕಲಿ. ಹುಷಾರಾಗಿ ವಾಸನೆ ಹಿಡಿಯುವುದನ್ನು ಕಲಿ. ಚೆನ್ನಾಗಿ ನಿಶಿತವಾಗಿ ನೋಡುವುನ್ನು ಕಲಿ. ನೀವೇ ಸ್ವಂತ ಅನುಭವದಿಂದ ಬದುಕನ್ನು ತಿಳಿದಿಕೋ "

ನಾಯಕ ಗಂಭೀರವಾಗಿ ತಲೆಯೆತ್ತಿದ.

"ಚಿರಂಜೀವಿಯಾಗು" ಆ ಮಾತಿನೊಂದಿಗೆ ಆತ ಅಡವಿಯಲ್ಲಿ ಮಾಯವಾದ.

ಬೇಂಬಿ ಒಂಟಿಯಾಗಿ ನಿಂತ. ಅವನ ಹೃದಯ ಚಿಂತೆಯಿಂದ ತುಂಬಿತ್ತು. ಮುದಿನಾಯಕನ ಕೊನೆಯ ಮಾತುಗಳು ಅವನ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದುವು. "ಚಿರಂಜೀವಿಯಾಗು" ತನಗೇ ತಿಳಿಯದ ಹೆಮ್ಮೆಯ ಭಾವನೆಯೊಂದು ಮನಸಿನಲ್ಲಿ ಸುಳಿದುಹೋಯಿತು. "ಬದುಕಿನಲ್ಲಿ ಸದಾ ಅಪಾಯ ಕಟ್ಟಿಟ್ಟದ್ದೇ. ಅದಕ್ಕಾಗಿ ಭಯಪಡುತ್ತಾ ಕೂಡುವುದರಲ್ಲಿ ಯಾವ ಪ್ರಯೋಜನವೂ ಇಲ್ಲ" ಎಂದುಕೊಳ್ಳುತ್ತಾ ನಿಧಾನವಾಗಿ ಅಡವಿಯೊಳಕ್ಕೆ ನಡೆದ ಬೇಂಬಿ.

ಮೈದಾನದಕಡೆಗೆ ನಡೆದುಹೋಗುವ ದಾರಿಯಲ್ಲಿದ್ದ ದೊಡ್ಡ ಬಸರಿ ಮರ ಮೆಲ್ಲಮೆಲ್ಲನೆ ಎಲೆಗಳನ್ನು ಉದುರಿಸತೊಡಗಿತ್ತು. ಮಿಕ್ಕ ಗಿಡ—ಮರಗಳೂ ಸಹ ಸ್ವಲ್ಪ ಹಿಂದುಮುಂದಾಗಿ ಕೆಂಪು, ಹಳದಿ ಬಣ್ಣದ ಎಲೆಗಳನ್ನು ಗಾಳಿಯೊಂದಿಗೆ ತೂರಿಬಿಡುತ್ತಿದ್ದವು.

ದಿನಗಳು ಕಳೆದುಹೋಗುತ್ತಿದ್ದವು. ಬಸರಿ ಮರದ ತುಟ್ಟತುದಿಯ ಕೊಂಬೆಯಲ್ಲಿ ಉಳಿದಿದ್ದ ಚಿನ್ನದ ಬಣ್ಣದ ಎರಡು ಹಣ್ಣೆಲೆಗಳು ಮಾತನಾಡಿಕೊಳುತ್ತಿದ್ದವು.

"ಹೂಂ, ಎಷ್ಟರಲ್ಲಿ ಹೇಗಾಗಿಹೋಯಿತೋ ನೋಡಿದೆಯಾ ?"

"ಹೌದು—ನಮ್ಮವರು ರಾತ್ರಿಯೇ ಬಹಳ ಜನ ಉದುರಿ ಹೋಗಿದಾರೇಂತ ಕಾಣುತ್ತೆ ಪಾಪ ! ಇನ್ನು ಈ ಕೊಂಬೆಯಲ್ಲಿ ನಾವಿಬ್ಬರೇ ಉಳಿದಿರುವಂತಿದೆ."

"ಮರಣ ಯಾವಾಗ ಸಂಭವಿಸುತ್ತದೆಯೋ ಯಾರಿಗೆ ಗೊತ್ತು ? ನಿನಗೆ ನೆನಪಿದೆಯೇ, ಸೂರ್ಯ ನಡುನೆತ್ತಿಯಲ್ಲಿ ಕಾಂತಿಯಿಂದ ಪ್ರಜ್ವಲಿಸುತ್ತಿದ್ದ. ನಮಗೆಷ್ಟು ಬೆಚ್ಚಗಿರುತ್ತಿತ್ತು ಆಗ !"

"ಹುಂ, ಆ ದಿನಗಳು ಕಳೆದುಹೋದವು. ಸೂರ್ಯ ಕಾಣುವುದೇ ಅಪರೂಪ ಈಗ. ಕಂಡರೂ ಅಂದಿನ ಶಾಖ ಎಲ್ಲಿದೆ ? ಸೂರ್ಯನನ್ನು ನೋಡಿದರೂ ನಮಗೆ ಹಿಂದಿನ ಉತ್ಸಾಹ ಹುಟ್ಟುತ್ತಲೇ ಇಲ್ಲ ನಿಟ್ಟುಸಿರು ಬಿಟ್ಟಿತು.

"ನಾವೂ ಈಗಲೋ ಇನ್ನೊಂದಾಗಳಿಗೆಗೋ ಉದುರಿ ಮಣ್ಣುಪಾಲಾಗುತ್ತೇವೆ. ನಮ್ಮ ಸ್ಥಳದಲ್ಲಿ ಹೊಸ ಎಲೆಗಳು ಬರುತ್ತವೆ. ಅವು ಉದುರಿದರೆ ಮತ್ತೆ ಬೇರೆ ಎಲೆಗಳು ಬರುತ್ತವೆ. ಇದಕ್ಕೆ ಅಂತವೆಂಬುದೇ ಇಲ್ಲ..."

"ಸರಿಬಿಡು, ಅದನ್ನು ಕುರಿತು ನಮಗೇಕೆ ಆಲೋಚನೆ ? ನಮ್ಮ ಪುಟ್ಟ ತಲೆಗಳಿಗೆ ತಿಳಿಯುವ ವಿಷಯವಲ್ಲ ಅದು."

"ನನಗೇಕೋ ಹೆದರಿಕೆಯಾಗುತ್ತಿದೆ."

ಎರಡೂ ಎಲೆಗಳು ಸ್ವಲ್ಪ ಹೊತ್ತು ಸುಮ್ಮನಿದ್ದುವು. ಮತ್ತೆ ಮೊದಲ ಎಲೆ ಹೇಳಿತು.

"ಹೌದು...ನಾವು ಯಾಕೆ ಉದುರಿ ಹೋಗಬೇಕು ? ಉದುರಿದ ಮೇಲೆ ಏನಾಗುತ್ತೆ ನಮಗೆ ?"

"ಕೆಳಗೆ ಮಣ್ಣಿನಲ್ಲಿ ..."

"ಅಲ್ಲಿ ಹೇಗಿರುತ್ತದೆಯೋ..."

"ನನಗೂ ತಿಳಿಯದು. ಒಬ್ಬೊಬ್ಬರು ಒಂದೊಂದು ತರಹ ಹೇಳುತ್ತಾರೆ."

ಮತ್ತೆ ಸ್ವಲ್ಪ ಹೊತ್ತು ಮೌನ.

"ಕೆಳಗೆ ಬಿದ್ದ ಮೇಲೆ ನಮಗೇನಾದರೂ ತಿಳಿಯುತ್ತದೆಯೇ ? ಸ್ಪರ್ಶಶಕ್ತಿಯಿರುತ್ತದೆಯೇ ?"

"ಆ ವಿಷಯ ಯಾರಿಗೂ ಗೊತ್ತಿಲ್ಲ. ಮಣ್ಣಿನಲ್ಲಿ ಸೇರಿದ ಮೇಲೆ ಮತ್ತೆ ಬಂದು ಹೇಳಿದವರು ಯಾರೂ ಇಲ್ಲ."

ಮತ್ತೆ ಮೌನ. ವ್ಯಥೆಯಿಂದ ಕೂಡಿದ ನಿಟ್ಟುಸಿರು.

"ಸುಮ್ಮನೆ ಅದನ್ನೇ ಕುರಿತು ಆಲೋಚಿಸಿ ಕುಗ್ಗಿ ಹೋಗಬೇಡ."

"ಹಾಂ....ಹಾಗೇನಿಲ್ಲ. ಆದರೆ ಸುಮ್ಮನೆ ನಡುಕ ಬರ್ತಿದೆ. ಹಿಂದಿನ ಬಲ ಇಲ್ಲ ಮೈಯಲ್ಲಿ..."

"ಇನ್ನೇನಾದರೂ ವಿಷಯ ಮಾತನಾಡೋಣ. ಈ ವಿಷಯವನ್ನೇ ಮಾತನಾಡುತ್ತಿದ್ದರೆ ಚಿಂತೆ ಹೆಚ್ಚಾಗುತ್ತದೆ."

"ಸರಿ, ಏನು ಮಾತನಾಡೋಣ ?"

ಸ್ವಲ್ಪಹೊತ್ತು ನಿಶ್ಶಬ್ದ.

"ಕೊನೆಗಳಿಗೆ ಬಂದಂತೆಯೇ ಇದೆ. ನಮ್ಮಲ್ಲಿ ಯಾರು ಮುಂದೋ, ಯಾರು ಹಿಂದೋ !"

"ಆ ವಿಷಯ ಬಿಡು. ನಮ್ಮ ಚಿಕ್ಕಂದಿನ ವಿಷಯಗಳನ್ನು ಹೇಳು. ಆ ದಿನಗಳನ್ನು ನೆನೆಸಿಕೊಂಡರೆ ಮನಸ್ಸಿಗೆ ಸ್ವಲ್ಪ ಸಂತೋಷವುಂಟಾಗುತ್ತೆ. ಆಗ ಸೂರ್ಯ ಎಷ್ಟು ಬೆಚ್ಚನೆಯ ಶಾಖ ಕೊಡುತ್ತಿದ್ದ. ಕಾಂತಿಯಿಂದ ಬೆಳಗುತ್ತಿದ್ದ. ನೆನಪಿದೆಯೇ ? ನಮ್ಮ ಬಾಯೊಳಕ್ಕೆ ಎಷ್ಟೆಷ್ಟು ರಸಬರೋದು. ಕುಡಿಯೊಲ್ಲ ಅಂತ ಹಠ ಹಿಡಿದರೂ ಅಮ್ಮ ಬಾಯೊಳಕ್ಕೆ ಹಾಕಿಬಿಡುತ್ತಿದ್ದಳು..."

"ಮುಂಜಾನೆ ಮುಸುಕುತ್ತಿದ್ದ ಮಂಜು ಎಷ್ಟು ಚೆನ್ನಾಗಿರುತ್ತಿತ್ತು. ನಂತರ ನವನೀತದಂತಹ ರಾತ್ರಿಗಳು ಆಹ್"

ಈಗಿನ ರಾತ್ರಿಗಳು ಎಷ್ಟೊಂದು ಭಯಂಕರವಾಗಿ ಕಳೆಯುತ್ತಿವೆಯಲ್ಲ? ಎಂದಿಗೆ ಬೆಳಗಾದೀತೋ ಅನ್ನಿಸಿಬಿಡುತ್ತೆ."

"ನಮ್ಮದು ಪೂರ್ಣಾಯುಸ್ಸು ಬಿಡು–ಆ ವಿಷಯದಲ್ಲಿ ಸಂದೇಹವೇ ಇಲ್ಲ."

"ಚಿಕ್ಕಂದಿಗೂ ಈಗ್ಗೂ ನನ್ನಲ್ಲಿ ತುಂಬಾ ಬದಲಾವಣೆ ಆಗಿದೆ–ಅಲ್ಲವೇ ?"

"ನನಗೇನೂ ಹಾಗನ್ನಿಸುವುದಿಲ್ಲ. ನೀನು ಅದೇ ಅಂದ–ಚಂದಗಳಿಂದ ಸೊಗಸಾಗಿ ಕಾಣುತ್ತಿ ನನ್ನ ಕಣ್ಣಿಗೆ."

"ಸಾಕು, ಸಾಕು, ಸುಮ್ಮನೆ ಹೊಗಳಬೇಡ."

"ಅರೇ, ಹೊಗಳಿಕೆಯಲ್ಲಿಯದು ! ನಿಜ ಹೇಳ್ತಾ ಇದ್ದೀನಿ. ಚಿಕ್ಕಂದಿನಲ್ಲಿ ಹೇಗಿದ್ದೀಯೋ, ಈಗಲೂ ಹಾಗೇ ಇದೀಯಾ. ಕಂಡೂ ಕಾಣದ

ಹಾಗೆ ಕೊನೆಗಳಲ್ಲಿ ಸ್ವಲ್ಪ ಅರಿಸಿನ ಬಣ್ಣ. ಅಷ್ಟೆ. ಅದೂ ನಿನಗೆ ಸೊಗಸಾಗಿ ಒಪ್ಪುತ್ತಿದೆ."

"ನೀನು ತುಂಬಾ ಒಳ್ಳೆಯವನು, ಮೊದಲಿನಿಂದ ನಿನ್ನ ಸ್ವಭಾವವೇ ಅದು. ನನಗೆ ಚೆನ್ನಾಗಿ ಅನುಭವತಾನೇ "

"ಸಾಕು, ಸಾಕು. ಚೆನ್ನಾಗಿ ಹೇಳುತ್ತೀ ನೀನು !"

ಇಬ್ಬರಿಗೂ ಆಯಾಸವಾಗುತ್ತಿತ್ತು. ಮತ್ತೆ ಕೆಲವು ಗಂಟೆಗಳು ಕಳೆದುವು. ಗಾಳಿ ಬೀಸಿತು.

"ಅಯ್ಯೋ ನೀನೂ ಉದುರಿದೆಯಾ ? ನಾನೂ ನಿನ್ನ ಜತೆಗೇ ಬಂದುಬಿಡ್ತೀನಿ..." ಹಾಗನ್ನುತ್ತಿರುವಾಗಲೇ ಅದರ ಕಂಠ ಬಿಗಿದುಕೊಂಡಿತು. ಮತ್ತೊಂದು ಕ್ಷಣದಲ್ಲಿ ಅದೂ ಕಂಪಿಸಿ ಉದುರಿ ನೆಲದಮೇಲೆ ಬಿದ್ದುಬಿಟ್ಟಿತು.

ಚಳಿಗಾಲ ಹೆಜ್ಜೆಯಿಟ್ಟಿತ್ತು.

ಅರಣ್ಯದ ರೂಪವೇ ಬದಲಾಯಿಸಿಬಿಟ್ಟಿತ್ತು—ಗುರ್ತು ಹಿಡಿಯುವುದೇ ಕಷ್ಟವಾಗುವ ಮಟ್ಟಿಗೆ. ಸದಾ ಕಳೆಕಳೆಯಾಗಿರುತ್ತಿದ್ದ ಆ ಹಸಿರು ಮಾಸಿಹೋಗಿತ್ತು. ಎಲ್ಲಿ ನೋಡಿದರೂ ಬಡತನ ಎದ್ದು ಕಾಣುತ್ತಿತ್ತು.

ಈ ಪರಿಸ್ಥಿತಿಗೆ ಹೊಂದಿಕೊಳ್ಳಲು ಬೇಂಬಿಗೆ ತುಂಬಾ ಕಷ್ಟವೇ ಆಯಿತು. ಎಲ್ಲಾ ಹೊಸದಾಗಿ ಕಾಣುತ್ತಿತ್ತು. ತಿನ್ನಲು ಹುಲ್ಲೂ ಸಿಗಲಾರದೆ ಆಗಬಹುದೆಂದು ಅವನೆಂದೂ ಊಹಿಸಿರಲಿಲ್ಲ. ಎಲೆಗಳ ಸೂರಿನ ಕೆಳಗೆ ತನ್ನ ಪೊದೆಮನೆಯು ಸಹಾ ಬೆಚ್ಚಗೇ ಇರುತ್ತದೆಯೆಂದುಕೊಂಡಿದ್ದ. ಅವನಿಗೆ ಅದೆಲ್ಲಾ ಕನಸಿನ ಮಾತಾಗಿತ್ತು.

ಮೊದಮೊದಲಲ್ಲಿ ಸುತ್ತಲಿನ ಬದಲಾವಣೆ ಅವನಿಗೆ ಸಂಭ್ರಮವನ್ನುಂಟುಮಾಡಿತ್ತು. ಬೆಳಗಿನಜಾವ ಮೈದಾನವೆಲ್ಲಾ ಮಂಜಿನಿಂದ ತುಂಬಿಹೋಗುತ್ತಿತ್ತು.

ಸೂರ್ಯೋದಯವಾದ ನಂತರ ಆ ಮಂಜು ದಟ್ಟವಾಗಿ ನಿಧಾನವಾಗಿ ಕರಗಿ ಹೋಗುತ್ತಿತ್ತು. ಗಿಡಮರಗಳ ಎಲೆಗಳು ಕೆಂಪು, ಹಳದಿ ಬಣ್ಣಕ್ಕೆ ತಿರುಗು

ತ್ತಿರುವುದನ್ನು ಅವನು ಆಶ್ಚರ್ಯದಿಂದ ನೋಡುತ್ತಿದ್ದ. ಸೂರ್ಯಕಾಂತಿಯಿಂದ ಕಾಡೆಲ್ಲಾ ಬೆಳಗುತ್ತಿರುವಂತೆ ಕಾಣುತ್ತಿತ್ತು ಅವನಿಗೆ.

ಉತ್ತರದೇಶದ ತಮ್ಮ ಜ್ಞಾತಿಗಳ ಕೂಗು ಈಗೀಗ ಹೆಚ್ಚು ಹೆಚ್ಚಾಗಿ ಕೇಳಿಸುತ್ತಿತ್ತು. ಅದನ್ನು ಕೇಳಿದಾಗ ಕಾರಣ ತಿಳಿಯದೆಯೇ ಅವನ ಮನಸು ಕಳವಳಕ್ಕೀಡಾಗುತ್ತಿತ್ತು. ಅವರ ಕೂಗಿನಿಂದ ಅಡವಿಯೆಲ್ಲಾ ಕಂಪಿಸಿದ್ದಂತೆನಿಸುತ್ತಿತ್ತು.

ಅಬ್ಬಾ. ಎಷ್ಟು ದೊಡ್ಡ ಶರೀರಗಳು ಅವಕ್ಕೆ. ಎಷ್ಟು ಬಲಿಷ್ಠ ಜೀವಿಗಳು ! 'ಅವುಗಳ ಕಿರೀಟಗಳಾದರೋ ಕೊಂಬೆಗಳಂತಲ್ಲದೆ, ಗಿಡದ ಬುಡಗಳಂತಿವೆ. ಅವುಗಳ ಕಂಠಧ್ವನಿ ಗುಡುಗಿನಂತಿದೆ' ಎಂದೆಲ್ಲಾ ಕವನ ಕಟ್ಟುತ್ತಿದ್ದ. ಅವುಗಳ ಕೂಗಿನಲ್ಲಿ ಒಮ್ಮೊಮ್ಮೆ ಸಹಿಸಲಾರದ ನೋವು. ಒಮ್ಮೊಮ್ಮೆ ಒಮ್ಮೊಮ್ಮೆ ಹೆಮ್ಮೆ, ಉತ್ಸಾಹ ಮೊದಲಾದ ಭಾವನೆಗಳು ಹೊರಹೊಮ್ಮುತ್ತಿದ್ದುವು.

ತಮ್ಮ ಜ್ಞಾತಿಗಳ ಬಲಪರಾಕ್ರಮಗಳನ್ನು ನೆನಸಿಕೊಂಡಾಗ ಬೇಂಬಿಗೆ ಹೆಮ್ಮೆಯುಂಟಾದರೂ ಅವು 'ಮುಟ್ಟಿದರೆ ಮುನಿ'ಯಂತೆ ದೂರ ದೂರವಾಗಿರುವುದು ಅವನಿಗೆ ಅಸಂತೃಪ್ತಿಯನ್ನುಂಟುಮಾಡುತ್ತಿತ್ತು. ತನ್ನನ್ನು ಕೀಳಾಗಿ ನೋಡುತ್ತಿರುವಂತೆ ಅನ್ನಿಸುತ್ತಿತ್ತು. ಅದು ಏಕೆ ಹಾಗನಿಸುತ್ತಿತ್ತೆಂಬುದು ಅವನಿಗೇ ತಿಳಿಯದು. "ಊಹೂಂ ! ಅವರೊಂದಿಗೆ ತನಗೆ ಸ್ನೇಹ ಸರಿಹೋಗದು" ಎಂದು ತೀರ್ಮಾನಿಸಿಕೊಂಡ.

ರಾತ್ರಿಯವೇಳೆ ಕಾಡಿನಲ್ಲಿ ತಿರುಗಾಡುತ್ತಿರುವಾಗಲೂ ಹಗಲು ಪೊದೆಮನೆಯಲ್ಲಿ ಮಲಗಿದ್ದಾಗಲೂ ಉದುರಿಹೋಗುತ್ತಿದ್ದ ಎಲೆಗಳ ಸಪ್ಪಳ ಕೇಳಿಸುತ್ತಲೇ ಇತ್ತು. ಎಲ್ಲಾ ಕಡೆಯಿಂದಲೂ ಗರಗರ, ಗಲಗಲ ಶಬ್ದಗಳು ಕೇಳಿ ಬರುತ್ತಿದ್ದುವು. ಆ ಶಬ್ದಗಳಲ್ಲಿ ಎಂತಹದೋ ರಹಸ್ಯ ಅಡಗಿರುವಂತೆನಿಸುತ್ತಿತ್ತು. ಸರಿಯಾಗಿ ನಿದ್ದೆಯೂ ಬರುತ್ತಿರಲಿಲ್ಲ.

ಈಗಿನ ಕಾಡಿನ ನೆಲವೆಲ್ಲಾ ಉದುರಿದ ಎಲೆಗಳಿಂದ ತುಂಬಿಹೋಗಿತ್ತು..

ಹೆಜ್ಜೆಯಿಟ್ಟರೆ ಗುಂಯ್ ಎನ್ನುತ್ತಿದ್ದುವು. ಕಾಲುಗಳಿಂದ ಅವುಗಳನ್ನು ನಾಲ್ಕೂಕಡೆಗೆ ಚೆಲ್ಲಾಡುವುದು ಅವನಿಗೆ ತಮಾಷೆಯ ಆಟವಾಗಿತ್ತು. ಆ ಎಲೆಗಳ ಸದ್ದು ಕೇಳಲು ತಮಾಷೆಯಾಗಿರುವುದೊಂದೇ ಅಲ್ಲದೆ ಇನ್ನೂ ಕೆಲವು ಪ್ರಯೋಜನಗಳೂ ಇದ್ದುವು. ಕಷ್ಟಪಟ್ಟು ವಾಸನೆ ಹೀರಬೇಕಾಗಿಲ್ಲ. ಕಣ್ಣು ಹಿಗ್ಗಿಸಿ ನೋಡಬೇಕಾಗಿಲ್ಲ. ಹೊಸಬರಾರಾದರೂ ಬಂದರೇ ಸಾಕು, ಎಲೆಗಳ ಸದ್ದು ಅದನ್ನು ಮುಂಚಿತವಾಗಿಯೇ ತಿಳಿಸಿಬಿಡುತ್ತಿತ್ತು.

ಮಳೆ ಬಂದಿತ್ತು. ಬೆಳಗಿನಿಂದ ರಾತ್ರಿಯವರೆವಿಗೂ ಒಂದೇ ಸಮನೆ ಬೀಳುತ್ತಲೇ ಇತ್ತು. ಚಳಿಗಾಳಿ ರೊಯ್ಯನೆ ಬೀಸುತ್ತಿತ್ತು. ಮತ್ತೆ ಬೆಳಗಾದ ಕೂಡಲೇ ಅದರ ಎರಡರಷ್ಟು ಬಿರುಸಿನಿಂದ ಮಳೆ. ಕಾಡಿನಲ್ಲಿ ನೆನೆಯದಿರುವ ಸ್ಥಳವೇ ಇಲ್ಲವಾಗಿತ್ತು. ಸ್ವಲ್ಪ ತಿಂಡಿ ತಿನ್ನೋಣವೆಂದು ಹುಲ್ಲು ಕಚ್ಚಿದರೆ ಸಾಕು. ಬಾಯಿ ತುಂಬಾ ನೀರು ನೀರು, ಯಾವುದಾದರೂ ಪೊದೆಯನ್ನು ತಾಗಿದರೂ ಸಾಕು, ಮೈತುಂಬಾ ನೀರು ನೀರು, ಮಳೆಗಾಲದಲ್ಲಿ ದಿನಗಳೆಯುವುದು ಎಷ್ಟು ಕಷ್ಟ ಎಂಬುದು ಬೇಂಬಿಗೆ ಅರ್ಥವಾಗ ತೊಡಗಿತ್ತು. ನೆನೆದು ಮುದ್ದೆಯಾದ ಚರ್ಮವನ್ನು ಬಾರಿ ಬಾರಿಗೂ ಒದರಬೇಕಾಗುತ್ತಿತ್ತು. ಸ್ವಲ್ಪ ಬೆಚ್ಚಗೆಯ ಸ್ಥಳ ಸಿಕ್ಕರೆ ಸಾಕು ಎಂದು ಅಂಗಲಾಚುತ್ತಿತ್ತು.

ಎಲೆಗಳ ಗರಗರ ಶಬ್ದ ಈಗಿಲ್ಲ. ಅವು ನೆನೆದು ಮುದ್ದೆಯಾಗಿ ನೆಲವನ್ನು ಅಂಟಿಕೊಂಡಿದ್ದವು.

ಅನಂತರ ಉತ್ತರದ ಗಾಳಿ ಬೀಸಲಾರಂಭಿಸಿತು. ನಿಜವಾದ ಚಳಿ ಎಂದರೆ ಏನೆಂಬುದು ಬೇಂಬಿಗೆ ಈಗಲೀಗ ಅರ್ಥವಾಗತೊಡಗಿತು. ಅಮ್ಮನನ್ನು ಎಷ್ಟು ಒತ್ತಿಕೊಂಡು ಮಲಗಿಕೊಂಡರೂ ಚಳಿ ಕಡಿಮೆಯಾಗುತ್ತಿರಲಿಲ್ಲ.

ಚಳಿಗಾಳಿಯ ವೇಗ ಹೆಚ್ಚಾಗಿತ್ತು. ಕಾಡಿನ ಮೇಲೆ ಕೋಪಿಸಿಕೊಂಡ ಗಾಳಿ ಗಿಡಮರಗಳೆನ್ನೆಲ್ಲಾ ಬುಡಸಹಿತ ಕಿತ್ತು ಹಾಕಬೇಕೆಂದು ಪಣ ತೊಟ್ಟಿದೆಯೇನೋ ಎಂಬಂತೆ ಭಯಂಕರವಾಗಿ ಬೀಸುತ್ತಿತ್ತು. ಅದನ್ನು ಎದುರಿಸಿ ಹೋರಾಡುತ್ತಿರುವ ವೀರರಂತೆ ಗಿಡಗಳು ಅತ್ತಿಂದಿತ್ತ ಹೊಯ್ದಾಡುತ್ತಿದ್ದುವು.

ಕೇಲವೇ ಕೊಂಬೆಗಳು ಮುರಿದುಬೀಳುತ್ತಿದ್ದವು. ಕೆಲವು ಬೇರುಸಹಿತ ಕಿತ್ತು ಬೀಳುತ್ತಿದ್ದುವು. ಗಿಡ, ಮರಗಳ ಬೋಳು ಕೊಂಬೆಗಳ ಮಧ್ಯದಿಂದ ಬೀಸಿ ಬರುತ್ತಿದ್ದ ಗಾಳಿಯ ಶಬ್ದದಲ್ಲಿ ಮತ್ತಾವ ಸದ್ದೂ ಕೇಳದಂತಾಗುತ್ತಿತ್ತು.

ಗಾಳಿ, ಮಳೆ ಒಂದಾಗಿ ಸೇರಿ ತಮ್ಮ ಕೆಲಸವನ್ನು ಸಮರ್ಪಕವಾಗಿ ಮಾಡಿ ಮುಗಿಸಿದ್ದುವು.

ಮರಗಿಡಗಳಲ್ಲಿ ಒಂದೆಲೆ ಸಹ ಉಳಿದಿರಲಿಲ್ಲ. ಜೀವ ಇದೆಯೋ ಇಲ್ಲವೊ ಎನ್ನುವಂತೆ ಕಪ್ಪಗಿನ ಬೋಳು ಹೊರತು ಮತ್ತೇನೂ ಕಾಣಸುತ್ತಿರಲಿಲ್ಲ.

ಆಳುದ್ದ ಹುಲ್ಲಿನಿಂದ ಹಸಿರಾಗಿ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದ ಮೈದಾನಲ್ಲೀಗ, ಹುಲ್ಲುಕಡ್ಡಿಗಾಗಿ ಕಣ್ಣಲ್ಲಿ ಕಣ್ಣಿಟ್ಟು ಹುಡುಕುವಂತಾಗಿತ್ತು. ಬೇಂಬಿಯ ಪೊದೆಮನೆ ಈಗ ಬೋಳು ಬೋಳಾಗಿತ್ತು. ಈಗ ಅಲ್ಲಿ ನಿಂತರೆ ಮರೆ ಎಂಬುದೇ ಇರಲಿಲ್ಲ, ನಡುದಾರಿಯಲ್ಲಿ ನಿಂತಂತಾಗುತ್ತಿತ್ತು.

ಒಂದು ದಿನ ಒಂದು ಪುಟಾಣಿ ಮೈನಾ ಮೈದಾನದಲ್ಲಿ ಹಾರುತ್ತಿತ್ತು. ಅದಕ್ಕೆ ಅಲ್ಲೊಂದು ಮೃದುವಾದ, ಬಿಳಿಯ ತಣ್ಣಗಿನ ವಸ್ತುವೊಂದು ಕಾಣಿಸಿತು. ಅದು ತುಂಬಾ ಸ್ವಚ್ಛವಾಗಿ ಅರಳೆಯಂತೆ ಮೆತ್ತಗಿತ್ತು ಆ ಅರಳೆಯ ಹಿಂಜೆಗಳು ದಟ್ಟವಾಗಿ ಬೀಳ ತೊಡಗಿದ್ದುವು. ಮೈನಾ ರೆಕ್ಕೆಗಳನ್ನು ಒದರಿ ಕೊಳ್ಳುತ್ತಾ ಇನ್ನು ಮೇಲಕ್ಕೆ ಹಾರತೊಡಗಿತು. ಅಲ್ಲಿಯೂ ಅವುಗಳಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಅದು ಮತ್ತಷ್ಟು ಮೇಲಕ್ಕೆ ಹಾರಿತು.

"ಅಯ್ಯೋ ಹುಚ್ಚಮ್ಮಾ, ಸುಮ್ಮನೆ ಏಕೆ ಕಷ್ಟಪಟ್ಟು ಮೇಲಕ್ಕೆ ಹಾರುತ್ತಿ ? ಎಷ್ಟು ಎತ್ತರಕ್ಕೆ ಹಾರಿದರೂ ಅವು ಬೀಳುತ್ತಲೇ ಇರುತ್ತವೆ. ಅದು ಮಂಜು" ಎಂದಿತು. ಮುದಿ ಕಾಗೆ.

"ಮಂಜೇ !" ಆಶ್ಚರ್ಯದಿಂದ ಮೈನಾಳ ಬಾಯಿ ತೆರೆದುಕೊಂಡಿತು.

"ಹೌದು. ಇದು ಚಳಿಗಾಲ. ಮಂಜು ಬೀಳುತ್ತದೆ."

"ಹಾಗೇನು ? ಕ್ಷಮಿಸಿ. ನಾನು ಮೊನ್ನೆ ಮೇ ತಿಂಗಳಲ್ಲಿ ತಾನೇ ಗೂಡಿನಿಂದ ಹೊರಗೆ ಬಂದೆ. ಚಳಿಗಾಲ ಎಂದರೇನೋ ನನಗೆ ಗೊತ್ತಿಲ್ಲ."

"ಇರಬಹುದು, ಬರಬರುತ್ತಾ ನಿನಗೆ ಗೊತ್ತಾಗುತ್ತೆ ಬಿಡು" ಎಂದಿತು ಮುದಿ ಕಾಗೆ.

"ಎಷ್ಟು ಎತ್ತರಕ್ಕೆ ಹಾರಿದರೂ ಈ ಮಂಜಿನಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ ಎಂದಾದರೆ ಯಾವುದೋ ಒಂದು ಕೊಂಬೆಯ ಮೇಲೇ ಕೂತು ಕೊಳ್ಳೋದು ಒಳ್ಳೇದು" ಎನುತ್ತಾ ಪೈನ್ ಮರದ ಕಡೆ ಹಾರಿತು.

ಕಾಗೆ ಮುಂದಕ್ಕೆ ಹಾರಿತು.

ಮಂಜನ್ನು ನೋಡಿದ ಮೊದಮೊದಲಲ್ಲಿ ಬೇಂಬಿ ತುಂಬಾ ಸಂಭ್ರಮ ಪಟ್ಟ. ಬಿಳುಪಾದ ಮಂಜಿನ ಉಂಡೆಗಳು ಉದುರಿಬೀಳುತ್ತಿದ್ದಾಗ ಅವ ನಿಗೆಷ್ಟೋ ಮಜವಾಗಿ ಕಾಣಿಸಿತ್ತು. ಆದರೆ ಬಹುಬೇಗ ಆ ಸಂಭ್ರಮ ಹಾರಿ ಹೋಯಿತು. ಹುಲ್ಲಿಗೋಸ್ಕರ ಈಗ ಮಂಜಿನಲ್ಲಿ ಬಹಳ ಹೊತ್ತು ಹುಡಕ ಬೇಕಾಗಿ ಬರುತ್ತಿತ್ತು. ಮಂಜು ಗಟ್ಟಿಯಾಗಿ ಅದರ ಮೇಲೆ ನಡೆಯಬೇಕಾದರೆ ಕಾಲು ಜಾರುತ್ತಿತ್ತು. ಕಾಲು ಮುರಿಯುವ ಅವಕಾಶವೂ ಇತ್ತು. ಗೋಬೋ ಒಂದು ಸಲ ಜಾರಿ ಬಿದ್ದ ಸಹ.

ಸದಾ ಅವನನ್ನು ಯಾರಾದರೊಬ್ಬರು ಜಾಗರೂಕತೆಯಿಂದ ನೋಡಿ ಕೊಳ್ಳಬೇಕಾಗುತ್ತಿತ್ತು.

ಅವರೆಲ್ಲಾ ಆಗಾಗ ಒಂದು ಕಡೆ ಸೇರುತ್ತಲೇ ಇದ್ದರು. ಏನಾ ಚಿಕ್ಕಮ್ಮ ಮಕ್ಕಳನ್ನು ಕರೆದುಕೊಂಡು ದಿನಾ ಬರುತ್ತಿದ್ದಳು. ಇವರ ಜತೆಗೆ ಮರೀನಾ ಸಹ ಸೇರಿದ್ದಳು. ಅವಳು ತುಂಬಾ ಚೆಂದ ಕಾಣುತ್ತಿದ್ದಳು. ನವೀನಾ ಚಿಕ್ಕಮ್ಮ ಇದ್ದರಂತೂ ಮಾತಿಗೆ ಕೊನೆ ಮೊದಲೇ ಇರುತ್ತಿರಲಿಲ್ಲ. ಆಕೆಯನೆಲ್ಲಾ ಪ್ರತ್ಯೇಕವಾದ ಅಭಿರುಚಿ, ಅಭಿಪ್ರಾಯಗಳು ಒಳ್ಳೆ ಮಾತುಗಾತಿ.

ದೊಡ್ಡವರೆಲ್ಲಾ ಗುಂಪಾಗಿ ಸೇರಿ ಮಾತನಾಡಿಕೊಳ್ಳುವಾಗ ಮಕ್ಕಳೆಲ್ಲಾ ಸುತ್ತಲೂ ಸೇರಿ ಆಲಿಸುತ್ತಿದ್ದರು. ಆಗ ಅವರಿಗೆ ಎಷ್ಟೋ ಹೊಸ ವಿಷಯಗಳು ತಿಳಿಯುತ್ತಿದ್ದುವು. ಹೆಂಗಸರೆಲ್ಲಾ ಕುಳಿತು ಮಾತನಾಡುತ್ತಿದ್ದಾಗ, ಆಗಾಗ ಒಬ್ಬರೋ ಇಬ್ಬರೋ ಯುವರಾಜರೂ ಅವರ ಬಳಿಗೆಬರುತ್ತಿದ್ದರು. ಮೊದಮೊದಲು ಮಕ್ಕಳು ನಾಚಿಕೊಳ್ಳುತ್ತಿದ್ದರು. ಬರ

ಬರುತ್ತಾ ಅವರೂ ಎಲ್ಲರೊಂದಿಗೆ ಮಾತುಕತೆಯಲ್ಲಿ ತೊಡಗುತ್ತಿದ್ದರು.

ಯುವರಾಜ ರೋನೋನನ್ನು ಕಂಡರೆ ಬೇಂಬಿಗೆ ತುಂಬಾ ಗೌರವ, ಕಾರೋನನನ್ನು ಕಂಡರೂ ಅಷ್ಟೇ. ಅವರಿಬ್ಬರೂ ಇದೀಗ ತಮ್ಮ ಕಿರೀಟ ಗಳನ್ನು ತೆಗೆದುಹಾಕಿದ್ದರು. ಬೇಂಬಿ ಉತ್ಸುಕತೆಯಿಂದ ಅವರ ಬೋಳುತಲೆ ಯ ಮೇಲಿನ ಚಿಕ್ಕ ಚಿಕ್ಕ ಕಪ್ಪುಗಳನ್ನು ತದೇಕವಾಗಿ ನೋಡುತ್ತಿದ್ದ. ಆ ಸ್ಥಳದಲ್ಲಿ ಇದಕ್ಕೆ ಮುಂಚೆ ಅವರಿಗೆ ಕಿರೀಟಗಳಿದ್ದುವು. ಕಿರೀಟಗಳಿಲ್ಲದ ಆ ಜಾಗ ನೋಡಲು ತಮಾಷೆಯಾಗಿ ಕಾಣುತ್ತಿತ್ತು.

ಯುವರಾಜರು ಆಗಾಗ ತಮ್ಮ ಕಥೆಗಳನ್ನು ಹೇಳುತ್ತಿದ್ದರು. ಅದು ಕೇಳಲು ತುಂಬಾ ಕುತೂಹಲಕರವಾಗಿರುತ್ತಿತ್ತು. ರೋನೋನ ಎಡಗಾಲು ಸ್ವಲ್ಪ ಸೊಟ್ಟಗಿದ್ದು ಗಾಯವಾಗಿತ್ತು. ಕೂಡ ನಡೆಯುವಾಗ ಸ್ವಲ್ಪ ಕುಂಟು ತ್ತಿದ್ದ. ಅವನು ತನ್ನ ಸಂಭಾಷಣೆಯಲ್ಲಿ ಆಗಾಗ ತನ್ನ ಕುಂಟುಕಾಲಿನ ವಿಷಯ ಹೇಳುತ್ತಿದ್ದ.

"ನಾನು ಕುಂಟುತ್ತಾ ನಡೆಯುವುದನ್ನು ನೀವು ಗಮನಿಸಿಯೇ ಇರು ತ್ತೀರಿ" ಎಂದು ಪ್ರಾರಂಭಿಸುತ್ತಿದ್ದ.

ಎಲ್ಲರೂ ದಾಕ್ಷಿಣ್ಯಕ್ಕೆ "ಇಲ್ಲ, ಇಲ್ಲ, ಅಷ್ಟೇನು ಅನ್ನಿಸುವುದಿಲ್ಲ" ಎನ್ನುತ್ತಿದ್ದರು. ರೋನೋಗೆ ಬೇಕಾದದ್ದೂ ಅಷ್ಟೆ. ಆದರೆ ಅವನ ಕುಂಟು ನಡಿಗೆ ಸ್ಪಷ್ಟವಾಗಿ ಕಾಣುತ್ತಲೇ ಇತ್ತು.

"ದೊಡ್ಡ ಗಂಡಾಂತರದಿಂದ ಪಾರಾಗಿ ಬಂದೆ ನಾನು" ಎಂದು ತನ್ನ ಕಥೆ ಪ್ರಾರಂಭಿಸುತ್ತಿದ್ದ.

ಆ 'ಮನುಷ್ಯ' ಒಂದುದಿನ ರೋನೋನ ಮೇಲೆ ಬೆಂಕಿಯ ಮಳೆ ಸುರಿ ಸಿದ್ದ. ಅದೃಷ್ಟವಶಾತ್ ಅದು ಅವನ ಕಾಲಿಗೆ ಮಾತ್ರವೇ ತಗುಲಿತ್ತು. ಚರ್ಮ ಕಿತ್ತು ಬಂದಿತ್ತು. ಸಹಿಸಲಾಗದ ನೋವು. ಅದನ್ನು ಹೇಗೋ ತಡೆದುಕೊಂಡು ರೋನೋ ಮೂರುಕಾಲಿನಲ್ಲಿಯೇ ಓಟಕಿತ್ತಿದ್ದ. ಹಿಂದೆ ಯಾರೋ ತನ್ನನ್ನು ಅಟ್ಟಿಸಿಕೊಂಡು ಬಂದಂತೆ ಅನ್ನಿಸುತ್ತಿತ್ತು. ವಿಪರೀತ ಆಯಾಸ. ಆದರೂ ನಿಲ್ಲುವ ಹಾಗಿಲ್ಲ ಓಡಿದ, ಓಡಿದ. ಕತ್ತಲಾಗುವವ

ರೆಗೂ ಓಡುತ್ತಲೇ ಇದ್ದ. ಕೊನೆಗೆ ರಾತ್ರಿ ಯಾದನಂತರ ಒಂದುಕಡೆ ನಿಂತ. ನಿಟ್ಟುಸಿರುಬಿಟ್ಟ. ಬೆಳಗಾದ ಕೂಡಲೇ ಮತ್ತೆ ಓಟ. ಕೊನೆಗೆ ಪ್ರವಾಹ ಕಳೆಯಿತೆಂದನಿಸಿತು. ಆಗ ಒಂದು ರಹಸ್ಯವಾದ ಸ್ಥಳದಲ್ಲಿ ಬಚ್ಚಿಟ್ಟುಕೊಂಡ. ಕಾಲಿನಗಾಯ ಮಾಯುವವರೆಗೂ ಅಲ್ಲಿಂದ ಹೊರಬರಲಿಲ್ಲ. ಅದು ಅವನ ಕಥೆ! ಈ ಕಾರಣದಿಂದಾಗಿಯೇ ಎಲ್ಲರೂ ಅವನನ್ನು ಮಹಾವೀರನೆಂದು ಭಾವಿಸುತ್ತಿದ್ದರು. ಪಾಪ, ಸ್ವಲ್ಪ ಹೆಚ್ಚಾಗಿಯೇ ಕುಂಟುತ್ತಾನೆ. ಆದರೆ ಅದು ಯಾರಿಗೂ ಕಾಣಿಸುವುದಿಲ್ಲವೆಂದೇ ಅವನ ನಂಬಿಕೆ.

ಅವರೆಲ್ಲಾ ಒಟ್ಟಾಗಿ ಕಲೆತು, ಕುಳಿತು ಮಾತನಾಡುವಾಗ, ಸಂಭಾಷಣೆ ಎಲ್ಲಿಂದ ಪ್ರಾರಂಭವಾದರೂ ಅದು ಮನುಷ್ಯನ ವಿಷಯಕ್ಕೇ ಬಂದು ನಿಲ್ಲುತ್ತಿತ್ತು. ಅವನು ಎಷ್ಟು ಭಯಂಕರವಾಗಿರುತ್ತಾನೆಂದೋ, ಅವನಿಂದ ಹೊರಹೊಮ್ಮುವ ಗಬ್ಬುವಾಸನೆ ಎಷ್ಟು ಅಸಹ್ಯಕರವಾಗಿರುತ್ತದೆಂದೋ ಎಂಬ ವಿಷಯಗಳನ್ನು ಒಬ್ಬರನಂತರ ಮತ್ತೊಬ್ಬರು ವರ್ಣಿಸುತ್ತಿದ್ದರು. ಬೇಂಬಿ ಸಹ ಮನುಷ್ಯನನ್ನು ನೊಡಿದ್ದ. ಹೇಳಲು ಅವನಿಗೂ ಸ್ವಲ್ಪ ಅನುಭವವಿತ್ತು. ಆದರೆ ಹಿರಿಯರು ಮಾತನಾಡುತ್ತಿರುವಾಗ ಮಕ್ಕಳು ಮಧ್ಯದಲ್ಲಿ ತಲೆಹಾಕುವುದು ಮರ್ಯಾದೆಯಲ್ಲ ಎಂದು ಬೇಂಬಿಗೆ ಗೊತ್ತಿತ್ತು. ಆದ್ದರಿಂದಲೇ ಸದಾ ಅವರ ಮಾತುಗಳನ್ನು ಕೇಳುತ್ತಿದ್ದನೇ ಹೊರತು ತಾನು ಮಾತನಾಡುತ್ತಿರಲಿಲ್ಲ.

ಮನುಷ್ಯ ತನ್ನ ಎರಡು ಕಾಲಿನಮೇಲೆ ನಡೆಯುವುದು ಅವರಿಗೆ ಎಷ್ಟೋ ಆಶ್ಚರ್ಯವನ್ನುಂಟುಮಾಡುತ್ತಿತ್ತು.

ಅವನ ಕೈ ಬಹಳ ಲಾಘವದಿಂದ ಕೆಲಸ ಮಾಡುತ್ತವೆಯೆಂದು ಅವರು ಪಿಸುಮಾತಿನಲ್ಲಿ ಹೇಳಿಕೊಳ್ಳುತ್ತಿದ್ದರು. ಅವನ ಕೈಗಳ ವಿಷಯ ಬಂದಾಗ ನವೀನ ಚಿಕ್ಕಮ್ಮ ನಕ್ಕು ಹಾರಿಸಿಬಿಡುತ್ತಿದ್ದಳು.

"ಏನಿದೆ ಅದರಲ್ಲಿ ಆಶ್ಚರ್ಯ ಪಡೋಕೆ? ನಮ್ಮ ಅಳಿಲು ಹಿಂದಿನ ಕಾಲಮೇಲೆ ಕುಳಿತು, ಮುಂದಿನ ಕಾಲುಗಳಿಂದ ಎಲ್ಲಾ ಕೆಲಸ ಮಾಡಿಕೊಳ್ಳುವುದಿಲ್ಲವೇ, ಹಾಗೆಯೇ ಅದೂನು, ಏನು ಮಹಾ!" ಎನ್ನುತ್ತಿದ್ದಳು.

ಆಳಿಲು ಹಿಂದಿನ ಕಾಲಮೇಲೆ ಕುಳಿತುಕೊಳ್ಳುವುದೂ ಮನುಷ್ಯ ಎರಡು ಕಾಲಮೇಲೆ ಕುಳಿತು ನಿಲ್ಲುವುದೂ ಇವೆರಡೂ ಒಂದೇತರಹ ಅಲ್ಲವೆಂದು ಎಲ್ಲರೂ ಹೇಳಿದರೂ ನವೀನ ಚಿಕ್ಕಮ್ಮ ಒಪ್ಪಿಕೊಳ್ಳುತ್ತಿರಲಿಲ್ಲ.

"ಕಾಗೆ, ಹದ್ದು, ಗೂಬೆ ಇವೆಲ್ಲಕ್ಕೂ ಎರಡೇ ಕಾಲು. ಅವೂ ಸಹ ಆಗಾಗ ಒಂದು ಕಾಲಮೇಲೆ ನಿಂತು, ಎರಡನೆಯ ಕಾಲಿನಿಂದ ಏನನ್ನಾದರೂ ಹಿಡಿದುಕೊಳ್ಳುತ್ತವೆ. ಅದನ್ನು ನಾವು ಎಷ್ಟೋಸಲ ನೋಡಿದ್ದೇವೆ. ಮನುಷ್ಯನೂ ಅಷ್ಟೆ. ಮನುಷ್ಯನನ್ನು ಕುರಿತು ಆಶ್ಚರ್ಯಪಡಬೇಕಾದ ಅವಶ್ಯಕತೆ ಏನೂ ಇಲ್ಲ" ಎನ್ನುವುದೇ ಅವಳ ಅಭಿಪ್ರಾಯ. ಅವನ ಹೆಸರೆತ್ತಿದರೆ ಜುಗುಪ್ಸೆ ಅವಳಿಗೆ.

"ಮನುಷ್ಯನ ಹೆಸರೆತ್ತಿದರೇ ಆಗೊಲ್ಲ ನಂಗೆ" ಎಂದು ಮುಖ ಕಿವಿಚುತ್ತಿದ್ದಳು.

ಅವಳ ಮಾತಿಗೆ ಎಲ್ಲರ ಒಪ್ಪಿಗೆಯೂ ಇತ್ತು. ಆದರೆ ಮನುಷ್ಯನಿಗೆ ಮೂರನೆಯ ಕೈ ಇದೆಯೇ ಇಲ್ಲವೇ ಎಂಬುದರ ಬಗ್ಗೆ ಒಬ್ಬೊಬ್ಬರ ಅಭಿಪ್ರಾಯ ಒಂದೊಂದಾಗಿತ್ತು.

"ಅಂ...ಪುಟಗೋಸಿ, ಮೂರನೆ ಕೈ ಇದೆಯೇ ಇಲ್ಲ ಏನೂ ಇಲ್ಲ" ಎನ್ನುತ್ತಾಳೆ ನವೀನಾ.

ಆದರೆ ರೋನೋ ಅದನ್ನು ಒಪ್ಪುವುದಿಲ್ಲ.

"ಓಹೋ! ಹಾಗೇನು? ಹಾಗಾದರೆ ಈ ನನ್ನ ಕಾಲಿನಮೇಲೆ ಪೆಟ್ಟು ಮಾಡಿದ್ದು ಯಾರಂತೆ?" ಎನ್ನುತ್ತಿದ್ದ.

"ನಿನಗೆ ತಗುಲಿದ ಪೆಟ್ಟನ್ನು ಕುರಿತು ನೀನು ನೋಡಿಕೋ. ಕಾಲು ಮುರಿದದ್ದು ನನಗಲ್ಲ ತಾನೇ?" ಎಂದು ನವೀನಾ ಅವನನ್ನು ಗೇಲಿಮಾಡುತ್ತಿದ್ದಳು.

ಏಣಿ ಚಿಕ್ಕಮ್ಮ "ಆ ವಿಷಯವನ್ನು ಅಷ್ಟು ಹಗುರವಾಗಿ ತೆಗೆದುಕೊಳ್ಳುವುದು ಸರಿಯಿಲ್ಲ" ಎನ್ನುತ್ತಿದ್ದಳು.

"ಮೂರನೆಯ ಕೈಯನ್ನು ಕುರಿತು ನಾನು ಬಹಳಸಲ ಕೇಳಿದ್ದೀನಿ" ಎಂದು ವಿನಯದಿಂದ ಯುವರಾಜ ಕಾರೋ ತನ್ನ ಅಭಿಪ್ರಾಯ ಮಂಡಿಸಿದ. "ನನಗೆ ತಿಳಿದ ವಿಷಯ ಒಂದನ್ನು ಹೇಳಿದರೆ ಯಾರೂ ಏನೂ ತಪ್ಪು ತಿಳಿಯುವುದಿಲ್ಲವಷ್ಟೆ " ಎಂದು ಎಲ್ಲರೂ ತನ್ನ ಮಾತುಗಳನ್ನು ಕೇಳುತ್ತಿದ್ದಾರೆಯೋ ಇಲ್ಲವೋ ಎಂಬಂತೆ ಒಮ್ಮೆ ಸುತ್ತಲೂ ನೋಡಿ ಮತ್ತೆ ಹೇಳಿದ ಕಾರೋ,

"ನನಗೆ ಒಂದು ಕಾಗೆಯೊಂದಿಗೆ ಸ್ನೇಹವಿದೆ. ಆ ಕಾಗೆಗೆ ಬಹಳಷ್ಟು ವಿಷಯಗಳು ಗೊತ್ತು. ಮನುಷ್ಯ ನಿಜವಾಗಿ ಮೂರನೆಯ ಕೈಯನ್ನು ಬಳಸುತ್ತಾನಂತೆ. ಆದರೆ ಒಂದೊಂದು ಸಲ ಉಪಯೋಗಿಸದೆ ಇರುವುದೂ ಉಂಟಂತೆ. ಕಾಗೆ ಹಾಗೆ ಹೇಳಿದೆ. ಮತ್ತೆ, ಆ ಮೂರನೆಯ ಕೈ ಬಹಳ ಪ್ರಮಾದಕರವಾದುದಂತೆ. ಅದು ಮನುಷ್ಯನ ಶರೀರದೊಳಗಿನಿಂದ ಹುಟ್ಟಿಬಂದಿಲ್ಲವಂತೆ. ಅದನ್ನು ಭುಜದ ಮೇಲೆ ಹಾಕಿಕೊಂಡು ಬರುತ್ತಾನಂತೆ. ಅದು ಅವನ ಜತೆಯಲ್ಲಿದ್ದರೆ ಅಪಾಯ ಇದ್ದಂತೆ. ಇಲ್ಲದಿದ್ದರೆ ಇಲ್ಲ ಅಂತ ಸುಲಭವಾಗಿ ಹೇಳಬಹುದಂತೆ."

ನವೀನಾ ಚಿಕ್ಕಮ್ಮ ಹಾಸ್ಯವಾಗಿ ನಕ್ಕಳು.

"ನಿನ್ನ ಕಾಗೆ ಯಾರೋ ನನಗ್ಗೊತ್ತಿಲ್ಲ. ಆದರೆ ಅದಕ್ಕೆ ತಲೆ ಕಡಿಮೇಂತ ಹೇಳಬಲ್ಲೆ. ಈ ಸಲ ಅದು ಕಾಣಸಿದರೆ ಹೇಳು—ಮನುಷ್ಯ ಹೇಗಿದ್ದರೂ ಸರಿ. ಎಂದಿಗೂ, ಎಂದೆಂದಿಗೂ ಅಪಾಯಕಾರಿಯೇ ಅಂತ."

ಆದರೆ ಆಕೆಯ ಮಾತುಗಳನ್ನು ಮಿಕ್ಕವರು ಒಪ್ಪಿಕೊಳ್ಳಲಿಲ್ಲ.

"ಹಾಗಾದರೆ ಅವರಲ್ಲಿ ಒಳ್ಳೆಯವರು ಇರುವುದೇ ಇಲ್ಲವೇನು ?" ಎಂದಳು ಬೇಂಬಿಯ ಅಮ್ಮ

"ಓಹೋಹೋ, ಇವಳೊಬ್ಬಳು ಸತ್ಯಕಾಲದವಳು ಹುಟ್ಟಿಕೊಂಡಿದ್ದಾಳೆ. ಮನುಷ್ಯ ಬರ್ತಿದಾನೆ ಅಂದರೆ ಧಾವಿಸಿಹೋಗಿ 'ಸುಸ್ವಾಗತ' ಅಂತಾಳೋ ಏನೋ" ಗೇಲಿ ಮಾಡಿದಳು ನವೀನ ಚಿಕ್ಕಮ್ಮ.

ಅವರ ಮಾತಿನ ಮಧ್ಯದಲ್ಲಿ ಫಲೀನಾ "ಮನುಷ್ಯ ಅಷ್ಟು ದೂರದಲ್ಲಿ ಕಾಣಿಸಿದಾಕ್ಷಣ ಕಾಲಿಗೆ ಬುದ್ಧಿ ಹೇಳಿದರೆ ಸರಿ" ಎಂದಳು.

ಚಿಕ್ಕ ಹುಡುಗಿಯ ಮಾತಿಗೆ ಎಲ್ಲರೂ ನಕ್ಕುಬಿಟ್ಟರು.

"ಮೂರನೆಯ ಕೈ ಅನ್ನು, ಮತ್ತೊಂದು ಅನ್ನು, ಒಟ್ಟಿನ ಮೇಲೆ ಅದರಿಂದಲೇ ಅಲ್ಲವೇ, ಸಾವು ಬರುತ್ತಿದೆ ನಮಗೆ" ಎಂದಳು ಪೀಣೆ ಚಿಕ್ಕಮ್ಮ.

ಆದರೆ ಆ ವಿಷಯ ಯಾರಿಗೂ ಸರಿಯಾಗಿ ತಿಳಿಯದು. ಎಲ್ಲರೂ ಯಾರೋ ಒಬ್ಬರಿಂದೊಬ್ಬರಿಗೆ ಹೇಳಿರುವುದನ್ನು ಕೇಳಿರುವುದಷ್ಟೆ. ಮನುಷ್ಯ ತಾನು ದೂರವಾಗಿಯೇ ನಿಂತಿರುತ್ತಾನೆ. ಅಲ್ಲಿಂದ ಅಲುಗಾಡುವುದೂ ಇಲ್ಲ. ಅಷ್ಟರಲ್ಲಿ ಏನೋ ನಡೆದುಹೋಗುತ್ತೆ. ದೊಡ್ಡದಾಗಿ ಗುಡುಗಿನಂತಹ ಶಬ್ದ ಕೇಳಿಸುತ್ತೆ, ಅಷ್ಟೆ ! ಯಾರೋ ಒಬ್ಬರು ಸತ್ತುಬಿದ್ದಿರುತ್ತಾರೆ.

ಜಿಂಕೆಗಳೆಲ್ಲಾ ಭೀತಿಯಿಂದ ಹತ್ತಿರ ಹತ್ತಿರ ಸರಿದುನಿಂತವು. ಮೊನ್ನೆ ಮೊನ್ನೆ ನಡೆದ ಘಟನೆಯನ್ನು, ಇದಕ್ಕೆ ಮುಂಚೆ ನಡೆದ ವಿಷಯಗಳೊಂದಿಗೆ ಸಮನ್ವಯ ಮಾಡಿ ನೋಡಿದುವು. ಭಯದಿಂದ ತತ್ತರಿಸುವಂತಾಯಿತು. ಆಕಸ್ಮಾತ್ತಾಗಿ ಆ ಮನುಷ್ಯ ಒಳ್ಳೆಯವನಾಗಿಬಿಟ್ಟು, ಯಾರನ್ನೂ ಕೊಲ್ಲದೆ ಇದ್ದಲ್ಲಿ ಎಷ್ಟು ಚೆನ್ನಾಗಿರುತ್ತದೆ ಎಂದುಕೊಂಡವು.

"ದೂರದಿಂದ ಕೊಲ್ಲಲು ಹೇಗೆ ಸಾಧ್ಯವಾಗುತ್ತೆ ?" ಎಂದ ಕಾರೋ.

"ನಿಮ್ಮ ಜಾಣ ಕಾಗಣ್ಣ ಇದಾನಲ್ಲಾ, ಕೇಳು" ಎಂದಳು ನವೀನಾ—ಅಣುಕಮಾಡುತ್ತಾ.

"ಹಾಂ, ಅದನ್ನ ಕೇಳಿದೀನಿ ನಾನು, ಆದರೆ ಆ ವಿಷಯ ಅದಕ್ಕೂ ತಿಳಿಯದಂತೆ."

"ಮನುಷ್ಯ ಕಾಗೆಯನ್ನು ಸಹ ಕ್ಷಣದಲ್ಲಿ ಕೊಲ್ಲಬಲ್ಲ" ಎಂದ ರೋನೋ

"ಹಾರುತ್ತಿರುವ ಪಕ್ಷಿಯನ್ನು ಸಹ" ಎಂದಳು. ಪೀಣೆ ಚಿಕ್ಕಮ್ಮ.

"ತನ್ನ ಕೈಯನ್ನು ಬೀಸಿ ಒಗೆಯುತ್ತಾನೆಂದು ಹೇಳುತ್ತಿದ್ದಳು. ನಮ್ಮ ಅಜ್ಜಿ" ಎಂದಳು ಬೇಂಬಿಯ ತಾಯಿ.

"ಸರಿ, ಹಾಗೇ ಅಂದುಕೊಳ್ಳೋಣ. ಮತ್ತೆ ಆ ಗುಡುಗಿನಂತಹ ಶಬ್ದ ಎಲ್ಲಿಂದ ಬರುತ್ತೆ ಹೇಳು ನೋಡೋಣ" ಸವಾಲೆಸೆದಳು ನವೀನಾ.

"ಕೈ ಬೀಸಿದಾಗ ಬೆಂಕಿ ಹುಟ್ಟುತ್ತದೆ, ಸದ್ದಾಗುತ್ತದೆ. ಮನುಷ್ಯ ಅಂದರೇನೇ ಬೆಂಕಿ" ಎಂದಳು ಬೇಂಬಿಯ ಅಮ್ಮ.

ಮಧ್ಯದಲ್ಲಿಯೇ ರೊನೋ ಹೇಳಿದ.

"ಮನುಷ್ಯನ ತುಂಬಾ ಬೆಂಕಿ ತುಂಬಿದೆ ಎನ್ನುವ ವಿಷಯದಲ್ಲಿ ಸಂದೇಹವೇ ಇಲ್ಲ. ಆದರೆ ಅವನ ಕೈಯನ್ನು ಕುರಿತ ವಿಷಯದಲ್ಲಿ ಮಾತ್ರ ನೀವೆಲ್ಲಾ ತಪ್ಪು ತಿಳಿಯುತ್ತಿದೀರಿ. ಇಂತಹ ಗಾಯ ಕೈಯಿಂದ ಹೇಗಾಗುತ್ತದೆ ? ಅದು ಹಲ್ಲು, ಹಲ್ಲನ್ನು ಎಸೆಯುತ್ತಾನೆ. ಕೆಲವು ಜಂತುಗಳು ಕಚ್ಚಿದರೆ ಸಾವು ಬರುತ್ತೆ ಅಂತ ನಿಮಗೆ ಗೊತ್ತಿಲ್ಲವೇ ? ಅದು ಹಲ್ಲು, ಸಂದೇಹವೇ ಇಲ್ಲ."

ಕಾರೋ ದೀರ್ಘವಾಗಿ ನಿಟ್ಟುಸಿರುಬಿಟ್ಟ.

ಮರೀನಾ ಹೀಗೆ ಹೇಳಿದಳು,

"ಎಂದೋ ಒಂದು ದಿನ ಮನುಷ್ಯ ಬದಲಾಯಿಸುತ್ತಾನೆ ಅಂತಾರೆ. ನಮ್ಮ ಹಾಗೇ ಅವನೂ ಒಳ್ಳೆಯವನಾಗುತ್ತಾನೆ. ನಮ್ಮೊಡನೆ ಆಟವಾಡುತ್ತಾನೆ. ಕಾಡಿನಲ್ಲಿ ನಾವೆಲ್ಲಾ ಎಷ್ಟೋ ಸಂತೋಷದಿಂದ ಇರಬಹುದು. ಹೆದರಿಕೆಯಿಲ್ಲದೆ ಪ್ರಶಾಂತ ಜೀವನ ನಡೆಸಬಹುದು."

"ಸರಿ, ಸರಿ, ಆ ಮನುಷ್ಯ ನಮ್ಮ ಜತೆ ಆಟ ಆಡಬೇಕಾಗಿಲ್ಲ. ಸದ್ಯ ತನ್ನ ಕೆಲಸ ಮಾಡಿಕೊಂಡು, ನಮ್ಮ ತಂಟೆಗೆ ಬಾರದಿದ್ದರೆ ಅಷ್ಟೆ ಸಾಕು" ಎಂದಳು ನವೀನಾ.

"ಅದೇನೋ ಸರಿಯಾದ ಮಾತಲ್ಲ ಬಿಡು" ಎಂದಳು ಏಣಿ.

"ಯಾಕೆ. ಯಾಕೆ ಸರಿಯಾದ್ದಲ್ಲ ಅಂತಿ ? ಮನುಷ್ಯನನ್ನು ನಾನು ಸತ್ತರೂ ನಂಬೊಲ್ಲ. ನನಗ ಬುದ್ಧಿ ಬಂದಾಗಿನಿಂದ ನೋಡ್ತಿದೀನಿ. ಅವನು ನಮ್ಮ ಅಣ್ಣ–ತಮ್ಮಂದಿರನ್ನ. ಅಕ್ಕ–ತಂಗಿಯರನ್ನ. ತಂದೆ–ತಾಯಿಯರನ್ನ ನಮ್ಮ ಮಕ್ಕಳನ್ನ ಎಷ್ಟು ಜನರನ್ನು ನುಂಗಿ ನೀರು ಕುಡಿದಿದಾನೇಂತ ಗೊತ್ತೇನು ? ಅವನ ಕಣ್ಣಿಗೆ ಬಿದ್ದರೆ ಸಾಕು. ಸಾವು ಬಂತೂಂತಲೇ ಲೆಕ್ಕ. ನಾವು ಅವನಿಗೇನು ಅಪಾಕಾರ ಮಾಡಿದೀವೀಂತ ಹಾಗೆ ಮಾಡ್ತಿದ್ದಾನೆ ? ಅಂತಹವನ ಜತೆಯಲ್ಲಿ ಸ್ನೇಹವೇ ? ಛಿ!" ಎಂದಳು ನವೀನಾ ಆವೇಶದಿಂದ ಏದುಸಿರುಬಿಡುತ್ತಾ.

"ಹಾಗಲ್ಲಾ ಚಿಕ್ಕಮ್ಮಾ. ಯಾವತ್ತಿಗಾದರೂ ಆ ದ್ವೇಷ ತಣ್ಣಗಾಗದೆ ಇರುತ್ತೆಯೋ ಅಂತ" ಎಂದಳು ಮರೀನಾ.

ನವೀನಳಿಗೆ ಆ ಮಾತು ಹಿಡಿಸಲಿಲ್ಲ. ಆದರೆ ವಾದಿಸುವ ಇಚ್ಛೆಯಿರಲಿಲ್ಲ. ಅವಳಿಗೆ. ಅಲ್ಲಿಂದೆದ್ದು "ನನಗೆ ಹಸಿವಾಗ್ತಿದೆ. ಈ ಮಾತು ಸದಾ ಇರೋದೆ. ಹೋಗಿ ಸ್ವಲ್ಪ ತಿಂಡೀನಾರ ತಿನ್ತೀನಿ" ಎಂದು ಹೊರಟು ಹೋದಳು.

ಚಳಿಗಾಲ ಇನ್ನೂ ನಡೆಯುತ್ತಲೇ ಇತ್ತು. ಆದರೆ ಚಳಿಯ ತೀವ್ರತೆ ಕಡಿಮೆಯಾಗಿತ್ತು. ಮಂಜಿನ ಮುದ್ದೆಗಳು ಗಟ್ಟಿಯಾಗಿದ್ದವು. ಚೆನ್ನಾಗಿ ಬಿಸಿಲು ಬಂದಾಗ ಮಂಜಿನ ಮೇಲು ಪದರಗಳು ಕರಗುತ್ತಿದ್ದುವು. ಕತ್ತಲಾದ ಮೇಲೆ ಗಡ್ಡೆ ಕಟ್ಟುತ್ತಿತ್ತು. ಅವುಗಳ ಮೇಲಿಂದ ನಡೆದಾಡುತ್ತಿದ್ದರೆ ಮಂಜಿನ ಗೆಡ್ಡೆಗಳು ಫಳಫಳನೇ ಒಡೆದು ಸದ್ದು ಮಾಡುತ್ತಿದ್ದುವು. ಜಾರಿಕೆಯಾಗಿತ್ತು ಕೂಡಾ. ಅವುಗಳ ಮೇಲೆ ನಡೆದಾಡುತ್ತಿದ್ದರೆ ಕಾಲಿನ ಹಿಮ್ಮಡಿಗಳಿಗೆ ನೋವಾಗುತ್ತಿತ್ತು.

ಗಾಳಿ ಸ್ವಚ್ಛವಾಗಿ, ನಿಧಾನವಾಗಿ ತಂಪಾಗಿ ಬೀಸುತ್ತಿತ್ತು. ಪ್ರಕೃತಿಯಲ್ಲಿ ಆ ತೀಕ್ಷ್ಣತೆ ಕಡಿಮೆಯಾಗಿ ಸ್ವಾತಿಕತೆ ಕಾಣಸುತ್ತಿತ್ತು. ಆದರೆ ಈಗ ಅಡವಿಯಲ್ಲಿ ಹೊಸ ಕಷ್ಟಗಳು ಪ್ರಾರಂಭವಾಗಿದ್ದುವು. ಹೆಜ್ಜೆ ಹೆಜ್ಜೆಗೂ ಭಯಂಕರವಾದ ಸಂಘಟನೆಗಳು.

ಮೊಲ ಮಾಮಯ್ಯನ ಮೂರನೆಯ ಮಗ, ಪಾಪ, ಮೊದಲಿನಿಂದಲೂ ಸ್ವಲ್ಪ ಬಲಹೀನನಾಗಿದ್ದವನು, ಒಂದು ದಿನ ತನ್ನ ಪಾಡಿಗೆ ತಾನು ಕಾಲೆಳೆಯುತ್ತಾ ಹೋಗುತ್ತಿದ್ದ. ಇಷ್ಟರಲ್ಲಿ ಒಂದು ಕಾಡುಕಾಗೆ ದೆವ್ವದಂತೆ ಅವನ ಮೇಲೆರಗಿ, ತನ್ನ ಚೂಪಾದ ಕೊಕ್ಕಿನಿಂದ ಅವನನ್ನು ಚುಚ್ಚಲಾರಂಭಿಸಿತು. ನೋವಿನಿಂದ ಅವನು ಕೂಗಿಕೊಂಡಾಗ ಅಡವಿ ಪ್ರತಿಧ್ವನಿಸಿತು. ದೂರದಲ್ಲೆಲ್ಲೋ, ಕಾಯಿ, ಕಸರು ಆರಿಸಿಕೊಳ್ಳುತ್ತಿದ್ದ ಮೊಲಮಾಮಯ್ಯನಿಗೆ ಹುಚ್ಚು ಹಿಡಿದಂತಾಗಿತ್ತು.

ಮತ್ತೊಂದು ದಿನ ಮುಂಗುಸಿಯೊಂದು ಎಲ್ಲಿಯೋ ನೋಡುತ್ತಾ ಕುಳಿತಿದ್ದ ಅಳಿಲಿನ ಮೇಲೆ ಬಿದ್ದು ಗಾಯಮಾಡಿತು. ಅಳಿಲು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ, ಕೊಸರಾಡಿ. ಅದರಿಂದ ತಪ್ಪಿಸಿಕೊಂಡು ಮರದ ಮೇಲಕ್ಕೆ ಹತ್ತಿ ಕುಳಿತು ಗಾಯವಾಗಿ ರಕ್ತ ಸೋರುತ್ತಿದ್ದ ಬೆನ್ನನ್ನು ತಡವಿಕೊಳ್ಳುತ್ತಿದ್ದಂತೆ ಹಿಂದಿನಿಂದ ಹದ್ದು ಬಂದು ಕೊಕ್ಕಿನಿಂದ ಅದನ್ನು ಚುಚ್ಚಿ ಕೆಳಕ್ಕೆ ಬೀಳಿಸಿತು. ಪಕ್ಷಿಗಳು ಅದರ ಮೇಲೆ ಬಿದ್ದು ಅದನ್ನು ಚೂರು ಚೂರು ಮಾಡಿದವು.

ಇದಾದ ಕೆಲವೇ ದಿನಗಳಲ್ಲಿ ನರಿಯೊಂದು ಸದ್ದೂ ಸಪ್ಪಳವಿಲ್ಲದೆ ಬಂದು ನವಿಲಿನ ಕತ್ತನ್ನು ಕಚ್ಚಿ ಕೊಂದುಬಿಟ್ಟಿತು. ಆ ನವಿಲು ಅಡವಿಯಲ್ಲಿನ ನವಿಲುಗಳಲ್ಲೆಲ್ಲಾ ಸುಂದರವಾದ್ದೆಂದು ಹೆಸರು ಪಡೆದಿತ್ತು. ಅಂತಹ ನವಿಲು ಮೃತಪಟ್ಟಿತೆಂದು ಕೇಳಿ, ಅರಣ್ಯದ ಜಂತುಗಳೆಲ್ಲಾ ಕಣ್ಣೀರಿಟ್ಟವು. ಆ ದುರಂತವನ್ನು ಕುರಿತು ಯಾರಿಗೂ ತಿಳಿದಂತೆ ಅವರು ಮಾತನಾಡಿಕೊಂಡರು. ಆ ನವಿಲು ವಾಸಿಸುತ್ತಿದ್ದ ಪೊದೆಯಮೇಲೆಲ್ಲಾ ಮಂಜು ದಟ್ಟವಾಗಿ ಹರಡಿತ್ತಂತೆ. ಇಲ್ಲಿದ್ದರೆ ತಾನು ಯಾರಿಗೂ ಕಾಣುವುದಿಲ್ಲ, ಪರವಾಗಿಲ್ಲ, ಈ ಚಳಿಗಾಲವನ್ನು ಹೀಗೇ ಕಳೆದುಬಿಡಬಹುದು, ಎಂದು ನವಿಲು ನಿಶ್ಚಿಂತೆಯಾಗಿ ಮಲಗಿತ್ತಂತೆ. ಆದರೆ ಸಾವು ಸದ್ದುಮಾಡದೆ ಅದನ್ನು ಕಬಳಿಸಿತ್ತು. ಹಾಡು ಹಗಲಿನಲ್ಲಿ ಇಂತಹ ದುರಂತ ನಡೆದರಿಂದ ಪಕ್ಷಿಗಳೆಲ್ಲಾ ಭೀತಿಯಿಂದ ನಡುಗಿಹೋದುವು. ತಡೆಯಲಾರದ ಹಸಿವು ಅಲ್ಲಿನ ಜೀವಿಗಳಲ್ಲಿ, ಒರಟುತನ, ಕ್ರೌರ್ಯಗಳನ್ನು ಮೂಡಿಸಿತ್ತು ಹಸಿವು ಹೃದಯಗಳನ್ನು ಹಿಸುಕಿಹಾಕಿತ್ತು ಸಹೃದಯತೆಯನ್ನು ಇಲ್ಲವಾಗಿ

ಸಿತ್ತು. ಕರುಣೆಯನ್ನು ಕೊಂದುಬಿಟ್ಟಿತ್ತು. ಕಟ್ಟು ಪಾಡುಗಳನ್ನು ಅತಿ ಕ್ರಮಿಸಿತ್ತು.

"ಒಳ್ಳೆಯ ದಿನಗಳನ್ನು ಮತ್ತೆ ಯಾವಾಗ ಕಾಣುತ್ತೇವೆಯೋ" ಎಂದಳು ಬೇಂಬಿಯ ಅಮ್ಮ ದಿಗಿಲಿನಿಂದ.

ಏಣಿ ಚಿಕ್ಕಮ್ಮ ನಿಟ್ಟುಸಿರುಬಿಡುತ್ತಾ, "ನನಗೂ ಹಾಗೆಯೇ ಅನ್ನಿಸುತ್ತಾ ಇದೆ" ಎಂದಳು.

"ಹಿಂದೆ ಎಷ್ಟು ಚೆನ್ನಾಗಿತ್ತು?" ಎಂದು ಹಿಂದಿನ ಉಲ್ಲಾಸದ ದಿನಗಳನ್ನು ನೆನೆಸಿಕೊಂಡಳು ಮರೀನಾ.

ಇಷ್ಟರಲ್ಲಿ ನವೀನ ಚಿಕ್ಕಮ್ಮ ಗೋಬೋನನ್ನು ನೋಡಿ, ಏಣಿಯೊಂದಿಗೆ "ಇದೇನಮ್ಮಾ. ನಿನ್ನ ಮಗ ಇಷ್ಟು ಬಲಹೀನನಾಗಿದ್ದಾನೆ, ಯಾಕೆ? ಆ ನಡಿಗೆ ನೋಡು, ಸ್ವಲ್ಪವೂ ದೃಢತ್ವ ಅನ್ನೋದೇ ಇಲ್ಲ. ನಡುಗುತ್ತಿದ್ದಾನೆ. ಏಕೆ ಹೀಗೆ?" ಎಂದು ಕೇಳಿದಳು.

"ಹೌದು ನವೀನಾ, ಅವನು ಇರೋದೇಹಾಗೆ, ಏನು ಮಾಡಲಿ?" ಎಂದಳು ಏಣಿ ಚಿಂತೆಯಿಂದ.

ಗೋಬೋ ಸದಾ ಯಾವುದಾದರೊಂದು ಅನಾರೋಗ್ಯದಿಂದ ಬಳಲುತ್ತಲೇ ಇದ್ದ. ಬೆಳವಣಿಗೆಯಲ್ಲೂ ಬೇಂಬಿ, ಫಲೀನಾರಿಗಿಂತ ಹಿಂದಿದ್ದ. ಈ ಚಳಿಗಾಲ ಬಂದಮೇಲಂತೂ ಅವನ ಆರೋಗ್ಯ ಮತ್ತಷ್ಟು ಕೆಟ್ಟಿತ್ತು. ಕಾಲಿನ ಗೊರಸುಗಳಿಂದ ಮಂಜನ್ನು ಕೆರೆದುಹಾಕಿ, ಹುಲ್ಲಿನ ಎಸಳುಗಳನ್ನು ಆರಿಸಿ ತಿನ್ನಲೂ ಅವನ ಕೈಲಾಗುತ್ತಿರಲಿಲ್ಲ. ಹೊಟ್ಟೆ ತುಂಬದಿದ್ದಲ್ಲಿ ಶಕ್ತಿ ಹೇಗಿದ್ದೀತು? ಆದ್ದರಿಂದಲೇ ಸುಸ್ತಾಗಿ ಎಲ್ಲೆಂದರಲ್ಲಿ ಕೊಡುತ್ತಿದ್ದ.

ನವೀನ ಚಿಕ್ಕಮ್ಮ ವಾತ್ಸಲ್ಯದಿಂದ ಅವನನ್ನು ಹತ್ತಿರಕ್ಕೆ ಕರೆದಳು,

"ನೋಡು ಮಗೂ, ಯುವರಾಜರು ಹಾಗೆ ಜೋಲುಮೋರೆ ಹಾಕಿಕೊಂಡಿರಬಾರದು. ಎಲ್ಲರೂ ನಗುತ್ತಾರೆ. ಉತ್ಸಾಹದಿಂದ, ನಗುತ್ತಾ,

ಕಲೆಯುತ್ತಾ ಓಡಾಡಿಕೊಂಡಿರಬೇಕು, ಏನೂ ?"

ಅಷ್ಟರಲ್ಲಿ ಆಕಸ್ಮಾತ್ತಾಗಿ ಬೆಚ್ಚಿಬಿದ್ದ ರೋನೋ ಗಾಬರಿಯಿಂದ ಕೂಗಿಕೊಂಡ, "ಏನದು ? ಏನದು ? ಏನೋ ನಡೆಯುತ್ತಿದೆ."

ಎಲ್ಲರೂ ಭೀತಿಯಿಂದ ಎದ್ದು ನಿಂತರು.

"ಏನು ? ಏನದು ? ಏನಾಯಿತು ? ಎಲ್ಲಿ ?" ನಾಲ್ಕೂ ಕಂಠಗಳು ಒಂದೇಸಲ ಕೇಳಿದುವು.

"ಏನೋ ಗೊತ್ತಿಲ್ಲ. ನನಗ್ಯಾಕೋ ಗಾಬರಿಯಾಗ್ತಿದೆ. ಎದೆ ಬಡಿದುಕೋತಾ ಇದೆ. ಏನೋ ನಡೆಯಬಾರದ್ದು ನಡೆಯುತ್ತೆ ಅನ್ನಿಸ್ತಾ ಇದೆ" ಎಂದ ರೋನೋ.

ಕಾರೋ ಮೋರೆಯನ್ನು ಮೇಲೆತ್ತಿ ಗಾಳಿ ಎಳೆದು ಕೊಂಡು, ವಾಸನೆ ನೋಡಿ, "ಏನೂ ಇಲ್ಲವಲ್ಲಾ, ಏನೂ ವಾಸನೆ ಬರುತ್ತಿಲ್ಲ" ಎಂದ.

"ನಿಜ, ವಾಸನೆಯೇನೂ ಇಲ್ಲ. ಆದರೆ ನನ್ನ ಮನಸ್ಸಿಗೆ ಅನ್ನಿಸ್ತಾ ಇದೆ. ಏನೋ ಅಪಾಯ ..." ರೋನೋನ ಗಾಬರಿ ಸ್ವಲ್ಪವೂ ಕಡಿಮೆಯಾಗಲಿಲ್ಲ,

"ಅಗೋ, ಕಾಗೆಗಳು ಕೂಗುತ್ತಿವೆ" ಎಂದಳು ಮರೀನಾ.

"ಹಾಂ...ಹೌದು...." ಎಂದಳು ಫಲೀನಾ.

ಎಲ್ಲರಿಗೂ ಕಾಗೆಗಳ ಕಿರಿಚಾಟ ಕೇಳಿಸಿತ್ತು. "ಅಗೋ, ಕಾಗೆಗಳು ಹಾರುತ್ತಿವೆ," ಎಂದ ಕಾರೋ.

ಎಲ್ಲರೂ ತಲೆಯೆತ್ತಿ ನೋಡಿದರು. ಕಾಗೆಗಳ ಗುಂಪು ಮರಗಳ ಮೇಲಿನಿಂದ ಹಾರಿ ಹೋಗುತ್ತಿರುವುದನ್ನು ನೋಡಿದರು, ಅವು ಅರಣ್ಯದ ಒಂದು ಕೊನೆಯಿಂದ ಹಾರಿಬರುತ್ತಿದ್ದುವು. ಮಾಮೂಲಾಗಿ ಅಪಾಯ ಬರುತ್ತಿದ್ದುದ್ದೂ ಆ ದಿಕ್ಕಿನಿಂದಲೇ !

ಕಾಗೆಗಳು ಹಾರುತ್ತಾ ಕೋಪದಿಂದ ಕಿರಿಚಾಡುವುದನ್ನು ಜಂತುಗಳೆಲ್ಲಾ ಕೇಳುತ್ತಿದ್ದುವು.

"ನನಗನ್ನಿಸಿದ್ದು ನಿಜಾನೆ, ಏನೋ ಅಪಾಯ ಕಾದಿದೆ. ಎಂದ ರೋನೊ.

ಬೇಂಬಿಯ ಅಮ್ಮ ಹೆದರುತ್ತಲೇ, ಕೇಳಿದಳು. "ಈಗೇನು ಮಾಡೋಣ ?"

"ಓಡಿ ಹೋಗೋಣ" ಎಂದಳು ಏಣಿ.

"ಸ್ವಲ್ಪ ಹೊತ್ತು ನೋಡೋಣ ಇರಿ" ಎಂದ ರೋನೋ.

ಈ ಮಕ್ಕಳು ಬೇರೆ. ಇವರನ್ನ ಕಟ್ಟಿಕೊಂಡು ಓಡೋದು ಅಂದರೆ ಸಾಮಾನ್ಯವೇ ? ಮೊದಲೇ ಗೋಬೋ ಸರಿಯಾಗಿ ಓಡಲಾರ."

"ಹಾಗಾದರೆ ಸರಿ, ಹೊರಡಿ. ನನಗೇನೋ ಈಗಾಗಲೇ ಓಡಾಡುವುದು ಬೇಡ ಅನ್ನಿಸುತ್ತೆ. ಆದರೆ ನಾನು ಬೇಡಾಂತಿದೀನಿ ಅಂತ ತಿಳ್ಕೋಬೇಡಿ. ಹೊರಡಬೇಕು ಅನ್ನಿಸಿದವರು ತಕ್ಷಣ ಹೊರಟುಬಿಡಿ" ಎಂದ ರೋನೋ.

ಏಣಿ ಚಿಕ್ಕಮ್ಮ ಆತುರದಿಂದ ಮುಂದಕ್ಕೆ. ಹೆಜ್ಜೆಯಿಡುತ್ತಾ ಗಾಬರಿಯಿಂದ ಮಕ್ಕಳನ್ನು ಕೂಗಿದಳು. "ಗೋಬೋ, ಫಲೀನಾ, ಬನ್ರೀ, ಹೋಗೋಣ."

ಏಣಿ ಚಿಕ್ಕಮ್ಮ ಮಕ್ಕಳೊಂದಿಗೆ ಹೊರಟು ಹೋದಳು.

ಮಿಕ್ಕವರೆಲ್ಲಾ ಅಲ್ಲಿಯೇ ನಿಂತರು.

"ಏನಾಗುತ್ತದೆಯೋ, ಏನೋ" ಎಂದಳು ನವೀನಾ.

ಅಷ್ಟರಲ್ಲಿ ಆ ದಿಕ್ಕಿನಿಂದಲೇ 'ಕ್ರಿಂ-ಕ್ರಿಂ-ಕ್ರಿಂ-ಕ್ರಿಂ' ಎಂದು ಮೈನಾಗಳು ಕೂಗುತ್ತಿರುವುದು ಕೇಳಿಸಿತು.

"ಹುಷಾರಾಗಿರಿ ಅಪಾಯ ಕಾದಿದೆ ಹುಷಾರ್" ಕೆಲವು ಕ್ಷಣಗಳ ಲ್ಲಿಯೇ ಮೈನಾಗಳ ಗುಂಪು ಹಾರಿ ಹೋಗುತ್ತಾ ಕಾಣಿಸಿತು.

ಗೀಜಗ 'ಚಿಚ್' ಎಂದು ಅಪಾಯದ ಸೂಚನೆ ಕೊಟ್ಟಿ.

ಜಿಂಕೆಗಳಿಗೆ ಏನು ಮಾಡಬೇಕೆಂದೇ ತೋಚಲಿಲ್ಲ. ಒಂದನ್ನೊಂದು ಕೂಗುತ್ತಾ ಒತ್ತಿನಿಂತವು.

ದೂರದಲ್ಲಿ ಬರುತ್ತಿರುವುದು ಮನುಷ್ಯನೆಂಬುದರಲ್ಲಿ ಸಂದೇಹವೇ ಇರ ಲಿಲ್ಲ. ಭಯಂಕರವಾದ ಗಬ್ಬು ವಾಸನೆ ಗಾಳಿಯಲ್ಲಿ ತೇಲಿ ಬಂತು. ಆ ವಾಸನೆ ಕಣ್ಣು ಕತ್ತಲಿಟ್ಟಿತು. ಭೀತಿಯಿಂದ ಎದೆ ನಡುಗಿತು. ಇದ್ದಕ್ಕಿದ್ದಂ ತೆಯೇ ವಾತಾವರಣವೆಲ್ಲಾ ಗಡಿಬಿಡಿಯಿಂದ ತುಂಬಿ ಹೋಯಿತು.

ಗಿಡಗಳ ಮೇಲಿನಿಂದ ನೂರಾರು ಗಿಣಿಗಳು ಅತುರಾತುರದಿಂದ ಕೂಗಿ ಕೊಂಡವು.

"ಓಡಿ, ಓಡಿ, ಮುಂದಕ್ಕೆ ಓಡಿ."

ಮರುಕಟುಕ ಹಕ್ಕಿ ಕೂಗಿಕೊಂಡಿತು. ಗಿಡಗಳ ಮರೆಯಿಂದ ನವಿಲು ಗಳೂ, ಕಾಡುಕೋಳಿಗಳೂ ಗಾಬರಿಯಿಂದ ಓಡೋಡಿ ಬಂದವು. ಅವುಗಳ ಮಧ್ಯದಲ್ಲಿಯೇ ಬೂದಿಬಣ್ಣದ ಕುಚ್ಚು ಬಾಲವೂ ಇತ್ತು. ಅದು ನರಿಯಣ್ಣ. ಈಗ ನವಿಲುಗಳಿಗೆ ನರಿಯ ಭಯವಿಲ್ಲ. ಗಾಢವಾಗಿ ಘಾಟಾಗಿ ಅಮಲು ನೆತ್ತಿಗೇರುವಂತೆ ನರವಾಸನೆ ಗಿಡಗಳ ಸಂದಿಗಳಿಂದ ಬೀಸಿ ಬರುತ್ತಿತ್ತು. ಜಂತುಗಳಿಗೂ ಪಶುಗಳಿಲ್ಲೂ ಎಲ್ಲಕ್ಕೂ ಒಂದೇ ದೃಷ್ಟಿ, ಒಂದೇ ಗುರಿ.

ಹೇಗಾದರೂ ತಮ್ಮ ಪ್ರಾಣಗಳನ್ನು ಕಾಪಾಡಿಕೊಳ್ಳಬೇಕು.

ಆ ವಾಸನೆ, ಗಬ್ಬುವಾಸನೆ ಎಂದೂ ಇಲ್ಲದಷ್ಟು ತೀವ್ರವಾಗಿತ್ತು. ಜಿಂಕೆಗಳು ನಿಂತಿದ್ದ 'ಮರೆಯ ಪ್ರದೇಶ'ದ ನಾಲ್ಕೂ ಕಡೆಯಿಂದ ಆ ವಾಸನೆ ಬರುತ್ತಿತ್ತು. ಅವರಿಗೀಗ ಅರ್ಥವಾಗಿ ಹೋಯಿತು. ಬಂದಿದ್ದು ಒಬ್ಬನಲ್ಲ,

ಅಂತಹವರು ಬಹಳ ಜನ ಇದಾರೇಂತ.

ಅಳಿಲುಗಳು, ಮರಗಳ ಪೊಟರೆಗಳಲ್ಲಿ ಸೇರಿ ಹೆದರಿಕೆಯಿಂದ ಚೀರಿಡುತ್ತಿದ್ದುವು. ಕೊಂಬೆಗಳ ಮೇಲೆ ಇಲ್ಲಿಂದಲ್ಲಿಗೆ ಹಾರಾಡುತ್ತಿದ್ದ ಗುಬ್ಬಚ್ಚಿಗಳ ಕಿಚಕಿಚ ತೀವ್ರವಾಗಿತ್ತು. ಪಾರಿವಾಳಗಳೂ, ಮೈನಾಗಳೂ ಒಂದೇ ಸವನೆ ಅರಚುತ್ತಿದ್ದುವು. ಅವುಗಳ ಗಲಾಟೆ, ಆ ಸದ್ದು ಅಲ್ಲಿದ್ದ ಆ ಜಿಂಕೆಗಳಿಗೆ ಅಂತಹ ಪ್ರಮಾದ ಪರಿಸ್ಥಿತಿಯಲ್ಲೂ ಸಿಟ್ಟು ತರಿಸುತ್ತಿತ್ತು.

ಇಂತಹ ಅಲ್ಪ ಜೀವಿಗಳಿಗೆ ಸಧ್ಯಕ್ಕೆ ಹೆದರಿಕೆಯೇನೂ ಇಲ್ಲವೆಂಬುದು ಅವರ ಅಭಿಪ್ರಾಯ. ಆದರೆ ಆ ಜೀವಿಗಳ ಪರಿಸ್ಥಿತಿಯೂ ಅರ್ಥವಾಗುತ್ತಲಿದೆ. ಮನುಷ್ಯ ಎಂದರೆ ಅವಕ್ಕೂ, ಭೀತಿ, ಕಳವಳ ತಪ್ಪಿದ್ದಲ್ಲ.

ಮೊಲಮಾವಯ್ಯ ಎದೆ ಒತ್ತಿಕೊಳ್ಳುತ್ತಾ ಓಡೋಡಿ ಬಂದು ಕ್ಷಣನಿಂತು ಮತ್ತೆ ಓಡಲು ಅನುವಾದ.

ಕಾರೋ ಅವನನ್ನು ತಡೆದ.

“ಏನಯ್ಯ ಏನಾಗುತ್ತಿದೆ ಅಲ್ಲಿ ?” ಎಂದು ಕೇಳಿದ.

ಮೊಲಮಾವನ ಕಣ್ಣುಗುಡ್ಡೆ ಗಿರ್ರನೆ ತಿರುಗಿತು. ಗಾಬರಿಯಿಂದ ಬಾಯಲ್ಲಿ ಮಾತೇ ಹೊರಡಲಿಲ್ಲ.

ರೋನೋ ವಿಷಯವೆಲ್ಲಾ ಸ್ಪಷ್ಟವಾಗಿ ಅರ್ಥವಾದವನಂತೆ” ಇನ್ನು ಕೇಳುವುದಕ್ಕೇನಿದೆ, ಗೊತ್ತಾಗ್ತಾನೇ ಇದೆಯಲ್ಲಾ” ಎಂದ.

ಮೊಲಮಾವ ಮೂತಿ ಮೇಲೆತ್ತಿ ಗಾಳಿ ಎಳೆದುಕೊಂಡ. ಸ್ವಲ್ಪ ಆಯಾಸ ಕಡಿಮೆಯಾದಂತನಿಸಿತು. ಆಗ ಹೇಳಿದ.

“ಮನುಷ್ಯ ನಮ್ಮನ್ನು ಸುತ್ತುವರಿದಿದ್ದಾನೆ. ಸುತ್ತಲೂ ಮನುಷ್ಯರೇ! ಇಲ್ಲಿಂದ ಹೊರಗೆ ಹೋಗುವಂತೆಯೇ ಇಲ್ಲ.”

ಸರಿಯಾಗಿ ಇದೇ ಸಮಯದಲ್ಲಿ ಮನುಷ್ಯನ ಕಂಠ ಕೇಳಿಸಿತು. ಹತ್ತು, ಇಪ್ಪತ್ತು ಮೂವತ್ತು ಸಲ ಗಟ್ಟಿಯಾಗಿ ಕೂಗಿದ ಮನುಷ್ಯ.

"ಹೋ ಹೋ ಹೋ ಹೋ ! ಹೋ ಹೋ ಹೋ ಹೋ."

ಆ ಕಂಠ ಬಿರುಗಾಳಿಯಂತೆ ಉಕ್ಕಿತು. ಮೇಘದಂತೆ ಗರ್ಜಿಸಿತು. ಅವನು ಮರದ ಕಾಂಡದ ಮೇಲೆ ಯಾವುದರಿಂದಲೋ ಹೊಡೆದ. ಅದು ಗುಡುಗಿನಂತೆ ಸದ್ದು ಮಾಡಿತು. ಗಿಡಗಳು ನೋವಿನಿಂದ ನರಳಿದುವು. ಅವನು ನಡೆದು ಬರುತ್ತಿದ್ದಂತೆ ಗಿಡಗಳ ಟೊಂಗೆಗಳು ಪಟಪಟನೆ ಸದ್ದು ಮಾಡಿದುವು.

ಅವನು ಗಿಡಗಳ ಮರೆಯಲ್ಲಿದ್ದ ಪ್ರದೇಶದ ಕಡೆಗೇ ನಡೆದು ಬರುತ್ತಿದ್ದ.

ಅಷ್ಟರಲ್ಲಿ ರೆಕ್ಕೆಗಳ ಟಪಟಪ ಸದ್ದು ಕೇಳಿಸಿತು. ಒಂದು ನವಿಲು ಗಾಳಿಯಲ್ಲಿ ಮೇಲಕ್ಕೆದ್ದಿತು. ಒಂದು ಕ್ಷಣ ಕಳೆಯಿತು. ಹತ್ತುವಾರು ಮೇಲಕ್ಕೆ ಹಾರಿದ ಕೂಡಲೇ ಸಿಡಿಲಿನಂತ ಶಬ್ದ ಕೇಳಿಸಿತು ಮತ್ತೆ ನಿಶ್ಶಬ್ದ, ಭೂಮಿಯ ಮೇಲೆ ಡಬ್ ಎಂದು ಭಾರವಾದ ವಸ್ತು ಬಿದ್ದ ಶಬ್ದ ! ಬೇಂಬಿಯ ತಾಯಿ ನಿಂತಲ್ಲೆ ಚಡಪಡಿಸಿದಳು.

"ನವಿಲು ಸತ್ತು ಹೋಯಿತು ..."

"ಇದು ಮೊದಲ ಬಲಿ." ಎಂದ ರೋನೋ.

"ಈ ಸಾರಿ ನಮ್ಮಲ್ಲಿ ಬಹಳ ಜನ ಸಾಯುತ್ತೇವೆ. ನಾನೂ ಸಾಯುತ್ತೇನೋ ಏನೋ" ಎಂದಳು ಮರೀನಾ–ಭೀತಿಯಿಂದ.

ಅವಳ ಮಾತನ್ನು ಯಾರೂ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಎಲ್ಲರೂ ಭಯ ಭೀತರಾಗಿದ್ದರು.

ಏನು ನಡೆಯುತ್ತಿದೆಯೋ ತಿಳಿದುಕೊಳ್ಳಬೇಕೆಂದುಕೊಂಡ ಬೇಂಬಿ.

ಕ್ಷಣ ಕ್ಷಣಕ್ಕೂ ಸದ್ದು ಜೋರಾಗುತ್ತಿತ್ತು. ಏನೋ ಸಿಡಿದ ಸದ್ದು. ಅರಚಾಟ, ಕಿರುಚಾಟ, ಎಲ್ಲಾ ಕಡೆಗಳಿಂದಲೂ ಕೇಳಿಸುತ್ತಿತ್ತು. ಅಷ್ಟೊಂದು

ಶಬ್ದಗಳ ಮಧ್ಯೆ ಸಹ ಬೇಂಬಿಗೆ ತನ್ನ ಎದೆಯ ಬಡಿತ ಕೇಳಿಸುತ್ತಿತ್ತು. ಅವನ ಮನಸ್ಸು ಗಜಿಬಿಜಿಯಾಗಿತ್ತು.

"ನನ್ನ ಹತ್ತಿರಾನೇ ಇರು" ಎಂದಳು ಅಮ್ಮ. ಆಗಲೇ ಹತ್ತು ಸಲ ಆ ಮಾತುಗಳನ್ನು ಹೇಳಿದ್ದಳು ಅಮ್ಮ. ಗಟ್ಟಿಯಾಗಿ ಕೂಗಿದರೂ ಆ ಗಲಾಟೆಯಲ್ಲಿ ಪಿಸುಮಾತಿನಲ್ಲಿ ಹೇಳಿದಂತೆಯೇ ಇತ್ತು.

"ನನ್ನ ಹತ್ತಿರಾನೇ ಇರು."

ತಾಯಿಯ ಮಾತಿನಿಂದ ಬೇಂಬಿ ಧೈರ್ಯ ತಂದುಕೊಂಡು ಮತ್ತಷ್ಟು ಅವಳ ಹತ್ತಿರಕ್ಕೆ ಸರಿದ. ಆ ಕ್ಷಣದಲ್ಲಿ ಅವಳು ಆ ಮಾತುಗಳನ್ನು ಹೇಳದಿದ್ದಲ್ಲಿ ಗಾಬರಿಯಲ್ಲಿ ಬೇಂಬಿ ಇಷ್ಟುಹೊತ್ತಿಗೆ ಓಟ ಕೀಳುತ್ತಿದ್ದುದು ನಿಜ.

ಬೇಂಬಿ ಸುತ್ತಲೂ ನೋಡಿದ. ತುಟ್ಟತುದಿಯ ಕೊಂಬೆಯನ್ನೇರಿ ಅಳಿಲು ಮಿಕ್ಕವರಿಗೆ ಸಮಾಚಾರ ತಿಳಿಸುತ್ತಿತ್ತು. ಅಡವಿಯೊಳಕ್ಕೆ ಬಗ್ಗಿ ನೋಡುತ್ತಾ ನರಿ ತನಗೆ ತಿಳಿದ ವಿಷಯ ಎಲ್ಲರಿಗೂ ಹೇಳುತ್ತಿತ್ತು. ಅದಕ್ಕೀಗ ತನ್ನ ಹತ್ತಿರವೇ ಇದ್ದ ಪಕ್ಷಿಗಳಲ್ಲಿ ಒಂದನ್ನಾದರೂ ಹಿಡಿದುಕೊಳ್ಳಬೇಕೆಂಬ ಬಯಕೆ ಇರಲೇ ಇಲ್ಲ. ಮೋರೆಯನ್ನು ಮೇಲೆತ್ತಿ ಬಾರಿಬಾರಿಗೂ ವಾಸನೆ ನೋಡುತ್ತಿತ್ತು. ಹೊಸ ವಿಷಯ ಏನಾದರೂ ತಿಳಿಯುತ್ತದೆಯೇನೋ ಎಂದು ಚಡಪಡಿಸುತ್ತಿತ್ತು.

ದೊಡ್ಡ ನವಿಲೊಂದು ಹೆದರಿಕೆಯಿಂದ ದಿಕ್ಕು ತೋಚದೆ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದಿತು.

"ಮೇಲಕ್ಕೆ ಮಾತ್ರ ಹಾರಬೇಡಿ ! ಸತ್ತು ಹೋಗ್ತೀರಿ ! ಹಾರಬೇಡಿ, ಓಡಿ, ಓಡಿಹೋಗಿ" ಎಂದು ಕೀರಲು ಕಂಠದಲ್ಲಿ ಕೂಗುತ್ತಿತ್ತು.

ತಾನೇನನ್ನುತ್ತಿದ್ದೇನೆಂದೂ ಅದಕ್ಕೆ ತಿಳಿದಿರಲಾರದು.

ಈಗ ಮನುಷ್ಯನ ಕಂಠ ಇನ್ನೂ ಹತ್ತಿರದಲ್ಲಿಯೇ ಕೇಳಿಬಂತು.

"ಹೊ ಹೋ ಹೊ ಹೋ ! ಹೊ ಹೋ ಹೊ ಹೋ !"

"ಮೇಲಕ್ಕೆ ಮಾತ್ರ ಹಾರಬೇಡಿ—ಹಾರಬೇಡಿ" ಎನ್ನುತ್ತಲೇ ಮುದಿ ನವಿಲು ರೆಕ್ಕೆಗಳನ್ನು ಬಿಚ್ಚಿ ಜಿಗ್ಯೊಂದು ಮೇಲಕ್ಕೆ ಹಾರಿತು.

ಬೇಂಬಿ ನವಿಲು ಮೇಲೇಳುತ್ತಿದ್ದುದನ್ನು ನೋಡಿದ. ರೆಕ್ಕೆಗಳನ್ನು ಪಟಪಟನೆ ಬಡಿದುಕೊಳ್ಳುತ್ತಿದ್ದುದನ್ನು ಕೇಳಿದ. ಆದರೆ ಕಣ್ಣುಗಳಲ್ಲಿ ಭೀತಿ ಕಾಣುತ್ತಿತ್ತು. ಕತ್ತನ್ನು ಮುಂದಕ್ಕೆ ಚಾಚಿತ್ತು. ರೆಕ್ಕೆಗಳನ್ನು ವಿಶಾಲ ವಾಗಿ ತೆರೆದಿತ್ತು. ಅಷ್ಟರಲ್ಲಿ ಗುಡುಗಿದ ಸದ್ದು ! ಹಾರ ಹಾರುತ್ತಿದ್ದ ನವಿಲು ಸದ್ದೂ— ಸಪ್ಪಳವಿಲ್ಲದೆ, ಕತ್ತು ಜೋಲಿಸಿ ಕೆಳಗಿದ್ದ ನವಿಲುಗಳ ಗುಂಪಿನಲ್ಲಿ ಕಲ್ಲಿನಂತೆ ಬಂದುಬಿದ್ದಿತು. ಮತ್ತೆ ಮೇಲೇಳಲಿಲ್ಲ.

ಐದಾರು ಕಾಡುಕೋಳಿಗಳು ಒಂದೇಸಲ ಮೇಲಕ್ಕೆ ಹಾರಿದುವು.

"ಹಾರಬೇಡಿ—ಹಾರಬೇಡಿ" ಎಂದು ಮಿಕ್ಕ ಪಕ್ಷಿಗಳು ಕೂಗಿ ಹೇಳು ತ್ತಲೇ ಇದ್ದವು,

ಆದರೆ ಅವು ಆದಾವುದನ್ನೂ ಕೇಳಿಸಿಕೊಳ್ಳುವ ಪರಿಸ್ಥಿತಿಯಲ್ಲಿರಲಿಲ್ಲ. ಒಂದೇ ಸಲ ಐದಾರು ಗುಡುಗುಗಳ ಸಪ್ಪಳ. ಹಾರುತ್ತಿದ್ದ ಪಕ್ಷಿಗಳೆಲ್ಲಾ ನೆಲದ ಮೇಲೆ ಬಿದ್ದುವು.

"ನಡೆ ಹೋಗೋಣ" ಎಂದಳು ಬೇಂಬಿಯ ತಾಯಿ."

ಬೇಂಬಿ ತಿರುಗಿ ನೋಡಿದ. ರೋನೋ, ಕಾರೋ ಎಲ್ಲರೂ ಇದಕ್ಕೆ ಮುಂಚೆನೇ ಅಲ್ಲಿಂದ ಹೊರಟು ಹೋಗಿದ್ದರು. ನವೀನಾ ಚಿಕ್ಕಮ್ಮಾ ಹೊರಟು ಹೋಗಿದ್ದಳು. ಮರೀನಾ ಒಬ್ಬಳೇ ಇವರ ಜತೆಗಿದ್ದುದು, ಮೂರು ಜನ ಮುಂದು—ಮುಂದಕ್ಕೆ ನಡೆದರು. ಬೇಂಬಿ, ಅವನ ತಾಯಿ ಪಕ್ಕ ಪಕ್ಕದಲ್ಲಿ ಯೇ ನಡೆಯುತ್ತಿದ್ದರು. ಮರೀನಾ ಅವರ ಹಿಂದಿನಿಂದ ನಡೆಯುತ್ತಿದ್ದಳು.

ನಾಲ್ಕೂ ಮೂಲೆಗಳಿಂದ ಒಂದೇ ಸಮನೆ ಶಬ್ದಗಳು ಕೇಳಿಬರುತ್ತಿದ್ದವು. ಗುಡುಗಿನಂತಹ ಶಬ್ದಗಳು !

ಬೇಂಬಿಯ ತಾಯಿ ಗಾಬರಿ ಪಡಲಿಲ್ಲ. ಹೆದರಿಕೆಯೇನೋ ಇದ್ದೇ

ಇತ್ತು. ಆದರೆ ಏನು ಮಾಡಬೇಕೆಂಬುದನ್ನು ಮಗನಿಗೆ ಹೇಳುತ್ತಲೇ ಇದ್ದಳು. "ನನ್ನ ಮುದ್ದು ಕಂದ, ಒಂದು ಮಾತು ಹೇಳ್ತಿನಿ ಕೇಳು. ಅವ ಸರಪಟ್ಟು ಓಡಬೇಡ. ನನ್ನ ಪಕ್ಕದಲ್ಲಿಯೇ ಇರು. ಹೆದರಿಕೆಯೇನಿಲ್ಲ. ಹೇಗೋ ಹಾಗೆ ತಪ್ಪಿಸಿಕೊಳ್ಳುತ್ತೇವೆ."

ಸದ್ದು ಹೆಚ್ಚಾಗುತ್ತಿತ್ತು. ಒಂದೇ ಸವನೆ ಗುಡುಗಿದ ಸಪ್ಪಳ ಕಿವಿ ಗಡಚಿಕ್ಕುತ್ತಿತ್ತು.

"ಹುಷಾರು, ಈಗ ಓಡಾಡಬಾರದು ಕಾಲುದಾರಿ ಬಂದ ನಂತರವೇ ಓಡಬೇಕು. ಆಗಮಾತ್ರ. ಬಲವನ್ನೆಲ್ಲಾ ಉಪಯೋಗಿಸಿ ಓಡಬೇಕು. ಇನ್ನೊಂದು ವಿಷಯ, ನಿಧಾನಿಸಿ ಕೇಳು. ನನಗೇನಾದರೂ ಆದರೂ ಸರಿ, ನೀನು ನಿಲ್ಲಬೇಡ. ಹಿಂದುರಿಗಿ ನೋಡಬೇಡ. ನಾನು ಕೆಳಗೆ ಬಿದ್ದರೂ ಸರಿ, ನೆನಪಿಡು ನೀನು ಮಾಡಬೇಕಾದ್ದೆಲ್ಲಾ ಒಂದೇ ಕೆಲಸ, ಓಡಬೇಕು, ಅಷ್ಟೆ !"

ಅಮ್ಮ ಮೆಲ್ಲಮೆಲ್ಲನೆ ಮುಂದಕ್ಕೆ ಹೆಜ್ಜೆಯಿಡುತ್ತಿದ್ದಳು. ಅವರಿಗೆ ಸ್ವಲ್ಪ ಮುಂದಾಗಿ ನವಿಲುಗಳು. ಕಾಡುಕೋಳಿಗಳು, ಜೊತೆಗೆ ಮೊಲ ಮಾವಯ್ಯ, ಅವನ ಕುಚೇಲ ಸಂತಾನ ಹೊರಟಿತು.

ಯಾರು ಬಾಯಿಬಿಟ್ಟು ಮಾತನಾಡುತ್ತಿರಲ್ಲಿಲ್ಲ. ಒಂದೇ ಸವನೆ ಕೇಳಿ ಬರುತ್ತಿದ್ದ ಸದ್ದುಗಳಿಂದಾಗಿ, ಅವುಗಳಿಗೆ ಬುದ್ಧಿ ಭ್ರಮಣೆಯಾದಂತ್ತಿತ್ತು.

ಗಿಡಮರಗಳ ಸಾಲು ಅಂತ್ಯಗೊಂಡಿತು. ಮಧ್ಯದಲ್ಲಿ ಕಾಲುದಾರಿ. ಅದರಾಚೆ ಕಾಡು. ಹಿಂದಿನಿಂದ ತಮಟೆಯ ಸದ್ದು ಕ್ರಮವಾಗಿ ಹತ್ತಿರ ಬರುತ್ತಿತ್ತು. ಹೋ ಹೋಗಳ ಮೊರೆತವೂ ಪಕ್ಕದಲ್ಲಿಯೇ ಕೇಳಿಬರುತ್ತಿತ್ತು.

ಮೊಲ ಮಾವಯ್ಯ ಮತ್ತಿಬ್ಬರು ಬಂಧುಗಳೊಂದಿಗೆ ಕಾಲು ದಾರಿಯ ಕಡೆಗೆ ಓಡಿದ. ಧನಾಧನ್ ಎಂದಿತು ಗುಡುಗು. ಮೊಲಮಾವಯ್ಯ ಅಂಗಾತ ಬಿದ್ದುದನ್ನು ನೋಡಿ ಬೇಂಬಿ ಭಯದಿಂದ ನಿಂತುಬಿಟ್ಟ.

ಯಾರದೋ ಕಂಠ ಹಿಂದಿನಿಂದ ಕೇಳಿಸಿತು.

"ಬಂದೇ ಬಿಟ್ಟರು ಅವರು, ಬೇಗ–ಬೇಗ ಓಡಿ...."

ರೆಕ್ಕೆಯ ಸಪ್ಪಳ, ಕಾಡುಕೋಳಿಗಳೆಲ್ಲಾ ಒಂದಾಗಿ ಮೇಲೆ ಹಾರಿದುವು. ಹತ್ತು ಗುಡುಗು ಒಂದೇಸಲ ಸಿಡಿದಂತಹ ಸದ್ದು, ಎದೆ ಬಿಡೆಯುವಂತಹ ಸದ್ದು ಸತ್ತ ಪಕ್ಷಿಗಳು ಕೆಳಗೆ ಉದುರಿದುವು. ಅದೃಷ್ಟ ಚೆನ್ನಾಗಿದ್ದ ಕೆಲವು ಪಕ್ಷಿಗಳು ಮಾತ್ರ ತಪ್ಪಿಸಿಕೊಂಡವು.

ಅಷ್ಟರಲ್ಲಿ ಯಾರದೋ ಹೆಜ್ಜೆಯ ಸದ್ದಾಯಿತು. ತಿರುಗಿ ನೋಡಿದ ಬೇಂಬಿ. ಮನುಷ್ಯ! ಎಲ್ಲಿ ನೋಡಿದರೂ ಮನುಷ್ಯನೇ ತಮಟೆ ಬಡಿಯುತ್ತಾ ಹಹಾಹೂಹೂ ಎಂದು ಕೂಗುತ್ತಿದ್ದ ಮನುಷ್ಯ. ಪೊದೆಗಳಲ್ಲೂ ಅವನೇ.

ಹಾಂ, ಇದೇ ಸಮಯ, ಓಡು. ನನಗೆ ಸಮೀಪವಾಗಿಯೇ ಇರು ಸ್ವಲ್ಪ ದೂರದಲ್ಲಿ...." ಎನ್ನುತ್ತಾ ಬೇಂಬಿಯ ತಾಯಿ ಒಂದು ನೆಗೆತದಲ್ಲಿ ಕಾಲುದಾರಿಯ ಕಡೆ ಓಡಿದಳು. ತಾಯಿಯ ಹಿಂದೆಯೇ ಬೇಂಬಿ ಓಡಿದ.

ಗುಡುಗಿನ ಶಬ್ದ ಸಿಡಿದುಬಂತು. ಆಕಾಶ ಮುರಿದು ತಲೆಯ ಮೇಲೆ ಬಿದ್ದಂತೆನಿಸಿತು. ತನಗೆದುರಾಗಿ ಏನಿದೆಯೆಂಬುದು ಸಹ ಕಾಣುತ್ತಿರಲಿಲ್ಲ. ಮತ್ತೆರಡು ನೆಗೆತದಲ್ಲಿ ಕಾಲುದಾರಿಯನ್ನು ದಾಟಿ ಹೋದ. ಅವನ ಮನಸಿನಲ್ಲಿದ್ದುದೊಂದೇ. ಏನಾದರೂ ಸರಿ ಓಡಿಹೋಗಬೇಕು. ತಪ್ಪಿಸಿಕೊಳ್ಳಬೇಕು. ಮನಸ್ಸಿನಲ್ಲಿ ಮತ್ತೊಂದು ಆಲೋಚನೆಯೆ. ಇರಲಿಲ್ಲ. ಓಟ....ಓಟ... ಓಟ...ಓಟ...!

ಮಧ್ಯದಲ್ಲೊಂದು ಕಡೆ ಅಮ್ಮ ನೆಲದಮೇಲೆ ಬೀಳುತ್ತಿದ್ದಂತೆ ಕಾಣಿಸಿದ ಭಾವನೆ. ಅದೂ ಸ್ಪಷ್ಟವಾಗಿಯಲ್ಲ. ಸುಮ್ಮನೆ ಹಾಗೆನಿಸಿದಂತಾಯಿತು. ಮಂಜಿನ ತೆರೆಯಂತೆ ಭಯ ಕಣ್ಣಿನ ಮೇಲೆ ಆವರಿಸಿತ್ತು. ಆ ಭಯ ಅವನನ್ನು ಇನ್ನೂ—ಇನ್ನೂ ಓಡುವಂತೆ ಮಾಡಿತು. ಹಾಗೆ ಓಡುವಾಗ ದಾರಿ ಎತ್ತ ಹೋಗುತ್ತಿತ್ತೆಂಬುದೂ ತಿಳಿಯದು. ಬಾಹ್ಯ ಪರಿಜ್ಞಾನವೇ ಇರಲಿಲ್ಲ. ಬರೀ ಓಟವೊಂದೇ ಗೊತ್ತು.

ಸರ್ರನೆ ಆ ಕಾಲುದಾರಿಯನ್ನು ದಾಟಿ ಅತ್ತ ಕಡೆಯಿಂದ ಗಿಡಮರಗಳ

ಗುಂಪಿನಲ್ಲಿ ನುಸುಳಿ ಹೋದ ಬೇಂಬಿ. ಹಿಂದಿನಿಂದ ಇನ್ನೂ ಕೂಗಾಟ, ಅರಚಾಟ ಕೇಳಿ ಬರುತ್ತಲೇ ಇತ್ತು. ತಮಟೆಯ ಸದ್ದೂ ಕೇಳಿಸುತ್ತಿತ್ತು. ಕೊಂಬೆಗಳ ಮೇಲಿನಿಂದ ಆಲಿಕಲ್ಲಿನಂತಹುದೇನೋ ಉದುರಿ ಬೀಳುತ್ತಿತ್ತು. ಅವನು ಓಡುತ್ತಲೇ ಇದ್ದ. ಇನ್ನೂ–ಇನ್ನೂ ಓಡಿದ. ಅನಂತರ ನಿಶ್ಶಬ್ದ...

ಮಂಜಿನಲ್ಲಿ ಗೋಣುಮುರಿದು ಬಿದ್ದಿದ್ದ ಕಾಡುಕೋಳಿ ನರಳುತ್ತಿತ್ತು. ತನ್ನ ಪಕ್ಕದಿಂದಲೇ ಓಡುತ್ತಿದ್ದ ಬೇಂಬಿಯನ್ನು ಕಂಡು "ಕೊಂದು ಬಿಟ್ಟ" ಎಂದಿತು ಕ್ಷೀಣವಾಗಿ.

ಅದರ ಕಡೆ ನೋಡದೆಯೇ ಓಡುತ್ತಿದ್ದ ಬೇಂಬಿ. ದಾರಿಯಲ್ಲಿ ಅಡ್ಡವಾಗಿ ಗಿಡಗಳ ಕೊಂಬೆಗಳು ಬಿದ್ದಿದ್ದುವು. ಓಟದ ವೇಗ ಸ್ವಲ್ಪ ಕಡಿಮೆಯಾಯಿತು.

"ಬೇಂಬಿ" ಎಂದು ಕೂಗಿದಂತಾಯಿತು.

ಅವನು ತಟ್ಟನೆನಿಂತ. ತನ್ನವರೆ ಕಂಠ ಅದು.

ಮತ್ತೆ ಕೇಳಿಸಿತು "ಬೇಂಬಿ" ಎಂದು.

ದಾರಿಯ ಪಕ್ಕದಲ್ಲಿ ಮಂಜಿನಲ್ಲಿ ಬಿದ್ದಿದ್ದ ಗೋಬೋ. ಓಡುವುದು ಹಾಗಿರಲಿ, ಎದ್ದು ನಿಲ್ಲುವುದೂ ಅವನಿಂದಾಗುತ್ತಿರಲಿಲ್ಲ. ಪೂರಾ ಶಕ್ತಿ ಗುಂದಿದ್ದ. ಬೇಂಬಿಗೆ ಅಯ್ಯೋ ಅನ್ನಿಸಿತು. ಹತ್ತಿರಬಂದ.

"ನಿಮ್ಮ ಅಮ್ಮ ಎಲ್ಲಿ ? ಫಲೀನಾ ಎಲ್ಲಿ ?" ಎಂದು ಆತುರಾತುರವಾಗಿ ಕೇಳಿದ. ಭಯ, ಕಳವಳ, ಆಂದೋಳನ ಅವನನ್ನಿನ್ನೂ ಬಿಟ್ಟಿರಲಿಲ್ಲ.

"ಅವರಿಬ್ಬರೂ ಮುಂದಕ್ಕೆ ಓಡಿಹೋದರು. ನಾನು ಬಿದ್ದು ಬಿಟ್ಟೆ. ಇನ್ನೊಂದು ಹೆಜ್ಜೆಯಿಡಲೂ ನನ್ನಿಂದಾಗದು. ನೀನು ಹೊರಟು ಹೋಗು" ಎಂದ ಗೋಬೋ–ನಿಧಾನವಾಗಿ ಅನುಭವಸ್ಥನಂತೆ.

ಬೇಂಬಿ ಅವನಲ್ಲಿ ಉತ್ಸಾಹವನ್ನುಂಟು ಮಾಡಿ ಮೇಲಕ್ಕೆಬ್ಬಿಸಬೇಕೆಂದು ಪ್ರಯತ್ನಿಸಿದ.

"ಗೋಬೋ ಏಳೋ, ಸ್ವಲ್ಪ ಪ್ರಯತ್ನಮಾಡು. ವಿಶ್ರಾಂತಿ ಸಾಕಿನ್ನು. ನಾನು ಸಹಾಯ ಮಾಡುತ್ತೇನೆ. ಇಬ್ಬರೂ ಒಟ್ಟಿಗೇ ಓಡಿ ಹೋಗೋಣ."

ಗೋಬೋ ತಲೆ ಅಲ್ಲಾಡಿಸಿದ.

"ಉಹುಂ, ಪ್ರಯೋಜನವಿಲ್ಲ, ನನ್ನಿಂದಾಗದು. ನಾನು ಏಳಲಾರೆ. ನಿನ್ನೊಡನೆ ಬರಲು ನನಗೆ ಇಷ್ಟವಿದೆ, ಆದರೆ ನಾನು ಬರಲಾರೆ, ನೀನು ಹೋಗು."

"ಇಲ್ಲಿಯೇ ಇದ್ದರೆ ನಿನ್ನ ಗತಿ ಏನು?"

"ಗೊತ್ತಿಲ್ಲ ಬಹುಶಃ ಸಾಯಬಹುದು."

ಅಷ್ಟರಲ್ಲಿ ಮತ್ತೆ ಗುಡುಗಿನಂತಹ ಶಬ್ದ, ಅರೆಚಾಟ, ಬೊಬ್ಬೆ, ಕೇಳಿಸಿತು. ಹಿಂದಿನಿಂದ ಯಾರೋ ಓಡಿ ಬರುತ್ತಿದ್ದಂತಾಯಿತು. ಬೇಂಬಿ ಹಿಂತಿರುಗಿ ನೋಡಿದ.

ಕಾರೋ ಬರುತ್ತಿದ್ದಂತೆಯೇ ಬೇಂಬಿಯನ್ನು ಎಚ್ಚರಿಸಿದ.

"ಓಡು, ಒಂದುನಿಮಿಷವೂ ತಡಮಾಡಬೇಡ" ಎನ್ನುತ್ತಾ ಓಡಿಹೋದ. ಅವನ ಓಟದ ವೇಗ ಕಂಡು ಬೇಂಬಿಗೂ ಹುರುಪು ಬಂತು. ಅವನಿಗೆ ತಿಳಿಯದಂತೆಯೇ ಅವನ ಕಾಲುಗಳು ಓಟಕಿತ್ತವು. ಸ್ವಲ್ಪ ದೂರ ಹೋದ ಮೇಲೆ ನೆನಪಾಯಿತು. ಓಟ ನಿಲ್ಲಿಸದೆ ತಲೆಮಾತ್ರ ತಿರುಗಿಸಿ "ನಾನು ಹೋಗ್ತಿದೀನಿ ಗೋಬೋ" ಎಂದು ಕೂಗಿದ.

ಆದರೆ ಅಷ್ಟು ಹೊತ್ತಿಗೆ ಬೇಂಬಿ ಬಹಳ ದೂರ ಬಂದಿದ್ದ ಗೋಬೋಗೆ ಅವನ ಕೂಗು ಕೇಳಿಸಿದ್ದಿರಲಾರದು.

ಸಾಯಂಕಾಲದವರೆವಿಗೂ ಗುಡುಗು ತಮ್ಮಟೆಯ ಶಬ್ದಗಳಿಂದ ಅಡವಿಯೆಲ್ಲಾ ಕಂಪಿಸುತ್ತಲೇ ಇತ್ತು. ಕತ್ತಲಾಗುತ್ತಿದ್ದಂತೆಯೇ ಎಲ್ಲಾ ತಣ್ಣಗಾಯಿತು. ತಣ್ಣನೆಯಗಾಳಿ ಅಸಹ್ಯಕರವಾದ ನರವಾಸನೆಯನ್ನು ಅಡವಿಯಿಂದ ಓಡಿಸಿತ್ತು.

ಮರುದಿನ ಬೇಂಬಿ ಮೊದಲು ನೋಡಿದ್ದು ರೋನೋನನ್ನು, ಅವನು

ಎಂದಿಗಿಂತ ಹೆಚ್ಚಾಗಿ ಕುಂಟುತ್ತಿದ್ದ.

"ಈಗಲೇ ದಾರಿಯಲ್ಲಿ ಮತ್ತೀಯ ಗಿಡದ ಕೆಳಗೆ ನರಿಯಣ್ಣನನ್ನು ನೋಡಿದೆ. ಹೆಚ್ಚು ಹೊತ್ತು ಬದುಕಲಾರೆ. ಈಗಲೋ-ಆಗಲೋ ಅನ್ನು ವಂತಿದಾನೆ. ಅಯ್ಯೋ ಪಾಪ" ಎಂದ.

ಬೇಂಬಿಗೀಗ ಅಮ್ಮನ ನೆನಪಾಯಿತು.

"ನಮ್ಮ ತಾಯಿಯನ್ನು ಎಲ್ಲಿಯಾದರೂ ನೋಡಿದಿರಾ ?"

"ಇಲ್ಲವಲ್ಲಾ" ಎನ್ನುತ್ತಾ ರೋನೋ ಅಲ್ಲಿಂದ ಹೊರಟು ಹೋದ.

ರಾತ್ರಿ ಬಹಳ ಹೊತ್ತಾದ ನಂತರ ನವೀನಾ ಚಿಕ್ಕಮ್ಮ, ಫಲೀನಾ ಕಾಣಿಸಿದರು. ಅವರನ್ನು ನೋಡಿದಾಕ್ಷಣ ಬೇಂಬಿಗೆ ಹೋದ ಜೀವ ಬಂದಂತಾಯಿತು.

"ಅಮ್ಮ ಕಾಣಿಸಿದಳೇ ನಿಮಗೆ?"

"ಇಲ್ಲವಲ್ಲಾ" ಎಂದಳು ಫಲೀನಾ ? ನಮ್ಮ ತಾಯಿ ಸಹ ಕಾಣಸುತ್ತಿಲ್ಲ."

ನವೀನ ಚಿಕ್ಕಮ್ಮ ನಕ್ಕಳು.

"ಇನ್ನು ನನಗೆ ಮಕ್ಕಳ ಹೊಣೆ ಏನೂ ಇಲ್ಲಾಂತಿದ್ದೆ. ಈಗ ಇಬ್ಬರು ಮಕ್ಕಳು ಸಿಕ್ಕಿದರು ಆಕಸ್ಮಾತ್ತಾಗಿ."

ನವೀನಳನ್ನು ಒತ್ತಿ ನಿಂತರು ಮಕ್ಕಳು. ಸಂಭಾಷಣೆ ಗೋಬೋನ ಕಡೆ ಹೊರಳಿತು. ತನಗೆ ತಿಳಿದದ್ದನ್ನೆಲ್ಲಾ ಬೇಂಬಿ ಹೇಳಿದ. ಅವರಿಗೆ ತುಂಬಾ ವ್ಯಥೆಯಾಯಿತು ಮಕ್ಕಳಿಬ್ಬರೂ ಕಣ್ಣೀರಿಟ್ಟರು.

ಆದರೆ ನವೀನ ಚಿಕ್ಕಮ್ಮ ಅವರನ್ನು ಅಳುತ್ತಾ ಕೂಡಲು ಬಿಡಲಿಲ್ಲ. "ಹೂಂ, ನಡೆಯಿರಿ ಬೆಳಗಿನಿಂದ ತೃಣ ಹುಲ್ಲನ್ನೂ ಮುಟ್ಟಿಲ್ಲ. ಮುಂಚೆ ತಿಂಡಿಯ ವಿಷಯ ನೋಡೋಣ."

ನವೀನ ಚಿಕ್ಕಮ್ಮ ಮಕ್ಕಳಿಬ್ಬರನ್ನೂ ಪೊದೆಗಳ ಕಡೆ ಕರೆದುಕೊಂಡು ಹೋದಳು. ಅಲ್ಲಲ್ಲಿ ಒಂದೋ-ಎರಡೋ ಸ್ವಲ್ಪ ಸ್ವಲ್ಪ ಒಣಗಿದ್ದ ಎಲೆಗಳಿದ್ದ

ಪೊದೆಗಳು ಕಾಣಿಸಿದುವು. ನವೀನ ತಾನೇನೂ ತಿನ್ನದೆ ಮಕ್ಕಳನ್ನು ತಿನ್ನಲು ಬಿಟ್ಟಳು. ಅಲ್ಲಿಂದ ಮತ್ತೊಂದು ಕಡೆಗೆ ಕರೆದುಕೊಂಡು ಹೋಗಿ ಕಾಲಿನ ಗೊರಸುಗಳಿಂದ ಮಂಜನ್ನು ಪಕ್ಕಕ್ಕೆ ತಳ್ಳಿ ಕೆಳಗಿದ್ದ ಹುಲ್ಲನ್ನು ತೋರಿಸಿದಳು.

"ಇಲ್ಲಿ ಬನ್ನಿ ಮಕ್ಕಳೇ, ಹುಲ್ಲು ಚೆನ್ನಾಗಿದೆ."

ಅವರು ತಿಂಡಿ ತಿನ್ನುವುದನ್ನು ಆಪ್ಯಾಯತೆಯಿಂದ ನೋಡುತ್ತಾ ತನ್ನಲ್ಲಿ ತಾನೇ, ಗೊಣಗಿಕೊಂಡಳು.

"ಪರರ ಮಕ್ಕಳು....ಆದರೇನಂತೆ, ಮಕ್ಕಳು ಮಕ್ಕಳೇ. ಹೇಗೆ ಬದುಕುತ್ತಾರೋ ಏನೋ."

ಇಷ್ಟರಲ್ಲಿ ಏಣ ಪೊದೆಗಳ ಮರೆಯಿಂದ ಓಡಿಬಂದಳು. ಅವಳನ್ನು ನೋಡಿದಾಕ್ಷಣ ಫಲೀನಾ ಕುಣಿದು ಕುಪ್ಪಳಿಸಿದಳು. ಓಡಿಹೋಗಿ ಕತ್ತನ್ನು ಸವರುತ್ತಾ ಮೈಗೆ-ಮೈ ತಾಗಿಸುತ್ತಾ ನಿಂತಳು "ಅಮ್ಮಾ, ಅಮ್ಮಾ" ಎನ್ನುತ್ತಾ.

"ಚಿಕ್ಕಮ್ಮ" ಎನ್ನುತ್ತಾ ಹತ್ತಿರ ಬಂದ ಬೇಂಬಿ.

ಅವನನ್ನು ನೋಡಿ ಏಣಿ ಅಳತೊಡಗಿದಳು.

"ಗೋಬೋ ಏನಾದನೋ ಗೊತ್ತಿಲ್ಲ ದೇವರೇ, ಎಲ್ಲಾ ಕಡೆ ಹುಡುಕಿದೆ. ಎಲ್ಲೂ ಇಲ್ಲ ನನ್ನ ಕಂದ."

ನವೀನ ಅವಳನ್ನು ಸಮಾಧಾನ ಪಡಿಸಿದಳು.

"ಗೋಬೋ ಹೆಜ್ಜೆಯ ಗುರ್ತು ಯಾವ ಕಡೆಗಿದೆ ಅಂತ ನೋಡಿದೆಯಾ?"

"ಅಲ್ಲಿ ನನ್ನ ಕಂದನ ಹೆಜ್ಜೆಯ ಗುರುತುಗಳು ಇಲ್ಲವೇ ಇಲ್ಲ ಎಲ್ಲೆಲ್ಲೂ ಮನುಷ್ಯನ ಹೆಜ್ಜೆಯ ಗುರ್ತುಗಳೇ" ಎಂದಳು ಏಣ.

ಸ್ವಲ್ಪ ಹೊತ್ತು ಎಲ್ಲರೂ ಮೌನವಾಗಿದ್ದರು.

"ಏಣಿಚಿಕ್ಕಮ್ಮಾ, ನಮ್ಮ ತಾಯಿ ಎಲ್ಲಿಯಾದರೂ ಕಾಣಸಿಕ್ಕಿದಳೇ?" ಎಂದ ಬೇಂಬಿ ಕಣ್ಣೀರಿಡುತ್ತಾ.

"ಇಲ್ಲ ಮಗೂ" ಎಂದು ಏಣಿ ಬೇಂಬಿಯ ಮೈಸವರಿ ಕಣ್ಣೀರಿಟ್ಟಳು.

ಅಷ್ಟೆ! ಆ ನಂತರ ಬೇಂಬಿ ಅವರ ತಾಯಿಯನ್ನು ಮತ್ತೆ ಎಂದೂ ನೋಡಲಿಲ್ಲ.

ಕೆಲವು ದಿನಗಳು ಉರುಳಿದುವು.

ಆಗಲೇ ಗಿಡಮರಗಳ ತುಂಬಾ ಹಸಿರು ಎಲೆಗಳು ದಟ್ಟವಾಗಿ ತುಂಬಿದ್ದುವು. ನೆಲ ಹುಲ್ಲಿನ ಹಾಸಿಗೆಯಾಗಿತ್ತು. ಆಗತಾನೇ ಕಣ್ಣು ಬಿಡುತ್ತಿದ್ದ ಎಳೆಯ ಚಿಗುರು ಸೂರ್ಯನನ್ನು ನಸುನಾಚಿಕೆಯಿಂದ ನಿರುಕಿಸುತ್ತಿದ್ದುವು.

ಪೊದೆಗಳ ತುಂಬೆಲ್ಲಾ ಹೂಗಳು ತುಂಬಿದ್ದುವು. ಮುಂಜಾನೆಯ ಎಳೆ ಬಿಸಿಲ ಕಾಂತಿಯಲ್ಲಿ ಅರಳಿದ ಹೂಗಳು, ನಿದ್ದೆಯಲ್ಲಿನ ಎಳೆಯ ಮಕ್ಕಳ ಮೃದುಹಾಸದಂತೆ ಆಹ್ಲಾದಕರವಾಗಿತ್ತು.

ಬೇಂಬಿಗೀಗ ತಲೆಯ ಮೇಲೆ ಹೊಸದಾಗಿ ಕಿರೀಟ ಬಂದಿತ್ತು. ಅವನು ಬಾದಾಮಿ ಗಿಡದ ಕೆಳಗೆ ನಿಂತು ತನ್ನ ಕಿರೀಟವನ್ನು ಹರಿತ ಮಾಡಿಕೊಳ್ಳುತ್ತಿದ್ದ. ಅದನ್ನು ಹಾಗೆ ಮರಕ್ಕೆ ಹಾಕಿ ಉಜ್ಜುವುದರಲ್ಲಿ ಅವನಿಗೆಷ್ಟೋ ಸುಖಕಾಣುತ್ತಿತ್ತು. ಅದಲ್ಲದೆ ಅವನಿಗೆ ಅವಶ್ಯವೂ ಆಗಿತ್ತು. ಕೊಂಬೆಗಳ ಕಿರೀಟದ ಮೇಲಿರುವ ತೆಳ್ಳನೆಯ ಚರ್ಮ ಕೆಲವು ದಿನಗಳಾದ ಮೇಲೆ ತನ್ನಷ್ಟಕ್ಕೆ ತಾನೇ ಉದುರಿ ಹೋಗುತ್ತದೆಯಾದರೂ, ಪರಿಶುಭ್ರವಾಗಿ ಸುಂದರವಾಗಿ ಕಾಣಬೇಕೆಂದುಕೊಳ್ಳುವ ಯುವರಾಜರು ತಮ್ಮ ಕೊಂಬುಗಳನ್ನು ತಾವೇ ಶುಭ್ರಪಡಿಸಿಕೊಳ್ಳುತ್ತಿದ್ದರು. ಅದೇ ರೀತಿ ಬೇಂಬಿ ತನ್ನ ಕೊಂಬುಗಳನ್ನು ಶುಭ್ರಪಡಿಸಿಕೊಳ್ಳುವುದರಲ್ಲಿ ತಲ್ಲೀನನಾಗಿದ್ದ. ಅದರ ಮೇಲಿದ್ದ ತೆಳ್ಳನೆಯ ಪೊರೆಯಂತಹ ಚರ್ಮ ಕಿತ್ತು ಬಂದು ಕಿವಿಗಳ ಮೇಲೆ ತೂಗಾಡಿತು.

ಕೊಂಬುಗಳಿಂದ ಬಾದಾಮಿ ಗಿಡವನ್ನು ಉಜ್ಜುತ್ತಿದ್ದಾಗ ಬೇಂಬಿಗೆ ಒಂದು ಹೊಸವಿಷಯ ತಿಳಿದು ಬಂತು—ಆ ಗಿಡಕ್ಕಿಂತ ತನ್ನ ಕೊಂಬುಗಳು ಗಟ್ಟಿಯಾಗಿವೆ ಅಂತ. ಆ ವಿಷಯ ತಿಳಿದ ಮೇಲೆ ಅವನಿಗೆ ಹೊಸದಾಗಿ ಹೆಮ್ಮೆಯುಂಟಾಯ್ತು. ಮೈಯಲ್ಲಿನ ಬಲ ಉಕ್ಕಿತು. ಬೇಂಬಿ ಕೊಂಬು ಉಜ್ಜಿದ್ದರಿಂದ ತೊಗಟೆ ಬಹಳ ಕಡೆ ಕಿತ್ತುಬಂದಿತು. ಆ ಗಿಡಕ್ಕೆ ಬಿಳಿಯ

ಗಾಯಗಳಾದವು. ಸ್ವಲ್ಪ ಹೊತ್ತಿನಲ್ಲಿಯೇ ಆ ಗಾಯಗಳು ಗಾಳಿಗೆ ಕೆಂಪಾದವು. ಅದನ್ನು ನೋಡಿ ಬೇಂಬಿಗೆ ಗಿಡದಮೇಲೆ ಕರುಣೆ ಹುಟ್ಟಲಿಲ್ಲ. ಇನ್ನೂ ಉತ್ಸಾಹ ಹೆಚ್ಚಿತು. ಮತ್ತಷ್ಟು ವೇಗದಿಂದ ಕೊಂಬುಗಳನ್ನು ನುಣುಪು ಮಾಡಿಕೊಳ್ಳತೊಡಗಿದ. ಸ್ವಲ್ಪ ಹೊತ್ತಿನಲ್ಲಿಯೇ ಸುತ್ತಮುತ್ತಲೂ ಇದ್ದ ಎಲ್ಲಾ ಬಾದಾಮಿ ಗಿಡಗಳಿಗೂ ಗಾಯಗಳಾದುವು.

"ಇನ್ನೂ ಸ್ವಲ್ಪ ಉಜ್ಜಿ ಮಿರುಗುವಂತೆ ಮಾಡಿದರೆ ಕೊಂಬುಗಳು ತುಂಬಾ ಪಸಂದಾಗಿ ಕಾಣುತ್ತವೆ." ಗಿಡದಮೇಲಿಂದ ಯಾರದೋ ಕಂಠ ಕೇಳಿ ಬಂತು,

ಬೇಂಬಿ ತಲೆಯೆತ್ತಿ ನೋಡಿದ. ಕೊಂಬೆಯ ಮೇಲೆ ಅಳಿಲು ಕಿಚ ಕಿಚ ಎನ್ನುತ್ತಿತ್ತು.

"ಟ್ರೀ... ಹಹ್ಹ ಹ್ಹ ಹ್ಹ ಹಾ !" ಮತ್ತೊಂದು ಕೊಂಬೆಯ ಮೇಲಿಂದ ಯಾರದೊ. ಹೊಸ ಕಂಠ ಕೇಳಿಬಂತು. ಅದು ಮರಕುಟುಕ ಅಂತ ಅವರಿಬ್ಬರಿಗೂ ಗೊತ್ತು. ಅದ್ದರಿಂದಲೇ ಅವರು ಹೆದರಲಿಲ್ಲ.

"ದಯವಿಟ್ಟು ಏನೂ ತಿಳಿದುಕೊಳ್ಳಬೇಡಿ. ನನಗೆ ನಗು ತಡೆಯಲಾಗಲಿಲ್ಲ" ಎಂದಿತು ಮರಕುಟುಕ ಹಕ್ಕಿ.

"ನಿಮಗೆ ಅಷ್ಟು ನಗು ನಗು ಬರಲು ಕಾರಣವೇನು ?" ಬೇಂಬಿ ಸಗೌರವದಿಂದ ಕೇಳಿದ.

"ತಾವು ಮಾಡುತ್ತಿರುವ ಕೆಲಸ ನೋಡಿ ನಗುಬಂತು. ಅದು ತಮಗೆ ಸರಿಯಾಗಿ ಕೈಲಾಗಲಿಲ್ಲ ಅಂತ ಕಾಣುತ್ತೆ. ಅಲ್ಲದೆ ಬಾದಾಮಿ ಗಿಡವನ್ನು ಕುಕ್ಕಿದರೆ ಪ್ರಯೋಜನವಿಲ್ಲ. ತೊಗಟೆ ದಪ್ಪವಾಗಿರುವ ಗಿಡ ಹುಡುಕಿಕೊಳ್ಳಬೇಕು. ತೊಗಟೆ ತೆಳ್ಳಗಿದ್ದರೆ ಅವು ಇರುವುದೇ ಇಲ್ಲ" ಎಂದಿತು ಮರಕುಟುಕ.

"ನೀವನ್ನುತ್ತಿರುವುದೇನೂಂತ ನನಗರ್ಥವಾಗುತ್ತಿಲ್ಲ. ಏನೂ ಇರುವುದಿಲ್ಲ ಅಂತೀರಿ ?" ಬೇಂಬಿ ಕೇಳಿದ.

"ಅದೇ, ಹುಳುಗಳು! ಮತ್ತೇನಿರುತ್ತವೆ ?" ಎಂದು ಮತ್ತೆ ನಕ್ಕ

"ನೋಡಿ ಇಲ್ಲಿ, ಹೇಗೆ ಮಾಡಬೇಕು ಅಂತ ತೋರಿಸ್ತೀನಿ" ಎಂದು ಹೇಳಿದ ತೊಗಟೆಯ ಸಂದಿನಲ್ಲಿ ಕೊಕ್ಕಿನಿಂದ ಟಕ್ ಟಕ್ ಟಕ್ ಎಂದು ಕುಕ್ಕಿತು.

ಅಳಿಲು ಕಿಚಕಿಚನೆ ಸದ್ದು ಮಾಡಿ, ತಾನು ಕುಳಿತಿದ್ದ ಕೊಂಬೆಯ ಮೇಲೆ ಬಂದು ಕುಳಿತಿತು.

"ಏನು ಸುಮ್ಮನೆ ಅರ್ಥವಿಲ್ಲದ ಮಾತಾಡುತ್ತಿ ? ಯುವರಾಜರಿಗೆ ನಿನ್ನ ಹುಳುಗಳೊಂದಿಗೇನು ಕೆಲಸ ?"

ಮರಕುಟುಕನಿಗೆ ತುಂಬಾ ಆಶ್ಚರ್ಯವಾಯಿತು. "ಏಕೆ ? ಅವು ತುಂಬಾ ರುಚಿಯಾಗಿರುತ್ತವೆಯಲ್ಲಾ! ಎಂದು ಕೊಕ್ಕಿನಿಂದ ಒಂದು ಹುಳು ವನ್ನು ಕುಕ್ಕಿ ಬಾಯಲ್ಲಿ ಹಾಕಿಕೊಂಡು ನುಂಗಿಬಿಟ್ಟಿತು.

ಅಳಿಲು ಸಿಡುಕಿನಿಂದ "ನಿಂಗೇನೂ ಗೊತ್ತಾಗೋಲ್ಲ. ಯುವರಾಜರ ಪದ್ಧತೀನೇ ಬೇರೆ. ಅವರದೆಲ್ಲಾ ದೊಡ್ಡ–ದೊಡ್ಡ ಊಹೆಗಳು ದೊಡ್ಡ–ದೊಡ್ಡ ಆಶಯಗಳು. ನಿನ್ನ ಹುಳುಗಳೂ ನೀನೂ, ನಿನ್ನ ಲೋಕಾನೇ ಬೇರೆ" ಎಂದಿತು.

"ಓಹೋ ಏನು ದೊಡಸ್ತಿಕೆ, ದೊಡ್ಡ, ದೊಡ್ಡ ಆಶಯಗಳೆಂದರೆ ಮೈ ಉರಿಯುತ್ತೆ ನಂಗೆ'' ಎಂದು ಕೋಪದಿಂದ ಹಾರಿ ಹೋಯ್ತು ಮರ ಕುಟುಕ.

ಅಳಿಲು ಮೇಲಿನ ಕೊಂಬೆಯಿಂದ ಇಳಿದು ಬೇಂಬಿಯ ಬಳಿ ಬಂದು ಕೇಳಿತು.

"ನಿಮಗೆ ನನ್ನ ಗುರ್ತು ಹತ್ತಿತೇ ?''

"ಹತ್ತದೆ ಏನು ? ನೀವು ಆ ಮರದ ಕೊಂಬೆಯ ಮೇಲೆ ಇರುತ್ತಿದ್ದಿರ ಲ್ಲವೇ'' ಎಂದು ಮತ್ತೆಯ ಮರದ ಕಡೆ ತೋರಿಸಿದ ಬೇಂಬಿ.

ಅಳಿಲಿನ ಉತ್ಸಾಹ ಹೆಚ್ಚಾಯಿತು,

"ಹಾಂ, ನೀವು ನನ್ನನ್ನ ನೋಡಿ ನಮ್ಮ ಅಜ್ಜಿ ಅಂದುಕೊಂತಿರೋ ಹಾಗಿದೆ. ನನಗೊಗ್ಗೊತ್ತು ನೀವು ಹಾಗಂದುಕೋತೀರಿ ಅಂತ. ಆ ಮಾತ್ತ್ತಿ

ಮರದ ಪೊಟರೆಯಲ್ಲಿದ್ದಾಗ ಅಜ್ಜಿ ನಿಮ್ಮನ್ನು ಕುರಿತು ತುಂಬಾ ಹೇಳ್ತಿದ್ದಳು. ಒಂದು ದಿನ ಮುಂಗುಸಿಯೊಂದು ಅವಳನ್ನು ಸೀಳಿ ಕೊಂದು ಬಿಟ್ಟಿತು. ಓ .... ಅದು ನಡೆದೂ ತುಂಬಾ ಕಾಲವಾಯಿತೆನ್ನಿ. ಬಹುಶಃ ನಿಮಗೆ ನೆನಪಿರಲಾರದು.''

ಬೇಂಬಿ ತಲೆಯಾಡಿಸಿದ.

"ಹೌದು. ಯಾರೋ ಹೇಳಿದ್ದನ್ನು ಕೇಳಿದಂತೆ ನೆನಪು."

"ಆಮೇಲೆ ನಮ್ಮ ತಂದೆ ಆ ಮುತ್ತಿಮರ ವನ್ನು ಬಿಟ್ಟು ಈ ಪ್ರಾಂತಕೆ ವಲಸೆ ಬಂದುಬಿಟ್ಟರು."

ಅಳಿಲು ಕಣ್ಣಗಲಿಸಿ, ಮುಂದಿನ ಕೈಗಳನ್ನು ಎದೆಯ ಮೇಲೆ ಒತ್ತಿಕೊಂಡಿತು.

"ಅಂದಹಾಗೆ. ನೀವು ನನ್ನನ್ನು ನೋಡಿ ನಮ್ಮ ತಂದೆ ಅಂದುಕೊಳ್ಳುತ್ತಿಲ್ಲ ತಾನೇ ? ನಮ್ಮ ತಂದೆಯವರ ಪರಿಚಯ ಇದೆಯೋ ನಿಮಗೆ?"

"ಅವರ ಪರಿಚಯ ಭಾಗ್ಯ ನನಗಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ" ಎಂದ ಬೇಂಬಿ.

"ಇರಬಹುದು, ಅದರಲ್ಲಿ ಆಶ್ಚರ್ಯವೇನೂ ಇಲ್ಲ. ನಮ್ಮ ತಂದೆಯದು ತುಂಬಾ ಪುಕ್ಕಲು ಸ್ವಭಾವ ಯಾರ ಜೊತೇನು ಪರಿಚಯ ಸ್ನೇಹ ಬೆಳಸದೆ ತಮ್ಮ ಪಾಡಿಗೆ ತಾವು ಗೂಡಿನಲ್ಲಿಯೇ ಇರುತ್ತಿದ್ದರು.

"ಹಾಗೇನು ? ಅವರೀಗ ಎಲ್ಲಿದ್ದಾರೆ?"

"ಏನು ಹೇಳಲಿ ? ತಿಂಗಳ ಹಿಂದೆ ಗೂಬೆಯೊಂದು ಅವರನ್ನು ತಿವಿದು ಕೊಂದುಬಿಟ್ಟಿತು. ಆ ಘೋರ ಕೃತ್ಯ ನಡೆದ ಮೇಲೆ ನಾನು ಇನ್ನು ಅಲ್ಲಿರಲಾರದೆ ಆ ಮರವನ್ನು ಬಿಟ್ಟು ಇಲ್ಲಿಗೆ ಬಂದು ಬಿಟ್ಟೆ. ಆಗಿನಿಂದ ಇಲ್ಲಿಯೇ ಇದೀನಿ."

ಅಳಿಲಿನ ತಂದೆಯ ಮರಣಕ್ಕೆ ಸಂತಾಪ ಸೂಚಿಸಿ ಬೇಂಬಿ ಅಲ್ಲಿಂದ ಮುಂದೆ ನಡೆದ. ಅಳಿಲು ಅವನ ಹಾದಿಯನ್ನು ಅಡ್ಡಗಟ್ಟಿ "ಹಾಂ, ಹಾಂ,

ಸ್ವಲ್ಪ ಇರಿ. ಯಾಕೆ ಆಗಲೇ ಹೊರಟು ಬಿಟ್ಟಿರಿ. ನಿಮ್ಮೊಂದಿಗೆ ಏನೋ ಮಾತನಾಡಬೇಕೂಂತ ಬಂದು ಮತ್ತಾವುದೋ ಮಾತಿನಲ್ಲಿ ಬಿದ್ದು ಬಿಟ್ಟೆ" ಎಂದಿತು.

"ಏನದು ಹೇಳಿ" ಸಗೌರವದಿಂದ ಕೇಳಿದ ಬೇಂಬಿ.

ಏನೋ ಹೇಳಬೇಕೆಂದುಕೊಂಡು ಮರೆತು ಬಿಟ್ಟಿತ್ತು ಅಳಿಲು.

"ಏನೋ ಹೇಳಬೇಕೂಂತಿದ್ದೆನಲ್ಲಾ."

ಸರ್ರನೆ ಮರದ ಮೇಲೇರಿತು ಅಳಿಲು. ಕೊಂಬೆಗಳ ಮೇಲಿಂದ ಜರ ಜರನೆ ಇಳಿದುಬಂತು. ಅಂದವಾದ ಕುಚ್ಚುಬಾಲವನ್ನು ಅಲ್ಲಾಡಿಸುತ್ತಾ ಕುಳಿತುಕೊಂಡಿತು.

"ಹಠಾತ್ತನೆ ನೆನಪಾಯಿತು, ತಮ್ಮ ಕಿರೀಟ ತುಂಬ ಸುಂದರವಾಗಿದೆ. ಅದನ್ನೇ ಹೇಳಬೇಕು ಅಂದುಕೊಂಡಿದ್ದು ನಾನು" ಎಂದಿತು.

ಬೇಂಬಿ ತುಂಬಾ ಸಂತೋಷಪಟ್ಟ.

"ನಿಜವಾಗಿಯೂ !"

"ನಿಜ ಅಲ್ಲದೆ ಮತ್ತೇನು, ಇನ್ನೂ ಮೆಲ್ಲ ಕೇಳ್ತಿದೀರಲ್ಲಾ" ಎಂದು ತನ್ನ ಮುಂದಿನ ಕೈಗಳನ್ನು ಎದೆಗಾನಿಸಿಕೊಂಡಿತು.

"ಓಹೋ ಎಷ್ಟು ಚೆಂದ ನಿಮ್ಮ ಕಿರೀಟ ! ಎಷ್ಟು ಸೊಗಸಾಗಿ ಬೆಳೆದಿದೆ! ಇಂತಹ ಸುಂದರವಾದ ಕಿರೀಟಗಳು ಬಹಳ ಕಡಿಮೆ ಜನಕ್ಕೆ ಇರುತ್ತವೆ."

"ನಿಜವಾಗಿಯೂ'' ಎಂದ ಬೇಂಬಿ. ಅವನ ಉತ್ಸಾಹಕ್ಕೆ ಎಣೆಯಿಲ್ಲ ವಾಯಿತು. ಹುರುಪಿನಿಂದ ಒಂದುಸಲ ಮುಂದಕ್ಕೆ ಜಿಗಿದು ಬಾದಾಮಿ ಗಿಡಕ್ಕೆ ಡಿಕ್ಕಿ ಹೊಡೆದ. ಕೊಂಬುಗಳು ತಗುಲಿ ತೊಗಟೆ ಸೀಳಿ ಚೂರು-ಚೂರಾಗಿ ಕೆಳಗೆ ಬಿತ್ತು.

"ನಿಮ್ಮ ಜಾತಿಯಲ್ಲಿ ಇಷ್ಟು ಸುಂದರವಾದ ಕಿರೀಟ ಮತ್ತಾರಿಗೂ ಇಲ್ಲ. ಮುಂದಿನಾಯಕರಿಗೆ ಮಾತ್ರ ಇದೆಯಷ್ಟೆ. ಹಿಂದಿನ ಬೇಸಗೆಯಲ್ಲಿ ನಿಮ್ಮನ್ನ ನೋಡಿದವರಾರೂ ಈಗ ಗುರ್ತು ಹಿಡಿಯಲಾರರು. ಆ ಪುಟ್ಟ ಮಗುವೇ

ಈ ಯುವರಾಜನೇ ಅನ್ನಿಸುತ್ತೆ...ಈ ಕಿರೀಟ ''

ಮಾತಿನ ಮಧ್ಯದಲ್ಲಿಯೇ ಬೇಂಬಿ "ನಾನಿನ್ನು ಬರ್ತೀನಿ'' ಎಂದು ಅಲ್ಲಿಂದ ಓಡಿದ.

ಹಿಂದಿನ ವರ್ಷದ ವಿಷಯಗಳೇನನ್ನೂ ಬೇಂಬಿ ನೆನಪು ಮಾಡಿಕೊಳ್ಳು ತ್ತಿರಲಿಲ್ಲ. ಅವನ ಬದುಕಿನಲ್ಲಿ ಬಹಳ ಕಷ್ಟಗಳನ್ನು ಅನುಭವಿಸಿದ ವರ್ಷ ಅದು.

ಅಮ್ಮ ಕಾಣಸದಾದ ಮೇಲೆ ಬೇಂಬಿ ಎಷ್ಟೋ ಕಷ್ಟಗಳನ್ನು ಎದುರಿಸ ಬೇಕಾಯಿತು. "ಈ ಬದುಕೇ ಏಕಿನ್ನು'' ಅನ್ನಿಸುವಂತಾಗಿತ್ತು. ಆ ವರ್ಷದ ಚಳಿಗಾಲ ಮತ್ತಷ್ಟು ಕಷ್ಟಕೊಟ್ಟಿತು. ದಿನಗಳೆಯುವುದೇ ಕಷ್ಟ ವಾಗಿತ್ತು. ಚಳಿಗೆ ಮೈಯೆಲ್ಲಾ ನಡುಕ. ತಿನ್ನಲು ಏನೂ ಇರುತ್ತಿರಲಿಲ್ಲ. ಹಸಿವೋ ಹಸಿವು. ಇನ್ನು ವಸಂತ ಎಂಬುದು ಎಂದಿಗೂ ಬಾರದೇನೊ ಎನ್ನಿ ಸಿಬಿಟ್ಟಿತ್ತು. ನವೀನ ಚಿಕ್ಕಮ್ಮ ಇಲ್ಲದಿದ್ದಲ್ಲಿ ಆ ಚಳಿಗಾಲ ಕಳೆದು ಬದು ಕುಳಿಯುತ್ತಿರಲಿಲ್ಲ ಅವನು. ಅವನ ಹೊಣೆಯನ್ನೆಲ್ಲಾ ತಾನೇ ವಹಿಸಿಕೊಂಡಿ ದ್ದಳು. ತನ್ನ ಕೈಲಾದ್ದನ್ನೆಲ್ಲಾ ತಾನೇ ವಹಿಸಿಕೊಂಡಿದ್ದಳು. ತನ್ನ ಕೈಲಾದ್ದ ನ್ನೆಲ್ಲಾ ಮಾಡಿದಳು. ಆದರೂ ಬೇಂಬಿಗೆ ಒಂಟಿ ಭಾವನೆ. ಆಗಾಗ ಗೋಬೋನ ನೆನಪಾಗುತ್ತಿತ್ತು. ಮಿಕ್ಕ ಕಾಡಿನ ಜನಗಳಿಗೆಲ್ಲಾ ಇರುವಂತಹ ಕಷ್ಟ ಕಾರ್ಪಣ್ಯಗಳೇನೂ ಈಗ ಅವನಿಗೆ ಇಲ್ಲದಿರಬಹುದು. ತನ್ನ ಚಿಕ್ಕಂದಿನ ಗೋಬೋ ಎಷ್ಟು ಒಳ್ಳೆಯವನು! ಎಂತಹ ಉದಾತ್ತವಾದ ಹೃದಯ ಅವನದು ಎಂದು ಸದಾ ಗೋಬೋನ ಮರಣವನ್ನು ನೆನಸಿಕೊಂಡು ನಿಟ್ಟು ಸಿರು ಬಿಡುತ್ತಿದ್ದ.

ಫಲೀನಾ ಆಗಾಗ ಕಾಣಸಿಕೊಳ್ಳುತ್ತಿದ್ದಳು. ನಾಚಿಕೆಯಿಂದ ಸದಾ ಅವರಮ್ಮನ ಹಿಂದೆಯೇ ಇರುತ್ತಿದ್ದಳು.

ವಸಂತ ಮಾಸ ಪ್ರಾರಂಭವಾಗಿತ್ತು. ಗಾಳಿಯಲ್ಲಿನ ಥಂಡಿಹೋಗಿ ಸ್ವಲ್ಪ ಬಿಸಿ ಕಾಣಿಸಿದ ನಂತರ ಬೇಂಬಿಗೆ ಸ್ವಲ್ಪ ಧೈರ್ಯ ಬಂದಿತ್ತು. ಈಗ ಲೀಗ ತಲೆಯ ಮೇಲೆ ಕಿರೀಟ ಬೇರೆ ಬೆಳೆದಿತ್ತು. ಅದನ್ನು ಮರಗಳ ಬುಡಕ್ಕೆ

ತಾಗಿಸಿ ಉಜ್ಜಿ ಶುಭ್ರಪಡಿಸಿಕೊಂಡು ಗರ್ವಿಸುತ್ತಿದ್ದ. ಕಿರೀಟ ಬಂದ ಮೇಲೆ ಹೊಸ ಇಬ್ಬಂದಿ ಪ್ರಾರಂಭವಾಗಿತ್ತು.

ಕಿರೀಟಗಳಿದ್ದ ಮಿಕ್ಕ ಜಿಂಕೆಗಳು ಬೇಂಬಿಯನ್ನು ಕಂಡು ಅಸೂಯೆ ಪಡು ತ್ತಿದ್ದರು. ಅವನನ್ನು ಕಂಡ ಕೂಡಲೇ ಅಲ್ಲಿಂದ ಓಡಿಸುತ್ತಿದ್ದರು. ತನ್ನ ಮೇಲೆ ಅವರಿಗೇಕೆ ಅಷ್ಟು ಕೋಪ ಎನ್ನುವುದೇ ಅರ್ಥವಾಗುತ್ತಿರಲಿಲ್ಲ ಬೇಂಬಿಗೆ. ಅವರ ಕ್ರೌರ್ಯ ಅವನನ್ನು ತುಂಬಾ ಹೆದರುವಂತೆ ಮಾಡಿತ್ತು. ಅವರೊಂದಿಗೆ ಜಗಳವಾಡಲು ಧೈರ್ಯ ಸಾಲುತ್ತಿರಲಿಲ್ಲ. ಹೀಗಾಗಿ ಯಾರೂ ಓಡಾಡದ ಜಾಗಗಳಲ್ಲಿ ಒಬ್ಬಂಟಿಗನಾಗಿ, ಮೌನವಾಗಿ, ಉದಾಸೀನನಾಗಿ ತಿರು ಗಾಡುತ್ತಿದ್ದ.

ಒಳ್ಳೇ ಬಿಸಿಲು ಕಾಯುತ್ತಿರುವಾಗ ಅವನ ಹೃದಯ ಏನನ್ನೋ ಕಳೆದು ಕೊಂಡಂತೆ, ಬರಿದೋ ಬರಿದಾದಂತೆ, ವೇದನೆಯಿಂದ ತುಂಬಿದಂತಿರುತ್ತಿತ್ತು. ಫಲೀನಾಳಾಗಲೀ ಅವಳ ಸ್ನೇಹಿತರಾಗಲೀ ಕಾಣಿಸಿದರೆ ತುಂಬಾ ಸಂತೋಷ ವಾಗುತ್ತಿತ್ತು. ಅವನ ಮನಸ್ಸು ಅವರ ಕಡೆ ಸೆಳೆಯುತ್ತಿತ್ತು. ಅವರು ಹತ್ತಿರದಲ್ಲಿದ್ದಂತೆ ವಾಸನೆಯಿಂದ ತಿಳಿದರಾಗಲೀ, ಅವರ ಹೆಜ್ಜೆಯ ಗುರ್ತು ಗಳನ್ನು ಕಂಡರಾಗಲೀ ಅದೇ ಭಾವನೆಯುಂಟಾಗುತ್ತಿತ್ತು. ಬೇಂಬಿಯ ಮನಸ್ಸಿಗೆ ತುಂಬಾ ಬೇಜಾರಾದಾಗ ಅವರಿಗೋಸ್ಕರ ಹುಡುಕಿಕೊಂಡು ಹೋಗು ತ್ತಿದ್ದ. ಒಂದೊಂದು ಸಲ ಅವರು ಕಾಣಿಸುತ್ತಿರಲಿಲ್ಲ. ಆಗ ಮತ್ತೂ ಉದಾಸೀನನಾಗುತ್ತಿದ್ದ. ಏನನ್ನೋ ಕಳೆದುಕೊಂಡವನಂತೆ ಒಂಟಿಯಾಗಿ ಕಾಡಿ ನಲ್ಲಿ ಅಲೆದಾಡುತ್ತಿದ್ದ.

ಅದೃಷ್ಟ ಚೆನ್ನಾಗಿಲ್ಲದಿದ್ದರೆ ತಮ್ಮ ಜಾತಿಯ ಕಿರೀಟಧಾರಿಗಳು ಎದು ರಾಗುತ್ತಿದ್ದರು. ಅವರು ಬೇಂಬಿಯನ್ನು ನೋಡಿದರೆ ಸಾಕು. ಗುರ್ರೆನ್ನು ತ್ತಿದ್ದರು. ಧಾವಿಸಿ ಬಂದು, ಕೆಳಗೆ ಬೀಳಿಸಿ ಹೊಡೆದು ಕಾಲಿನಿಂದ ಒದ್ದು ವಿಧ-ವಿಧವಾಗಿ ಹಿಂಸಿಸುತ್ತಿದ್ದರು. ಓಡಿಸುತ್ತಿದ್ದರು. ರೋನೋ, ಕಾರೋ ಸಹ ಅದೇ ರೀತಿ ಮಾಡುತ್ತಿದ್ದುದು ಬೇಂಬಿಗೆ ಮತ್ತಷ್ಟು ದುಃಖವನ್ನುಂಟು ಮಾಡುತ್ತಿತ್ತು. ಮಿಕ್ಕವರಿಗಿಂತ ಅವರಿಬ್ಬರೇ ಬೇಂಬಿಯನ್ನು ಹೆಚ್ಚಾಗಿ ಹಿಂಸಿಸುತ್ತಿದ್ದರು.

ಅಂತಹ ಕೆಟ್ಟಕಾಲವನ್ನು ಅಳಿಲು ಯಾಕೆ ನೆನಪಿಗೆ ತರಬೇಕು. ಆ ಅವಮಾನವನ್ನೆಲ್ಲಾ ಮತ್ತೊಮ್ಮೆ ನೆನಪಿಗೆ ತಂದುಕೊಳ್ಳುವುದೇಕೆ ? ಅದರಿಂದಾಗಿಯೋ ಬೇಂಬಿಗೆ ಬೇಸರವೆನಿಸಿ ಆ ಮಾತುಗಳನ್ನು ಕೇಳಲು ಇಷ್ಟವಿಲ್ಲದಂತೆ ಮುಂದಕ್ಕೆಸಾಗಿ ಹೋದ.

ಬೇಂಬಿ ನಡೆಯುತ್ತಿದ್ದ ದಾರಿಯಲ್ಲಿ ಗೀಜಗಳೂ ಜೇನ್ನೊಣಗಳೂ ಚದರಿ, ಪೊದೆಗಳಿಂದ ಮೇಲಕ್ಕೆ ಹಾರಿದುವು. ಆಶ್ಚರ್ಯದಿಂದ ಪಿಸುಮಾತಿನಲ್ಲಿ ಮಾತನಾಡಿಕೊಂಡವು.

"ಯಾರೀತ ?"

ಮೈನಾ ಗಾಬರಿಯಿಂದ ಕೂಗಿತು "ಯಾರೀತ ?"

ಬೇಂಬಿ ಅದನ್ನೆಲ್ಲಾ ಲಕ್ಷ್ಯ ಮಾಡಲಿಲ್ಲ.

ಕೋಗಿಲೆ ಹಾಡತೊಡಗಿತ್ತು.

"ಕೂಹೂ, ಕೂಹೂ ಯುವ ರಾಜಾ,

ಕುಶಲವಾಗಿರುವೆಯಾ?"

ಅದನ್ನೂ ಲೆಕ್ಕಿಸಲಿಲ್ಲ ಬೇಂಬಿ.

ಸುತ್ತಮುತ್ತಲಿನ ಅರಣ್ಯ ಪ್ರಾಂತವೆಲ್ಲಾ ಸೂರ್ಯಕಾಂತಿಯಿಂದ ಧಗಧಗನೆ ಹೊಳೆಯುತ್ತಿತ್ತು. ಬೇಂಬಿ ಅದನ್ನು ಗಮನಿಸಲಿಲ್ಲ.

ಯಾವುದೋ ಆಲೋಚನೆಯಲ್ಲಿ ತನ್ನಷ್ಟಕ್ಕೆ ತಾನು ನಡೆದು ಹೋಗುತ್ತಿದ್ದ ಬೇಂಬಿಯು ಕಾಲಿನ ಕೆಳಗೆ ಏನೋ ಕದಲಿದಂತಾಯ್ತು. ತಟ್ಟನೆ ರೆಕ್ಕೆ ಒದರಿ ಬಣ್ಣ–ಬಣ್ಣದ ಕಂಠವನ್ನು ಕೊಂಕಿಸುತ್ತಾ ಕಾಡುಕೋಳಿ ಮೇಲಕ್ಕೆ ಹಾರಿತು. ಸ್ವಲ್ಪದರಲ್ಲಿ ಬೇಂಬಿಯ ಕಾಲು ಅದರ ಮೇಲೆ ಬೀಳುವುದನ್ನು ತಪ್ಪಿಸಿಕೊಂಡಿತ್ತು. ಅದು ಭೀತಿ, ಕೋಪಗಳಿಂದ ಕೂಗಿಕೊಂಡಿತು.

"ಸ್ವಲ್ಪ ನೋಡಿಕೊಂಡು ನಡೆಯಬಾರದೇನು ?"

ಬೇಬಿಗೆ ಅಯ್ಯೋ ಅನ್ನಿಸಿತು. ತಾನು ಹಾಗೆ ಮಾಡಿದುದಕ್ಕೆ ನೊಂದುಕೊಂಡ. ಅವನ ಪಕ್ಕದಿಂದ ಮತ್ತೊಂದು ಕಂಠ ಕೇಳಿಸಿತು.

"ನೀವು ದೊಡ್ಡವರು, ಏನು ಮಾಡಿದರೂ ನಡೆಯುತ್ತದೆ. ಮಧ್ಯದಲ್ಲಿ ನಮಗೇ ಎಲ್ಲಾ ಕಷ್ಟಗಳೂ .."

ಹಾಗಂದಿದ್ದು ಕಾಡುಕೋಳಿಯ ಹೆಂಡತಿ, ಅವಳು ಗೊಣಗುತ್ತಲೇ ಇದ್ದಳು. "ಪಾಪ ! ನಮ್ಮವರು ಎಷ್ಟು ಹೆದರಿದರೋ ಏನೋ. ನನಗೆ ಮಾತ್ರ ಕಡಿಮೆ ಹೆದರಿಕೆ ಆಯಿತೂಂತೀರಾ ? ಆದರೆ ಏಳಲು ಸಾಧ್ಯವಾಗದ ಪರಿಸ್ಥಿತಿ ಇಂತಹ ಸಮಯದಲ್ಲಿ ಯಾರಾದರೂ ಹೆದರಿಕೊಳ್ಳೋದೇ ಮತ್ತೆ ! ಸಧ್ಯಕ್ಕೆ ಆ ಹೆಜ್ಜೆ ನನ್ನ ಮೇಲೆ ಬೀಳಲಿಲ್ಲ, ಅದೃಷ್ಟ."

ಬೇಂಬಿಗೆ ನಾಚಿಕೆಯಾಯಿತು.

"ಕ್ಷಮಿಸಿ, ನಾನು ಬೇಕೂಂತ ಹಾಗೆ ಮಾಡಲಿಲ್ಲ."

ಈ ಮಾತಿನಿಂದ ಕಾಡುಕೋಳಿಯ ಹೆಂಡತಿಗೆ ಸ್ವಲ್ಪ ಸಮಾಧಾನವಾಯಿತು "ಹೋಗಲಿ ಬಿಡಿ, ನೀವು ಬೇಕೂಂತ ಮಾಡಿದಿರಿ ಅನ್ನಲಿಲ್ಲ ನಾನು, ನನಗೂ–ನಮ್ಮವರಿಗೂ ಪುಕ್ಕಲುತನ ಜಾಸ್ತಿ. ಸ್ವಲ್ಪ ಹೆಚ್ಚೂ–ಕಡಿಮೆ ಆದರೆ ಕಂಗಾಲಾಗಿ ಬಿಡುತ್ತೇವೆ. ಅದು ನಿಮಗೂ ಗೊತ್ತಿದ್ದ ವಿಷಯ ತಾನೇ ?" ಎಂದಿತು.

ಬೇಂಬಿಗೆ ಅದೆಲ್ಲಾ ಏನೂ ಗೊತ್ತಿಲ್ಲ. ತನ್ನ ಪಾಡಿಗೆ ತಾನು ಮುಂದಕ್ಕೆ ನಡೆದ.

ಅವನ ಸುತ್ತಮುತ್ತಲಿನ ಅರಣ್ಯದ ವಾತವರಣ ಈ ದಿನ ತುಂಬಾ ಉಲ್ಲಾಸಕರವಾಗಿತ್ತು. ಪಕ್ಷಿಗಳು ಕಲಕಲರವ ಮಾಡುತ್ತಿದ್ದವು. ಬಿಸಿಲು ಕಾಯುತ್ತಿತ್ತು. ಗಿಡಗಳೂ ಪೊದೆಗಳೂ ಸೊಂಪಾಗಿ ಕಳೆಯಾಗಿದ್ದುವು. ನೆಲದ ಮೇಲಿಂದ ಮಧುರವಾದ ವಾಸನೆ ಬರುತ್ತಿತ್ತು.

ಯೌವನದ ಅತಿಶಯ ಬೇಂಬಿಯ ಶರೀರವನ್ನೆಲ್ಲಾ ಆವರಿಸಿತು. ಠೀವಿಯಿಂದ ದೃಢವಾದ ಹೆಜ್ಜೆಗಳನ್ನಿಡುತ್ತಾ ಮುಂದಕ್ಕೆ ಸಾಗಿದ.

ದೇವದಾರು ತೋಪಿನ ಬಳಿಗೆ ಬಂದ ನಂತರ ಕಾಲಿನಿಂದ ನೆಲವನ್ನು ಕೆರೆಯತೊಡಗಿದ. ಕಾಲಿನ ಗೊರಸುಗಳು ಸೀಳಿ ಸಣ್ಣಗೆ ಹರಿತವಾಗಿದ್ದುವು.

ಅವುಗಳ ತಾಡನೆಯಿಂದಾಗಿ ಹುಲ್ಲೆಲ್ಲಾ ಮಣ್ಣಿನ ಸಹಿತವಾಗಿ ಕಿತ್ತುಬಂದು ಮಳೆಯ ತುಂತುರಿನಂತೆ ಪಕ್ಕದಲ್ಲಿ ಬಿದ್ದಿತ್ತು.

ಅಲ್ಲಿಯೇ ಪಕ್ಕದಲ್ಲಿ ಬಿಲಗಳನ್ನು ತೋಡುತ್ತಿದ್ದ ಎರಡು ಇಲಿಗಳು ಆಶ್ಚರ್ಯದಿಂದ ಬೇಂಬಿಯ ಕಡೆ ನೋಡುತ್ತಿದ್ದುವು,

"ಹೀಗೇನೇ ಬಿಲತೋಡೋದು ? ನಾನೆಲ್ಲೂ ಕಂಡಿಲ್ಲಮ್ಮ" ಎಂದಿತು ಹೆಣ್ಣು ಇಲಿ, ಗಂಡನೊಂದಿಗೆ. ಅಕ್ಕಿ ಕಾಳಿನಂತಹ ಬಿಳಿಯ ಹಲ್ಲು ಕಾಣು ವಂತೆ ನಕ್ಕಿತು ಗಂಡಿಲಿ.

"ಅವನಿಗೇನು ಗೊತ್ತು ಆ ಕೆಲಸ. ಕೈಲಾಗದ ಕೆಲಸಗಳಲ್ಲಿ ಕೈಯಿಟ್ಟರೆ ಹೀಗೇ ಆಗೋದು."

ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಬೇಂಬಿ ತಲೆಯೆತ್ತಿ ನೋಡಿದ. ಕಿವಿ ನಿಮಿರಿಸಿ ಚುರುಕಾಗಿ ನೋಡಿದ. ಪೊದೆಗಳ ಆಚೆ ಯಾರೋ ಕೆಂಪಗೆ ಕಾಣಿ ಸಿದರು. ಕಿರೀಟದ ಕೊನೆಗಳು ಬಿಸಿಲಿಗೆ ಥಳಥಳ ಹೊಳೆದುವು. ವಾಸನೆ ನೋಡಿದ. "ಯಾರು ನನ್ನನ್ನು ಹಿಂಬಾಲಿಸುತ್ತಿರುವುದು ? ರೋನೋ ಇರಬಹುದೇ, ಇಲ್ಲ ಕಾರೋ ಆಗಿರಬಹುದು. ನನ್ನ ಪಾಡಿಗೆ ನಾನು ಸರಿದು ಹೋಗ್ತಿದೀನೀಂತ ಗರ್ವ ಹೆಚ್ಚಾಗಿದೆ ಇವರಿಗೆ. ಒಂದು ಸಲ ನನ್ನ ಪ್ರತಾಪ ತೋರಿಸಿದ ಹೊರತು ಪ್ರಯೋಜನವಿಲ್ಲ... ಎಂದುಕೊಳ್ಳುತ್ತಾ ಬೇಂಬಿ ಸರ್ರನೆ ಮುಂದಕ್ಕೆ ಧಾವಿಸಿದ.

ಪೊದೆಗಳು ಗರಗರನೆ ಶಬ್ದ ಮಾಡಿದುವು. ಒಣಕೊಂಬೆಗಳು ಬೇಂಬಿ ಯ ಕಾಲಕೆಳಗೆ ಬಿದ್ದು ಪಟಪಟನೆ ಸದ್ದು ಮಾಡಿದವು. ಎರಡು ನೆಗೆತಗಳಲ್ಲಿ ಅವನು ಶತ್ರುವನ್ನು ಸಮೀಪಿಸಿದ. ಅವನು ಯಾರೆಂದು ಸಹ ಬೇಂಬಿ ನೋಡಲಿಲ್ಲ. "ನೋಡುವುದೇನು ಬಂತು ? ಒಂದುಸಲ ಸರಿಯಾಗಿ ಬುದ್ಧಿ ಕಲಿಸಿದರೆ ಸರಿ. ಮತ್ತೆ ಇನ್ನೊಂದು ಸಲ ನನ್ನ ತಂಟೆಗೆ ಬರದಹಾಗೆ ಮಾಡ ಬೇಕು" ಎಂದುಕೊಳ್ಳುತ್ತಾ ಬೇಂಬಿ ತಲೆಯನ್ನು ಬಾಗಿಸಿದ. ಕೊಂಬುಗ ಳನ್ನು ಭಲ್ಲೆಗಳಂತೆ ಚಾಚಿದ. ಕತ್ತಿನಲ್ಲಿ ಬಲವನ್ನೆಲ್ಲಾ ಒಟ್ಟುಗೂಡಿಸಿದ, ಒಂದು ಕ್ಷಣದಲ್ಲಿ ಅವನು ಹಾಯಲು ಸಿದ್ಧನಾದ.

ಶತ್ರುವಿನ ಶರೀರದ ವಾಸನೆ ಬರುತ್ತಿತ್ತು. ಅವನ ಹೊಟ್ಟೆಯ ಮೇಲೆ ಹೊಡೆಯಲು ಅವಕಾಶ ಸರಿಯಾಗಿತ್ತು. ಬೇಂಬಿ ಸರ್ರನೆ ಮುಂದಕ್ಕೆ ಧಾವಿಸಿ ಬಂದ.

ಸಮಯಕ್ಕೆ ಸರಿಯಾಗಿ ಶತ್ರು ಪಕ್ಕಕ್ಕೆ ಸರಿದ. ಬೇಂಬಿ ಆ ಜೋರಿನಲ್ಲಿ ಮುಂದಕ್ಕೆ ಸರಿದು ಹೋದ. ಶತ್ರುವಿಗೇನೂ ಪೆಟ್ಟು ಬೀಳಲಿಲ್ಲ.

ಮಿತಿಮೀರಿದ ಕೋಪದಿಂದ ಬೇಂಬಿ ಸರ್ರನೆ ತಿರುಗಿ ನೋಡಿದ. ಆ ಶತ್ರು ಮತ್ತಾರೂ ಆಗಿರದೆ ಮುದಿನಾಯಕನಾಗಿದ್ದ.

ಬೇಂಬಿ ನಿಶ್ಚೇಷ್ಟಿತನಾದ ! ತನ್ನಿಂದ ಮಹಾಪರಾಧ ನಡೆದುಹೋದಂತೆ ನಾಚಿ ನೀರಾದ. ತಲೆತಗ್ಗಿಸಿ ಕಾಲಿನ ಗೊರಸಿನಿಂದ ನೆಲದ ಮೇಲೆ ಗೀಚುತ್ತಾ ನಿಂತ.

"ಸುಮ್ಮನಾದಿಯೇಕೆ ?" ಮುದಿನಾಯಕ ಶಾಂತವಾಗಿ ಕೇಳಿದ.

ಆತನ ಪ್ರಶಾಂತವಾದ ಗಂಭೀರ ಕಂಠ ಎಂದಿನಂತೆ ದರ್ಪದಿಂದ ಕೂಡಿತ್ತು. ಬೇಂಬಿಯ ಹೃದಯ ಬಾಯಿಗೆ ಬಂದಂತಾಯಿತು.

"ಹುಂ, ಹೇಳು ಸುಮ್ಮನಾದಿಯೇಕೆ ?" ಮತ್ತೆ ಕೇಳಿದ ನಾಯಕ.

"ರೋಸ್ನೋ ಅಂದು ಕೊಂಡೆ" ಬೇಂಬಿ ಅಸ್ಪಷ್ಟವಾಗಿ ಗೊಣಗಿದ.

ನಾಯಕ ಪರ್ವತದಂತೆ ಅಚಲವಾಗಿ ನಿಂತಿದ್ದ. ತಲೆ ನೆರತಿದ್ದರೂ ಆತನ ಗಂಭೀರವಾದ ಕಪ್ಪು ಕಣ್ಣುಗಳು ಹೊಳೆಯುತ್ತಿದ್ದವು.

"ಓ, ಹಾಗೋ, ನನ್ನೊಂದ್ದಿಗಾದರೆ ಹೋರಾಡುವುದಿಲ್ಲವೇನು? "

ಬೇಂಬಿ ತಲೆಯೆತ್ತಿ ಮುದಿನಾಯಕನ ಕಡೆ ನೋಡಿದ. ಭಯ, ಭಕ್ತಿ, ಗೌರವ, ಪ್ರೀತಿ" ಎಲ್ಲಾ ಭಾವನೆಗಳು ಅವನ ಹೃದಯದಲ್ಲಿ ಕದಲಾಡಿದವು.

"ನಿಮ್ಮನ್ನು ಕಂಡರೆ ನನಗೆ ತುಂಬಾ ಪ್ರೀತಿ" ಎಂದು ಹೇಳಬೇಕೆಂದು ಕೊಂಡ. ಆದರೆ ನಾಲಗೆ ಸಹಕರಿಸಲಿಲ್ಲ.

"ನನಗೆ ಗೊತ್ತಿಲ್ಲ" ಎಂದು ಮಾತ್ರ ಹೇಳಿದ. ನಾಯಕ ತನ್ನ ನೋಟ

ದಿಂದಲೇ ಬೇಂಬಿಯನ್ನು ತಡವಿದ. "ನಿನ್ನನ್ನು ನೋಡಿ ತುಂಬಾ ದಿನ ವಾಯಿತು. ತುಂಬಾ ದೊಡ್ಡವನಾಗಿದ್ದೀಯ."

ಆ ಮಾತುಗಳನ್ನು ಕೇಳಿ ಬೇಂಬಿಗೆ ತುಂಬಾ ಸಂತೋಷವಾಯಿತು. ಆದರೂ ಮಾತನಾಡದೆ ಮೌನವಾಗಿ ನಿಂತ.

ನಾಯಕ ಬೇಂಬಿಯನ್ನು ಪರಿಶೀಲಿಸಿ ನೋಡುತ್ತಾ ಹತ್ತಿರಬಂದ.

"ಧೈರ್ಯವಂತನಾಗಬೇಕು" ಎಂದು ಹೇಳುತ್ತಾ ಸರ್ರನೆ ಹಿಂತಿರುಗಿ ಒಂದು ಕ್ಷಣದಲ್ಲಿ ಅದೃಶ್ಯನಾದ. ಬೇಂಬಿ ಬಹಳ ಹೊತ್ತಿನವರೆಗೂ ಚಲನೆ ಯಿಲ್ಲದೆ ನಿಂತಲ್ಲಿಯೇ ನಿಂತಿದ್ದ...

ಬೇಸಿಗೆ ಬಂದಿತ್ತು. ಇದುವರೆಗೂ ಆಗಾಗ ಸಣ್ಣದಾಗಿ ಒಳಗೊಳಗೇ ಅವನನ್ನು ಕೊರೆಯುತ್ತಿದ್ದ ಕಳವಳ, ಬೇಂಬಿಯನ್ನು ಈಗ ಪೂರ್ತಿಯಾಗಿ ಆವರಿಸಿತ್ತು. ಅವನ ರಕ್ತ ತಕತಕನೆ ಕುದಿಯುತ್ತಿತ್ತು. ಶರೀರ ಸೆಟೆದು ಕೊಳ್ಳುತ್ತಿತ್ತು. ಒಂದುಕ್ಷಣ ಸಹ ವಿಶ್ರಾಂತಿಯೆಂಬುದಿಲ್ಲದೆ, ತನಗೇನು ಬೇಕೆಂದೂ ತಿಳಿಯದೆ ದಿಕ್ಕುತೋಚದೆ ಅರಣ್ಯದಲ್ಲೆಲ್ಲಾ ಸುತ್ತಾಡಿದ.

ಒಂದು ದಿನ ಫಲೀನಾ ಕಾಣಿಸಿದಳು. ಆಕಸ್ಮಾತ್ತಾಗಿ ಕಾಣಿಸಿದ್ದ ರಿಂದಲೋ ಏನೋ ಅವನಿಗೆ ತುಂಬಾ ಸಂತೋಷವಾಯಿತು. ವಿಚಿತ್ರವಾದ ಅನುಭೂತಿಯಿಂದ ಅವನ ಹೃದಯ ತುಂಬಿ ಬಂತು. ಫಲೀನಾಳ ಎದುರಾಗಿ ನಿಂತು.

"ಫಲೀನಾ, ನೀನೆಷ್ಟು ಚೆಲುವೆಯಾಗಿದ್ದೀ" ಎಂದ.

"ಓ, ಪರವಾಯಿಲ್ಲ, ಗುರ್ತು ಹಿಡಿದೆಯಲ್ಲಾ ನನ್ನನ್ನ."

"ಗುರ್ತು ಹಿಡಿಯುವುದೇ? ಏನು ಹೇಳುತ್ತೀ ನೀನು? ಚಿಕ್ಕಂದಿನ ಒಡನಾಡಿಗಳಲ್ಲವೇ ನಾವು?"

ಫಲೀನಾ ನಿಟ್ಟುಸಿರು ಬಿಟ್ಟಳು.

"ನಾವು ಒಬ್ಬರನ್ನೊಬ್ಬರು ನೋಡಿ ಎಷ್ಟೊಂದು ದಿನವಾಯಿತಲ್ಲ!

ಒಬ್ಬರಿಗೊಬ್ಬರು ಪರಕೀಯರಾದಂತೆನಿಸುತ್ತಿದೆ" ಎಂದಳು ಫಲೀನಾ.

ಅವಳ ಕಂಠದಲ್ಲಿ ಹಿಂದಿನ ಸ್ನೇಹ, ಆಪ್ಯಾಯತೆ ಕಾಣಿಸಿತು. ಇಬ್ಬರೂ ಒಬ್ಬರನ್ನೊಬ್ಬರು ಕೂಗುತ್ತಾ ನಿಂತರು.

"ಇಗೋ, ಈ ದಾರಿಯಲ್ಲಿ ನಾವು ಬಹಳಸಲ ನಡೆದಿದ್ದೀವಿ ಅಲ್ಲವೇ ? ಆಗಿನ್ನೂ ನಾವು ತುಂಬಾ ಚಿಕ್ಕವರು" ಎಂದ ಬೇಂಬಿ.

"ಹೌದು, ಈ ದಾರಿಯಲ್ಲಿ ಹೋದರೆ ಮೈದಾನ ಸಿಕ್ಕುತ್ತೆ."

ಮೈದಾನದಲ್ಲಿಯೇ ನಾವು ಮೊದಲಬಾರಿ ಭೇಟಿಯಾಗಿದ್ದು, ನೆನಪಿದೆಯೇ?"

"ಇಲ್ಲದೆ ಏನು ? ನಾನೂ ಗೋಬೋ ನಿನ್ನನ್ನು ನೋಡಿದೆವು" ಎಂದ ವಳೇ ಗೋಬೋನನ್ನು ನೆನಸಿಕೊಂಡು ನಿಟ್ಟುಸಿರುಬಿಟ್ಟಳು ಫಲೀನಾ.

ಬೇಂಬಿ ಸಹ ದೀರ್ಘವಾಗಿ ನಿಟ್ಟುಸಿರುಬಿಟ್ಟ. ಇಬ್ಬರೂ ಚಿಕ್ಕಂದಿನ ವಿಷಯಗಳನ್ನು ಒಂದೊಂದಾಗಿ ನೆನಪು ಮಾಡಿಕೊಂಡರು.

"ನಿನಗಿದು ನೆನಪಿದೆಯೇ ?"

"ನಿನಗದು ಜ್ಞಾಪಕ ಇದೆಯೇ ?"

"ಇಬ್ಬರಿಗೂ ಎಲ್ಲಾ ವಿಷಯಗಳೂ ನೆನಪಿದ್ದಂತೆಯೇ ಇತ್ತು. ಆ ನೆನಪುಗಳು ಅವರಿಗೆಷ್ಟೋ ಸಂತೋಷವನ್ನುಂಟು ಮಾಡಿದುವು.

"ಆ ಮೈದಾನದಲ್ಲಿ ನಾವು ಕಣ್ಣು ಮುಚ್ಚಾಲೆ ಆಡುತ್ತಿದ್ದೆವು."

"ಹಾಂ, ಹೌದು" ಎಂದು ಫಲೀನಾ ಮಿಂಚಿನಂತೆ ಪಕ್ಕಕ್ಕೆ ನೆಗೆದಳು.

ಬೇಂಬಿ ಒಂದು ಕ್ಷಣ ದಂಗಾದ. ಮರುಕ್ಷಣ ಸಂತೋಷದಿಂದ ಕೂಗಿದ.

"ಏಯ್ ಫಲೀನಾ, ನಿಲ್ಲು ಬಂದೆ."

"ಉಹೂಂ, ನನಗೆ ತುಂಬಾ ಕೆಲಸವಿದೆ." ಎಂದು ತುಂಟತನದಿಂದ ಕೂಗುತ್ತಾ, ಪೊದೆಗಳ ಮೇಲಿಂದ ಹುಷಾರಾಗಿ ಹಾರಿ ನೆಗೆದಳು. ಹುಲ್ಲಿನಲ್ಲಿ ಪಲ್ಟಿ ಹೊಡೆದಳು. ಬೇಂಬಿ ಅವಳ ಹಿಂದೆ ಬಿದ್ದ. ಒಂದೇ ನೆಗೆತದಲ್ಲಿ ಅವಳನ್ನು ದಾಟಿ ದಾರಿಗಡ್ಡವಾಗಿ ನಿಂತ.

ಮತ್ತೆ ಇಬ್ಬರೂ ಮೈಗೆ ಮೈತಾಗಿಸುತ್ತಾ ನಿಂತು ಹರಟೆ ಹೊಡೆದರು.

ಸಕ್ಕರು. ಅವರಿಬ್ಬರಿಗೂ ತುಂಬಾ ಸಂತೋಷವಾಗಿತ್ತು.

ಮಾತನಾಡುತ್ತ, ಆಡುತ್ತಲೇ ಫಲೀನಾ ಅಷ್ಟೆತ್ತರ ಹಾರಿ ಮೈದಾನ ದಲ್ಲಿ ಅಡ್ಡವಾಗಿ ಓಡಿದಳು. ಬೇಂಬಿ ಅವಳ ಹಿಂದೆ ಓಡಿದ. ಆದರೆ ಫಲೀನಾ ಅಷ್ಟು ಸುಲಭವಾಗಿ ಅವನ ಕೈಗೆ ಸಿಕ್ಕಲಿಲ್ಲ, ಸಿಕ್ಕಂತೆಯೇ ಸಿಕ್ಕಿ ತಪ್ಪಿಸಿಕೊಂಡಳು.

"ನಿಲ್ಲು, ನಿಲ್ಲೂ ಅಂದರೆ ಕೇಳಬೇಕು." ನಿನಗೊಂದು ವಿಷಯ ಹೇಳ ಬೇಕು." ಬೇಂಬಿ ಬೇಡಿಕೊಂಡ.

ಫಲೀನಾ ನಿಂತಳು.

"ಏನು ಮಾತು, ಹೇಳು ಮತ್ತೆ."

ಬೇಂಬಿ ಮೌನವಾಗಿದ್ದ.

"ಏನು ಇಲ್ಲ ಹೇಳೋಕೆ, ಸುಮ್ಮ ಸುಮ್ಮನೆ ನಿಲ್ಲು ಅಂದಿದೀಯ." ಎನುತ್ತಾ ಫಲೀನಾ ಮುಂದಕ್ಕೆ ಹೆಜ್ಜೆ ಹಾಕಿದಳು.

"ಇಲ್ಲ, ನಿಜವಾಗಿ ಬಹಳ ದಿನಗಳಿಂದ ನಿನಗೊಂದು ಮಾತು ಹೇಳಬೇಕು ಅಂತಿದೀನಿ ನಿಂತುಕೋ ಮತ್ತೆ..." ಹೇಳು, ಹಾಗಾದರೆ "

"ಮತ್ತೆ, ನನಗೆ... ನನಗೆ...." ಎಂದು ತಡವರಿಸಿದ ಬೇಂಬಿ.

"ಹಂ....ಏನು ನಿನಗೆ ಅಂದರೆ..."ಎಂದಳು ಫಲೀನಾ ಹುಬ್ಬೇರಿಸಿ.

"ನಿನಗೆ ನನ್ನ ಮೇಲೆ ಇಷ್ಟ ಇದೆಯಾ ?" ಅವಳು ಆಶ್ಚರ್ಯದಿಂದ ಬೇಂಬಿಯು ಕಡೆ ನೋಡಿದಳು, ಅವಳ ಸುಂದರವಾದ ಕಣ್ಣುಗಳು ಮಿಂಚಿ ನಂತೆ ಹೊಳೆದವು. ಮರುಕ್ಷಣ ನಾಚಿ ತಲೆ ತಗ್ಗಿಸಿದಳು.

"ನಂಗೊತ್ತಿಲ್ಲಪ್ಪಾ."

"ಓ ಗೊತ್ತಿಲ್ಲವೇನು ? ಹಾಗಾದರೆ ಹೇಗೆ ? ಗೊತ್ತಾಗಬೇಕು. ನನ್ನ ಮಟ್ಟಿಗೆ ನನಗೆ ನೀನೂ ಅಂದರೆ ಪ್ರಾಣ...ಮತ್ತೆ ನಿನಗೆ...."

"ಇಷ್ಟಾನೇ ಇರಬೇಕು ಮತ್ತೆ..."

"ಮತ್ತೆ ನಾವಿಬ್ಬರೂ ಜತೆಯಾಗಿರೋಣವೆ ?"

"ಕೇಳಬೇಕಾದ ರೀತಿಯಲ್ಲಿ ಕೇಳಿದರೆ..." ಎಂದು ನಕ್ಕಳು ಫಲೀನಾ.

"ಫಲೀನಾ, ನಿನ್ನನ್ನು ನಾನು ತುಂಬಾ ತುಂಬಾ ಪ್ರೀತಿಸುತ್ತೇನೆ. ಅದನ್ನು ವಿವರಿಸಲು ನನ್ನಲ್ಲಿ ಮಾತುಗಳೇ ಇಲ್ಲ. ನೀನು ನನ್ನೊಂದಿಗೇ ಇರಲಾರೆಯಾ ?" ಬೇಂಬಿ ಮೃದುವಾಗಿ ಕೇಳಿದ.

ಆ ಮಾತುಗಳಿಂದ ಅವಳಿಗೆ ತೃಪ್ತಿಯಾಯಿತು. ತಲೆ ಆಡಿಸಿ, ನಾಚಿ ಓರೆ ನೋಟ ಬೀರಿದಳು.

ಬೇಂಬಿ ಸಂತೋಷದಿಂದ ಕುಣಿದು ಕುಪ್ಪಳಿಸಿದ.

ಫಲೀನಾ ಮುಂದುಮುಂದಾಗಿ ನಡೆಯುತ್ತಿದ್ದ. ಬೇಂಬಿ ಅವಳನ್ನು ತಾಗುತ್ತಾ ಪಕ್ಕಪಕ್ಕದಲ್ಲಿಯೇ ನಡೆಯುತ್ತಿದ್ದ. ಅಷ್ಟರಲ್ಲಿ ಅವಳು ಪೊದೆ ಮರೆಗೆ ನೆಗೆದಳು. ಬೇಂಬಿಯೂ ಅವಳ ಹಿಂದೆ ಹೋಗುವಷ್ಟರಲ್ಲಿ ಪೊದೆಗಳಲ್ಲಿ ಗಲಗಲ ಸದ್ದಾಯಿತು. ಕಾರೋ ಕೋಪದಿಂದ ಮುಂದೆ ಬಂದು ಬೇಂಬಿಯ ದಾರಿಗೆ ಅಡ್ಡಲಾಗಿ ನಿಂತ.

"ನಿಲ್ಲು" ಎಂದು ಗದರಿಸಿದ.

ಫಲೀನಾಳ ಜತೆಗಿನ ಪ್ರಪಂಚದಲ್ಲಿಯೇ ವಿಹರಿಸುತ್ತಿದ್ದ ಬೇಂಬಿ ಕಾರೋನನ್ನು ಗಮನಿಸಿರಲಿಲ್ಲ.

"ದಾರಿಯಲ್ಲಿ ಅಡ್ಡ ಬರಬೇಡ, ನಿನ್ನೊಂದಿಗೆ ವಾದಿಸುವಷ್ಟು ಪುರಸೊತ್ತಿಲ್ಲ ನನಗೆ" ಎಂದ ಬೇಂಬಿ ನಿಧಾನವಾಗಿ.

ಕಾರೋ ಕೋಪದಿಂದ ಕೂಗಿದ.

"ಎಲ್ಲಿಗೆ ಹೋಗುತ್ತಿ ? ಹೆಜ್ಜೆ ಮುಂದಿಟ್ಟರೆ ಮೂಳೆ ಮುರೀತೀನಿ. ಫಲೀನಾಳನ್ನು ನೀನು ನೋಡಲೂ ಬಾರದು. ಹೊರಟು ಹೋಗು

ಇಲ್ಲಿಂದ..."

ಬೇಂಬಿ ತನ್ನ ಸ್ವಪ್ನ ಲೋಕದಿಂದ ಮರಳಿದ. ಅವನಲ್ಲಿ ನಿಶ್ಪ್ರಾಣವಾಗಿದ್ದ ಕ್ರೋಧಾಗ್ನಿ ಈ ಮಾತಿನಿಂದ ಪ್ರಜ್ವಲಿಸಿತು. ಅವನ ತುಟಿ ಕಂಪಿಸಿತು. ಅಷ್ಟು ದಿನಗಳಿಂದ ತನ್ನನ್ನು ಅನ್ಯಾಯವಾಗಿ ನಿರ್ದಯೆಯಿಂದ ಹಿಂಸಿಸಿ, ಅವಮಾನಿಸಿದ ಘಟನೆಗಳು ನೆನಪಾದುವು. ಬೇಂಬಿ ಮತ್ತೇನೂ ಮಾತನಾಡಲಿಲ್ಲ. ತಲೆ ಬಾಗಿಸಿದ. ಒಂದೇ ಉಸುರಿಗೆ ಕಾರೋನ ಮೇಲೆ ಬಿದ್ದ. ಬಲವನ್ನೆಲ್ಲಾ ಉಪಯೋಗಿಸಿ ತಿವಿದ.

ಅನಿರೀಕ್ಷಿತವಾದ ಬೇಂಬಿಯ ಹೊಡೆತದಿಂದ ಕಾರೋ ದಿಗ್ಭ್ರಾಂತಿ ಹೊಂದಿದ. ತನಗೇನಾಗುತ್ತಿದೆಯೆಂಬುದನ್ನು ತಿಳಿದುಕೊಳ್ಳುವ ಮೊದಲೇ ನೆಲದ ಮೇಲೆ ಅಂಗಾತ ಬಿದ್ದು ಬಿಟ್ಟ. ಮತ್ತೆ ಚೇತರಿಸಿಕೊಂಡು ಎದ್ದು ನಿಲ್ಲುತ್ತಿರುವಷ್ಟರಲ್ಲಿಯೇ ಬೇಂಬಿ ಕೊಟ್ಟ ಎರಡನೆಯ ಪೆಟ್ಟು ಮತ್ತಷ್ಟು ರಭಸವಾಗಿ ಬಂದು ತಗುಲಿತು, ಕಾರೋ ಕೆಳಗೆ ಬಿದ್ದುಬಿಟ್ಟ. ಅಸಾಹಯಕತೆ, ಭೀತಿಗಳಿಂದ ಕಂಗಾಲಾಗಿ "ಬೇಂಬಿ" ಎಂದ.

ಬೇಂಬಿ ಅವನ ಕೂಗನ್ನು ಕೇಳಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅವನು ಮತ್ತೊಂದು ಸಲ ಕೂಗುತ್ತಿರುವಾಗಲೇ ಮೂರನೆಯ ಪೆಟ್ಟು ಬಲವಾಗಿ ಬಿತ್ತು. ಆ ಪೆಟ್ಟಿನಿಂದ ಅವನ ಕಣ್ಣು ಕತ್ತಲಿಟ್ಟಿತ್ತು. ಮತ್ತೆ ಕಣ್ತೆಗೆಯುವಷ್ಟರಲ್ಲಿ ಬೇಂಬಿ ಮತ್ತೊಂದು ಸಲ ಅವನ ಮೇಲೆ ಬೀಳಲು ಸಿದ್ಧನಾಗುತ್ತಿದ್ದ. ಕಾರೋ ಇನ್ನು ಇಲ್ಲಿದ್ದು ಪ್ರಯೋಜನವಿಲ್ಲ ಎಂದುಕೊಂಡಿದ್ದೇ ತಡ, ಥಟ್ಟನೆ ಮೇಲೆದ್ದು ಒಂದೇ ಉಸಿರಿನಲ್ಲಿ ಕಾಲಿಗೆ ಬುದ್ಧಿ ಹೇಳಿದ. ಬೇಂಬಿ ಅವನ ಹಿಂದೆ ಬಿದ್ದ. ಸಿಕ್ಕಿದರೆ ಕೊಂದುಬಿಡುತ್ತಾನೆನೋ ಎಂಬಷ್ಟು ಹೆದರಿಕೆಯಾಯಿತು ಕಾರೋಗೆ. ತನ್ನಲ್ಲಿದ್ದ ಶಕ್ತಿಯನ್ನೆಲ್ಲಾ ಒಟ್ಟು ಗೂಡಿಸಿ, ಪೊದೆಗಳ ಮೇಲಿನಿಂದ ಹಾರುತ್ತಾ ಕ್ಷಣ ಮಾತ್ರದಲ್ಲಿ ಕಾಣದಾದ.

ಬೇಂಬಿ ಥಟ್ಟನೆ ನಿಂತುಬಿಟ್ಟ. ಕಿವಿಗಳನ್ನು ನಿಮಿರಿಸಿ ಕೇಳಿದ. ಸರ್ರನೆ ಹಿಂತಿರುಗಿ ಫಲೀನಾ ಇದ್ದ ಕಡೆಗೆ ಓಡಿದ. ಫಲೀನಾ ಅವಳ ಹಿಂದೆ ರೋನೋ ಕಾಣಿಸಿದರು. ಬೇಂಬಿಗೆ ತುಂಬಾ ಕೋಪ ಬಂತು.

"ರೋನೋ...."

ರೋನೋ ನಿಂತು ಕೇಳಿದ.

"ನನ್ನನ್ನು ಕೂಗಿದೆಯಾ ? ಏನಾದರೂ ಕೆಲಸವಿದೆಯೇನು ನನ್ನೊಂದಿಗೆ ?" ಎಂದು ಕೇಳಿದ ಏನೂ ಅರಿಯದವನಂತೆ.

ಬೇಂಬಿ ತನ್ನ ಸಿಟ್ಟನ್ನು ನುಂಗಿಕೊಳ್ಳುತ್ತಾ ಹಲ್ಲು ಕಚ್ಚಿ ಹೇಳಿದ.

"ಫಲೀನಾಳನ್ನು ಬಿಟ್ಟು ತಕ್ಷಣ ಹೊರಟು ಹೋಗು."

"ಅಬ್ಬಾ, ಆಸೆಗೇನೂ ಕಡಿಮೆಯಿಲ್ಲ, ದೊಡ್ಡೋನಾಗಿದೀಯ ಮತ್ತೆ..." ಎಂದ ವ್ಯಂಗ್ಯವಾಗಿ ರೋನೋ.

ಬೇಂಬಿ ತನ್ನ ಕೋಪವನ್ನು ನುಂಗಿಕೊಂಡು ನಿಧಾನವಾಗಿ ಹೇಳಿದ.

"ರೋನೋ, ನಿನ್ನ ಒಳಿತಿಗಾಗಿ ಹೇಳುತ್ತಿದ್ದೇನೆ. ಹೊರಡು, ತಕ್ಷಣ ಇಲ್ಲಿಂದ ಹೊರಟು ಹೋಗು. ಇಲ್ಲವಾದರೆ ನಂತರ ಪಶ್ಚಾತ್ತಾಪ ಪಡುತ್ತಿ."

ಬೇಂಬಿಯ ಮಾತಿನಿಂದ ರೋನೋಗೆ ತುಂಬಾ ಸಿಟ್ಟು ಬಂತು.

"ಓಹೋ, ಸುಮ್ಮನೆ ಇದೀನೀಂತ ಬಾಯಿಗೆ ಬಂದಂತೆ ಹರಟುತ್ತಾ ಇದೀಯಾ ? ಇಲ್ಲ ಇವನೊಬ್ಬ ಕುಂಟ, ಏನು ಮಾಡಿಯಾನು ಅಂದುಕೋತಾ ಇದೀಯೋ ! ಕೈಲಾಗದ ಹೇಡಿ. ಕಾರೋ ಓಡಿಹೋದ. ನನ್ನ ತಂಟೆಗೆ ಬಂದರೆ ಹುಷಾರ್...ನನ್ನ ಮಾತು ಕೇಳಿ..."

"ರೋನೋ, ನಿನ್ನ ಸಲಹೆ ನನಗೆ ಬೇಕಾಗಿಲ್ಲ. ನಾನೇ ನಿನಗೆ ಸಲಹೆ ಕೊಡ್ತಾಇದೀನಿ. ನಿನ್ನ ಮೇಲೆ ನನಗೆ ತುಂಬಾ ಗೌರವ ಇದೆ–ಬುದ್ಧಿವಂತ, ಅನುಭವಸ್ಥ ಅಂತ. ಆದ್ದರಿಂದ ಕೊನೆಯ ಬಾರಿ ಹೇಳ್ತಿದೀನಿ. ಹುಂ... ಹೊರಟು ಹೋಗು ನನ್ನ ಸಹನೆಯನ್ನು ಪರೀಕ್ಷಿಸಬೇಡ."

"ಓಹೋಹೋ...ನಿನಗೆ ಸಹನೆ ತುಂಬಾ ಕಡಿಮೆಯೇನು ? ಚ್ಚು... ಚ್ಚು... ಚ್ಚು....ಪಾಪ, ತುಂಬಾ ಕಷ್ಟ ಹಾಗಾದರೆ...ಏಯ್, ಇದುವರೆಗೂ ತಿಂದ ಒದೆಗಳ ರುಚಿ ಮರೆತಿಲ್ಲ ತಾನೇ ? ನಿನ್ನ ಒಳ್ಳೆದಕ್ಕೇ ನಾನು ಹೇಳ್ತಿದೀನಿ, ತಕ್ಷಣ ಕಾಲಿಗೆ ಬುದ್ಧಿ ಹೇಳು."

ರೋನೋ ಆ ರೀತಿ ಮಾತನಾಡಬಾರದಾಗಿತ್ತು. ಬೇಂಬಿಯ ಕೋಪ ಭುಗಿಲ್ಲೆಂದಿತು. ಇನ್ನೊಂದು ಕ್ಷಣವೂ ತಡಮಾಡಲಿಲ್ಲ ಅವನು. ತಲೆಬಾಗಿಸಿ ಮುಂದಾದ. ರೋನೋ ಸಹ ಸಿದ್ಧವಾಗಿಯೇ ಇದ್ದ.

ಎರಡೂ ತಲೆಗಳು ಒಂದನ್ನೊಂದು 'ಢಿ' ಗೊಂಡುವು.

ರೋನೋ ಜೋರಾಗಿಯೇ ಹೋರಾಟಕ್ಕೆ ಇಳಿದಿದ್ದ. ತನ್ನ ಬಲದ ಮುಂದೆ ಬೇಬಿ ನಿಲ್ಲಲಾರನೆಂದುಕೊಂಡಿದ್ದ ರೋನೋಗೆ ಅಚ್ಚರಿಯಾಯಿತು ...ನಿಜಕ್ಕೂ ಬೇಂಬಿ ತನ್ನೊಂದಿಗೆ ಹೋರಾಟಕ್ಕಿಳಿಯುವ ಸಾಹಸ ಮಾಡು ತ್ತಾನೆಂದು ಅವನು ಊಹಿಸಿಯೇ ಇರಲಿಲ್ಲ. ಶತ್ರುವಿನ ಧೈರ್ಯ ಅವನನ್ನು ಚಕಿತನನ್ನಾಗಿಸಿತ್ತು.

ಸ್ವಲ್ಪ ಹೊತ್ತಿನಲ್ಲಿಯೇ ನವಯೌವ್ವನದಲ್ಲಿದ್ದ ಬೇಂಬಿಯನ್ನು ಸುಲಭ ವಾಗಿ ಜಯಿಸಲಾರೆನೆಂಬುದು ಅವನಿಗೆ ಅರ್ಥವಾಗಿ ಹೋಯಿತು. ಉಪಾಯ ದಿಂದ ಪ್ರತ್ಯರ್ಥಿಯನ್ನು ಜಯಿಸಬೇಕೆಂದುಕೊಂಡ.

ತಲೆಬಾಗಿಸಿ ಮುಂದಕ್ಕೆ ಬರುತ್ತಿದ್ದ ಬೇಂಬಿ. ಆಕಸ್ಮಾತ್ತಾಗಿ ರೋನೋ ತನ್ನ ತಲೆಯನ್ನು ಹಿಂದಕ್ಕೆಳೆದುಕೊಂಡು ಪಕ್ಕಕ್ಕೆ ಸರಿದ. ಆ ಜೋರಿನಲ್ಲಿ ಬೇಂಬಿ ಆಯತಪ್ಪಿ ಕೆಳಗೆ ಬೀಳುತ್ತಾನೆಂಬುದು ಅವನ ಆಲೋಚನೆ. ಆದರೆ ಬೇಂಬಿ ಮುಂದಕ್ಕೆ ಬೀಳದೆ ಕಾಲುಗಳನ್ನು ಊರಿನಿಂತು ಸಾವರಿಸಿಕೊಂಡ. ರೋನೋನ ಉಪಾಯ ಅವನಿಗರ್ಥವಾಗಿತ್ತು. ಸಿಟ್ಟಿನಿಂದ ಉನ್ಮತ್ತನಾದ ಬೇಂಬಿ ನೇರವಾಗಿ ರೋನೋನ ಮೇಲೆರಗಿದ. ಕಟಕಟನೆ ಸದ್ದಾಯಿತು. ರೋನೋನ ಕಿರೀಟಗಳಲ್ಲಿ ಒಂದು ಚೂರು ಮುರಿದುಬಿತ್ತು. ಹಣೆ ಒಡೆದು ಹೋದಂತೆನಿಸಿ ಅವನ ಕಣ್ಣು ಕತ್ತಲಿಟ್ಟಿತು. ಮರುಕ್ಷಣದಲ್ಲಿ ಮತ್ತೊಂದು ಪೆಟ್ಟು, ಈ ಸಲ ಅದು ಭುಜಕ್ಕೆ ತಗುಲಿತು, ಎದೆ ಹಿಂಡಿದಂತಾಗಿ ಉಸಿರು ಕಟ್ಟಿತು. ನೆಲದ ಮೇಲೆ ಬಿದ್ದು ಬಿಟ್ಟ. "ನಿಲ್ಲು, ಬೇಂಬಿ ನಿಲ್ಲು" ಎಂದು ರೋನೋ ಕೂಗಿಕೊಂಡದ್ದು ಹುಚ್ಚುಕೋಪದಲ್ಲಿದ್ದ ಬೇಂಬಿಗೆ ಕೇಳಿಸಲೇ ಇಲ್ಲ. ರಭಸದಿಂದ ಮುಂದೆ ಬಂದು ಮತ್ತೊಂದು ಸಲ ತಿವಿದ.

"ಬೇಂಬಿ ನಿಲ್ಲೋ. ನಾನು ಕುಂಟ ಅನ್ನೋದನ್ನೂ ಮರೆತು ಬಿಟ್ಟ ಯೇನೋ ? ತಮಾಷೆಗೆ ಒಂದು ಮಾತಂದರೆ ಇಷ್ಟು ಸಿಟ್ಟೇಕಪ್ಪಾ ?" ಎಂದು ರೋನೋ ದೈನ್ಯದಿಂದ ಬೇಡಿಕೊಂಡ.

ಬೇಂಬಿ ಏದಿಸಿರು ಬಿಡುತ್ತಾ ನಿಂತ.

ಮತ್ತೊಂದು ಸಲ ಮೇಲೆರಗಿ ತಿವಿಯಬೇಕೆಂಬ ತನ್ನ ಆವೇಶವನ್ನು ಬೇಂಬಿ ಕಷ್ಟಪಟ್ಟು ನಿಗ್ರಹಿಸಿಕೊಂಡ. ನಿಧಾನವಾಗಿ ಪಕ್ಕಕ್ಕೆ ಸರಿದ. ರೋನೋ ಅತಿಕಷ್ಟದಿಂದ ಮೇಲೆದ್ದ. ಕುಂಟುತ್ತಾ ಮೆಲ್ಲನೆ ಅಲ್ಲಿಂದ ಕಾಲ್ತೆಗೆದ.

ಬೇಂಬಿ ಫಲೀನಾಳನ್ನು ಹುಡುಕುತ್ತಾ ಪೊದೆಗಳ ಕಡೆ ನಡೆದ. ನಾಲ್ಕು ಹೆಜ್ಜೆ ಹಾಕುವಷ್ಟರಲ್ಲಿ ಅವಳೇ ಎದುರಾದಳು, ಇಷ್ಟು ಹೊತ್ತಿನಿಂದಲೂ ಪೊದೆಗಳ ಹಿಂದೆ ನಿಂತು ಅವಳು ನಡೆದದ್ದನ್ನೆಲ್ಲಾ ನೋಡುತ್ತಲೇ ಇದ್ದಳು.

"ಅಬ್ಬಾ, ಪರವಾಗಿಲ್ಲ ಹುಡುಗ ! ಚೆನ್ನಾಗಿ ಯುದ್ಧ ಮಾಡಲು ಕಲಿತಿದ್ದೀ, ಏನು ಬಲ, ಏನು ಪರಾಕ್ರಮ ಯುವರಾಜರಿಗೆ ! ಇಬ್ಬರಿಗೂ ಚೆನ್ನಾಗಿ ಬುದ್ಧಿ ಕಲಿಸಿದೆ ಬಿಡು" ಎಂದು ಮೆಚ್ಚುಗೆಯ ನೋಟ ಬೀರಿದಳು.

ನಂತರ ಬೇಂಬಿಯ ಕಿವಿಯಲ್ಲಿ "ನಿನ್ನ ಕಂಡರೆ ತುಂಬಾ ಇಷ್ಟ ನನಗೆ" ಎಂದು ಹೇಳಿದಳು.

ಒಂದು ದಿನ ಅವರಿಬ್ಬರೂ ಬೇಂಬಿ ಮುದಿನಾಯಕನನ್ನು ನೋಡಿದ್ದ ಸ್ಥಳವನ್ನು ಹುಡುಕಿಕೊಂಡು ಹೊರಟರು.

ತಾನು ಈಗಾಗಲೇ ಎಷ್ಟೋ ಬಾರಿ ಮುದಿನಾಯಕನನ್ನು ನೋಡಿ ಮಾತನಾಡಿದ್ದ ವಿಷಯವನ್ನು ಬೇಂಬಿ ಫಲೀನಾಳಿಗೆ ತಿಳಿಸಿದ್ದ.

"ಏನೋ ನಮ್ಮ ಅದೃಷ್ಟ ಚೆನ್ನಾಗಿದ್ದರೆ ಆತ ಮತ್ತೆ ಕಾಣಿಸಬಹುದು. ಎಂದ ಬೇಂಬಿ.

"ಹೌದು, ನನಗೂ ಆತನೊಂದಿಗೆ ಮಾತನಾಡುವ ಆಸೆಯಾಗಿದೆ.

ಎಂದಳು. ಫಲೀನಾ ಆದರೆ ಅವಳು ಮನಸ್ಫೂರ್ತಿಯಾಗಿ ಆ ಮಾತನ್ನು ಹೇಳಲಿಲ್ಲ. ಬೇಂಬಿಯನ್ನು ಸಂತೋಷಪಡಿಸಲು ಹಾಗಂದಿದ್ದಳು. ನಿಜಕ್ಕೂ ಅವಳಿಗೆ ನಾಯಕ ಎಂದರೆ ತುಂಬಾ ಹೆದರಿಕೆ.

ಇನ್ನೂ ಆಗತಾನೇ ಸೂರ್ಯನ ಬೆಳಕು ಮೂಡಿ ಬರುತ್ತಿತ್ತು. ಇಬ್ಬರೂ ನಡೆದು ಹೋಗುತ್ತಿದ್ದರು. ಹತ್ತಿರದಲ್ಲಿದ್ದ ಪೊದೆಗಳ ಕಡೆಯಿಂದ ಏನೋ ಸದ್ದಾಯಿತು .ಇಬ್ಬರೂ ಬೆಚ್ಚಿಬಿದ್ದರು. ಹುಷಾರಾಗಿ ಬಗ್ಗಿ–ಬಗ್ಗಿ ನೋಡಿದರು.

ಹತ್ತಿರದಲ್ಲಿಯೇ ಅವರ ಉತ್ತರದೇಶದ ಜ್ಞಾತಿ ಕಡವೆಯೊಂದು ಮೆಲ್ಲ–ಮೆಲ್ಲನೆ ನಡೆದು ಹೋಗುತ್ತಿತ್ತು. ಮುಂಜಾನೆಯ ಮಸುಕು ಬೆಳಕಿನಲ್ಲಿ ಅದು ದೊಡ್ಡ ಭೂತದಂತೆ ಕಾಣಿಸಿತು.

ಫಲೀನಾ ಕಳವಳದಿಂದ ಕೂಗಿಕೊಂಡಳು.

ಬೇಂಬಿಯೂ ಹೆದರಿದ. ಅವನ ಮಾಮೂಲು ಧೋರಣೆಯಲ್ಲಿ ತಲೆ ಬಗ್ಗಿಸಿ ಹೋರಾಟಕ್ಕೆ ಸಿದ್ಧನಾದ. ಆದರೆ ಬಹಳ ಪ್ರಯತ್ನಪಟ್ಟು ತನ್ನ ಉದ್ದೇಶವನ್ನು ಹತ್ತಿಕ್ಕಿಕೊಂಡ.

ಫಲೀನಾ ಹೆದರಿಕೆಯಿಂದ ಗಾಬರಿಯಾಗಿ ಬಿಟ್ಟಿದ್ದಳು. ಬೇಂಬಿ ಅವಳನ್ನು ಸಂತೈಸಿದ "ಹುಷ್, ಸುಮ್ಮನಿರು, ಏನಾಯಿತು, ಏನಾಯಿತೂಂತ ಹೆದ ರುತ್ತಿ ? ಆತ ನಮಗೇನೂ ಅಪಕಾರ ಮಾಡೋಲ್ಲ."

ಆದರೆ ಫಲೀನಾ ಕೂಗುತ್ತಲೇ ಇದ್ದಳು.

"ಫಲೀನಾ, ಏನಿದು ಹುಚ್ಚು ನಿನಗೆ, ಆತ ನಮಗೆ ಬಂಧು ಅಂತ ಗೊತ್ತಿಲ್ಲವೇ ?"

ಆದರೆ ಫಲೀನಾಳಿಗೆ ಈ ಬಂಧುಗಳ, ದೂರದ ಬಂಧುಗಳ ಅವಶ್ಯಕತೆ ಯೇನೂ ಇರಲಿಲ್ಲ. ಆ ಬಂಧುತ್ವವನ್ನು ಅವಳು ಅಂಗೀಕರಿಸುವುದಿಲ್ಲ ಸಹ, ಮಂತ್ರ ಮುಗ್ಧಳಂತೆ ಆ ದೈತ್ಯಾಕಾರದ ಕಡವೆಯ ಕಡೆ ನೋಡಲಾರಂಭಿಸಿ ದ್ದಳು.

ತನ್ನ ಸುತ್ತಲೂ ಇಷ್ಟು ಗಲಾಟೆ ನಡೆಯುತ್ತಿದ್ದರೂ ಆ ಕಡವಗೆ ಅದೊಂದೂ ತಿಳಿಯದು, ತನ್ನ ಪಾಡಿಗೆ ತಾನು ನಿರಾಳವಾಗಿ ನಡೆದು ಹೋಗುತ್ತಿತ್ತು.

ಫಲೀನಾ ಆ–ವ್ಹಾ–ಬಾ–ವ್ಹಾ ಅಂತ ಕೂಗಿದ್ದೇ ಕೂಗಿದ್ದು.

"ಏಯ್, ಸುಮ್ಮನಿರಬಾರದೇ, ಅಂತ ಏನಂದುಕೊಳ್ಳುತ್ತಾನೋ ಏನೋ'' ಬೇಂಬಿ ಬೇಡಿಕೊಂಡ.

"ಏನಾದರೂ ಅಂದುಕೊಳ್ಳಲಿ. ನನಗೇನು ? ಆ–ವ್ಹಾ_ಬಾ–ವ್ಹಾ" ಫಲೀನಾ ಮಧ್ಯ – ಮಧ್ಯದಲ್ಲಿ ಬೇಂಬಿಯನ್ನು ಮೂದಲಿಸುತ್ತಿದ್ದಳು. "ಅಬ್ಬಾ ನನ್ನನ್ನು ತಡೆಯಬೇಡ ಆ–ವ್ಹಾ–ಬಾ–ವ್ಹಾ."

ಕಡವೆ ಮಂಜಿನಿಂದ ನೆನೆದ ಹುಲ್ಲುಕಡ್ಡಿಗಳನ್ನು ತಿನ್ನುತ್ತಾ ಮುಂದೆ ಹೋಗುತ್ತಿತ್ತು.

ಬೇಂಬಿ ಒಂದು ಕಡೆ ಗಾಬರಿಯಿಂದ ಹುಚ್ಚಳಂತಾಗಿದ್ದ ಫಲೀನಾಳ ಕಡೆ ಗಾಬರಿಯಿಂದ ಹುಚ್ಚಳಂತಾಗಿದ್ದ ಫಲೀನಾಳ ಕಡೆಗೊಮ್ಮೆ, ತನಗೇನು ಹಿಡಿಸದಂತೆ ಹೋಗುತ್ತಿದ್ದ ಕಡವೆಯನ್ನೊಮ್ಮೆ ನೋಡುತ್ತಿದ್ದ.
ಫಲೀನಾಳನ್ನು ಸಂತೈಸುವ ನೆಪದಲ್ಲಿ ತನ್ನನ್ನು ತಾನು ಸಂಭಾಳಿಸಿಕೊಂಡ. ಅವನಿಗೆ ಸ್ವಲ್ಪ ಧೈರ್ಯ ಬಂತು.

ಇದಕ್ಕೆ ಮುಂಚೆ ತಾನು ಮೊದಲ ಸಲ ಕಡವೆಯನ್ನು ನೋಡಿದಾಗ ತನಗೂ ಕೈ–ಕಾಲು ಆಡದಂತಾಗಿದ್ದನ್ನು ನೆನಪಿಸಿಕೊಂಡ.

"ಥೂಥ್ ಬುದ್ಧಿಯಿಲ್ಲ ನನಗೆ, ಶುದ್ಧ ನಾಚಿಕೆಗೇಡು" ಎಂದುಕೊಂಡ.

"ಫಲೀನಾ ನಾನು ಹೋಗಿ ಆತನೊಂದಿಗೆ ಪರಿಚಯ ಮಾಡಿಕೊಂಡು ಬರುತ್ತೇನೆ ಇರು" ಎಂದ.

ಫಲೀನಾಳ ಗಾಬರಿಗೆ ಮಿತಿಯೇ ಇಲ್ಲದಾಯಿತು.

"ಓಹ್... ಹೋಗಬೇಡ ಬಾ...ವ್ಹಾ! ಅದು ಒಳ್ಳೇದಲ್ಲ ಬಾ–ವ್ಹಾ."

"ನಾನು ಹೋಗಲೇಬೇಕು" ಎಂದ ಬೇಂಬಿ ದೃಢವಾಗಿ.

ತಮ್ಮ ಇರುವನ್ನು ಸ್ವಲ್ಪವಾದರೂ ಗಮನಿಸದೆ ತನ್ನ ಪಾಡಿಗೆ ತಾನು ಮೇಯುತ್ತಿದ್ದ ಕಡವೆಯನ್ನು ನೋಡಿ ಅವನಿಗೆ ತುಂಬಾ ಅವಮಾನವಾದಂತಾಗಿತ್ತು.

"ನೋಡೋಣ, ನಾನು ಹೋಗಿ ಆತನನ್ನು ಮಾತನಾಡಿಸಿ ಬರುತ್ತೇನೆ. ನೀನು ಇಲ್ಲಿಯೇ ಇರು. ಏನೂ ಹೆದರಬೇಡ. ಅಪಾಯ ಖಂಡಿತ ಇಲ್ಲ" ಎಂದು ನಿಜವಾಗಿಯೂ ಹೊರಟೇಬಿಟ್ಟ.

ಆದರೆ ಅವನು 'ಇರು' ಎಂದ ಕಡೆ ನಿಲ್ಲಲು ಫಲೀನಾಳಿಂದಾಗಲಿಲ್ಲ ಅವಳು ದೂರವಾಗಿ ಮರಗಳ ಗುಂಪಿನ ಕಡೆ ಓಡಿದಳು. ದೊಡ್ಡದಾಗಿ ಬಾಯಿ ತೆರೆದು ಕಾಡೆಲ್ಲಾ ಪ್ರತಿಧ್ವನಿಸುವಂತೆ ಕೂಗ ತೊಡಗಿದಳು.

"ಆ...ವೂ.. ಬಾ...ವೂ."

ನಿಜ ಹೇಳಬೇಕಾದರೆ ಬೇಂಬಿಗೆ ಕೂಡ ಸ್ವಲ್ಪ ಗಾಬರಿ ಇದ್ದೇ ಇತ್ತು. ಹಿಂದಿರುಗಿ ಹೋಗೋಣವೆಂದೂ ಅನ್ನಿಸಿತು. ಆದರೆ ಮುಂದೆ ಬಂದಿದ್ದಾಗಿತ್ತು. ಇನ್ನು ಹಿಂದಿರುಗುವುದು ಸರಿಕಾಣಲಿಲ್ಲ...ಫಲೀನಾಳ ಮುಂದೆ ತಾನು ಹೇಡಿಯಾಗಬಾರದು. ಮನಸ್ಸನ್ನು ಗಟ್ಟಿಮಾಡಿಕೊಂಡು ಮುಂದಕ್ಕೆ ಹೆಜ್ಜೆಯಿರಿಸಿದ.

ಅವನ ಎದೆ ಜೋರಾಗಿ ಒಡೆದುಕೊಳ್ಳುತ್ತಿತ್ತು.

ಕಡವೆಗೆ ಹತ್ತು ಮಾರು ದೂರದಲ್ಲಿ ಬಂದು ನಿಂತ.

ಕಡವೆ ಒಮ್ಮೆ ತಲೆ ತಿರುಗಿಸಿ ಇವನ ಕಡೆ ನೋಡಿ ಮತ್ತೆ ತನ್ನ ಪಾಡಿಗೆ ತಾನು ಮೇಯ ತೊಡಗಿತು.

ತನ್ನ ಕಡೆ ಓರೆನೋಟ ಬೀರಿ, ಮತ್ತೆ ಶೂನ್ಯವಾಗಿ ನಿಟ್ಟಿಸಿ, ತನಗೇನೂ ಹಿಡಿಸದಂತೆ ತನ್ನ ಪಾಡಿಗೆ ತಾನು ಮೇಯುತ್ತಾ ನಿಂತ ಕಡವೆಯನ್ನು ನೋಡಿ ಬೇಂಬಿಗೆ ತುಂಬಾ ಬೇಸರವಾಯ್ತು. ಏನು ಅವನ ದೊಡ್ಡಸ್ತಿಕೆ, ಏಕೆ ಈ ಗರ್ವ ಎಂದು ಅನ್ನಿಸಿದರೂ ಏನಾದರೂ ಸರಿ ಅತನೊಂದಿಗೆ ಮಾತನಾಡಿಯೇ ತೀರಬೇಕೆಂದು ನಿರ್ಣಯಿಸಿಕೊಂಡ.

"ನಮಸ್ಕಾರ, ನನ್ನ ಹೆಸರು ಬೇಂಬಿ ಅಂತ. ತಮ್ಮ ನಾಮಧೇಯ ವೇನೆಂದು ತಿಳಿದುಕೊಳ್ಳಬಹುದೇ ? ಎಂದು ಸಂಭಾಷಣೆ ಪ್ರಾರಂಭಿಸಬೇಕೆಂದು ಕೊಂಡ. ಆದರೆ ಅಂದುಕೊಂಡಷ್ಟು ಸುಲಭವಾಗಿ ಕಾಣಸಲಿಲ್ಲ. ತಾನಾಗಿ ತಾನು ಮುಂದಕ್ಕೆ ಬಂದಾಗಿತ್ತು. ಆದ್ದರಿಂದ ತಾನೇ ಮೊದಲು ಮಾತನಾಡ ಸಬೇಕಾದ್ದು ಮರ್ಯಾದೆ. ಆದರೆ ಏನೋ ತಿಳಿಯದ ಭೀತಿಯಿಂದಾಗಿ ಅವನ ಬಾಯಿಂದ ಮಾತೇ ಹೊರಡಲಿಲ್ಲ.

ಎದುರಿಗೆ ನಿಂತು ನೋಡುತ್ತಿದ್ದರೆ ಕಡವೆ ದೊಡ್ಡದೊಂದು ಪರ್ವತದಂತೆ ಕಾಣುತ್ತಿತ್ತು. ಅದರ ಮುಂದೆ ತಾನೊಂದು ಕೀಟದಂತೆ ಕಾಣುತ್ತಿದ್ದ. ಆದರೂ ತನಗೆ ತಾನೇ ಧೈರ್ಯ ತಂದುಕೊಂಡ.

"ಈತನ ಮುಂದೆ ನಾನೇಕೆ ನಾಚಿಕೊಳ್ಳಬೇಕು. ನಾನೂ ಸಾಕಷ್ಟು ಭಾರಿಯಾಗಿಯೇ ಇದೇನಲ್ಲಾ" ಎಂದುಕೊಂಡ.

ಆ ರೀತಿ ತನ್ನನ್ನು ತಾನು ನಂಬಿಕೊಳ್ಳಲು ಯತ್ನಿಸಿದರೂ, ಮನಸ್ಸಿನ ಲ್ಲೆಲ್ಲೋ ಒಂದು ಚೂರು ಅಳುಕು ಇದ್ದೇ ಇತ್ತು. "ನಾನೆಲ್ಲಿ ? ಆತನೆಲ್ಲಿ ? ತಮ್ಮಿಬ್ಬರಲ್ಲೂ ಅಂತರ ಹೆಚ್ಚಾಗಿಯೇ ಇದೆ" ಅನ್ನಿಸಿತು.

ಕಡವೆ ಮತ್ತೆ ಬೇಂಬಿಯ ಕಡೆ ನೋಡಿ ಮನಸ್ಸಿನಲ್ಲಿಯೇ ಮೆಚ್ಚಿ ಕೊಂಡಿತು. "ಆಹಾ ! ಎಷ್ಟು ಚೆಂದವಾಗಿದ್ದಾನೆ ! ಇಂತಹ ಸುಂದರ ರೂಪ ನಮ್ಮ ಜಾತಿಯಲ್ಲಿ ಕಾಣಿಸುವುದೇ ಇಲ್ಲ. ಆ ನಡಿಗೆ ಎಷ್ಟು ಸೊಗಸು ! ಚಲನವಲನದಲ್ಲೂ ಏನು ಅಂದ–ಚೆಂದ ಕಾಣುತ್ತಿದೆ. ನಾನು ಅವನನ್ನು ಗಮನಿಸುತ್ತಿದೀನೀಂತ ಏನಂದುಕೊಳ್ಳುತ್ತಿದಾನೋ ಏನೋ ! ಮೇಲಕ್ಕೆ ಏನೂ ಅನ್ನದಿದ್ದರೂ ಕೀಳಾಗಿ ಭಾವಿಸಿಕೊಂಡರೆ ?"

ಅವನ ಮುಂದೆ ತಾನು ಕಡಿಮೆಯಾಗುತ್ತೇನೆಂಬ ಭಾವನೆಯಿಂದ ಕಡವೆ ಬೇಂಬಿಯ ಮೇಲಿಂದ ದೃಷ್ಟಿ ಹೊರಳಿಸಿ ಶೂನ್ಯದ ಕಡೆ ನೋಡ ತೊಡಗಿತು.

"ಎಷ್ಟು ಗರ್ವ ಈತನಿಗೆ, ನನ್ನ ಕಡೆ ನೋಡಲು ಇಷ್ಟವಿಲ್ಲಂತಾ ಕಾಣುತ್ತೆ. ನಾನು ಆತನ ಕಾಲಿನಷ್ಟು ಉದ್ದಕೂಡಾ ಇಲ್ಲ ಅಂದುಕೊಂಡಿರ

ಬೇಕು ಎಂದುಕೊಂಡ ಬೇಂಬಿ

"ಈ ಹುಡುಗನ ಜೊತೆ ಮಾತನಾಡಿದ್ದರೆ ಚೆನ್ನಾಗಿತ್ತು. ಹೀಗೆ ಮೂಗರಂತೆ ಒಬ್ಬರ ಮುಂದೊಬ್ಬರು ನಿಂತಿರುವುದು ಏನೇನೂ ಚೆನ್ನಾಗಿಲ್ಲ" ಅಂದು ಕೊಂಡಿತು ಕಡವೆ.

"ಅಯ್ಯೋ ರಾಮ, ನಾನೊಬ್ಬ ಇಲ್ಲಿದ್ದೀನಿ ಲೆಕ್ಕವೇ ಇಲ್ಲವಲ್ಲಾ ಈತನಿಗೆ ದೊಡ್ಡ ಜಾತಿಯವರ ದುರಹಂಕಾರ ಹೀಗೇಯೇ ಇರುತ್ತದೆಯೋ ಎಂದುಕೊಂಡ ಬೇಂಬಿ

ಕಡವೆಯ ಸಂದೇಹವೇ ಬೇರೆ. ಹೇಗೆ ಮಾತನಾಡಬೇಕು, ಏನು ಮಾತನಾಡಬೇಕು ಎಂಬ ಸಂದಿಗ್ಧ ಅದಕ್ಕೆ. ನನಗೆ ಮೊದಲೇ ಚೆನ್ನಾಗಿ ಮಾತನಾಡಲು ಬಾರದು. ಏನೇನೋ ಹುಚ್ಚುಚ್ಚಾಗಿ ಮಾತನಾಡಿಬಿಟ್ಟರೆ ಆತ ಹಾಸ್ಯ ಮಾಡಬಹುದು. ಮುಖ ನೋಡಿದರೆ ಒಳ್ಳೆ ಚೂಟಿಯಾಗಿ ಕಾಣ್ತಾನೆ ಅಂದುಕೊಂಡಿತು ಕಡವೆ

"ಈತ ತುಂಬಾ ಬಲವಂತ. ದೊಡ್ಡ ಜಾತಿಯವ. ನನಗಿಂತ ಹಿರಿಯ ಸಹ" ಎಂದು ನಿರಾಸೆಗೊಂಡ ಬೇಂಬಿ.

"ಇವನೊಂದಿಗೆ ಈ ದಿನ ಪರಿಚಯ ಮಾಡಿಕೊಳ್ಳುವುದು ಬೇಡ,

ಮತ್ತೊಂದು ದಿನ ನೋಡೋಣ. ಅವಕಾಶ ಬಾರದೆ ಹೋಗುತ್ತದೆಯೆ ? " ಎಂದುಕೊಳ್ಳುತ್ತಾ ಅಸಂತೃಪ್ತಿಯಿಂದ, ಮಂದಗಮನದಿಂದ ಮುಂದಕ್ಕೆ ಸಾಗಿ ಹೋಯಿತು ಕಡವೆ.

ಆತ ಕಾಣುವವರೆಗೂ ನೋಡುತ್ತಾ ಅಲ್ಲಿಯೇ ನಿಂತ ಬೇಂಬಿ.

ಸೂರ್ಯಕಿರಣಗಳು ಹೊರಚೆಲ್ಲುವ ಕಾವನ್ನು ಹೀರಿಕೊಂಡು ಅರಣ್ಯವೆಲ್ಲಾ ಹಬೆಯ ಹೊಗೆಯಾಡುತ್ತಿತ್ತು. ಆಕಾಶದಲ್ಲಿ ಒಂದು ಮೋಡವೂ ಇರಲಿಲ್ಲ. ಮೈದಾನದಲ್ಲಿ ಮರಗಿಡಗಳ ಕೊನೆಗಳಲ್ಲಿ ಪೊದೆಗಳ ಮೇಲೆ ಬೆಚ್ಚನೆಯಗಾಳಿ ಮೇಲೆ–ಮೇಲೆ ಏರಿ ಹೋಗುತ್ತಿತ್ತು.

ಒಂದೇ ಒಂದು ಎಲೆ ಸಹ ಅಲುಗಾಡುತ್ತಿರಲಿಲ್ಲ. ಒಂದು ಕೊಂಬೆಯೂ

ಬಾಗಿರಲಿಲ್ಲ. ಎಲೆಗಳ ನೆರಳಿನಲ್ಲಿ ಅವೆಲ್ಲಾ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಂತಿದ್ದುವು. ದಾರಿಗಳಲ್ಲಿ ಒಂದು ಜಂತುವೂ ಓಡಾಡುತ್ತಿದ್ದಂತಿತ್ತು.

ಬೇಂಬಿ ಸುಖವಾಗಿ ನಿದ್ದೆಮಾಡಿದ.

ರಾತ್ರಿಯೆಲ್ಲಾ ಫಲೀನಾಳೊಂದಿಗೆ ಆಟವಾಡಿದ. ಕುಣಿದು ಕುಪ್ಪಳಿಸಿದ. ಆ ಆಟಪಾಟಗಳಲ್ಲಿ ಬೆಳಗಾದದ್ದೇ ತಿಳಿಯಲಿಲ್ಲ. ಬೆಳಕು ಬಂದಮೇಲೆ ತಿಂಡಿ ತಿನ್ನಲಿಲ್ಲವೆಂಬುದು ನೆನಪಾಯಿತು. ಆದರೆ ಚೆನ್ನಾಗಿ ಬಳಲಿದ್ದುದರಿಂದ ಅವನಿಗೆ ಹಸಿವಿನ ಪರಿವೆಯೇ ಇದ್ದಂತಿರಲಿಲ್ಲ. ಕಣ್ಣು ಎಳೆದುಕೊಂಡು ಹೋಗುತ್ತಿತ್ತು. ದಟ್ಟವಾಗಿದ್ದ ಪೊದೆಯೊಂದನ್ನು ಹುಡುಕಿ ಮಲಗಿದ. ಹತ್ತಿರದಲ್ಲಿದ್ದ ಪಾರಿಜಾತದ ಹೂವಿನ ವಾಸನೆ ಬೇಂಬಿಗೆ ಜೋಗುಳ ಹಾಡುತ್ತಿತ್ತು ಹಾಗೆಯೇ ನಿದ್ದೆ ಮಾಡಿದ.

ಇದ್ದಕ್ಕಿದ್ದಂತೆ ಬೆಚ್ಚಿ ಮೇಲೆದ್ದ ಯಾರದೋ ವ್ಯಾಕುಲ, ಭೀತಿಗಳಿಂದ ಕೂಡಿದ ಕಂಠ ಕೇಳಿಸಿತು. ಯಾರದು ಆ ಕೂಗು? ಫಲೀನಾ ಅಲ್ಲತಾನೆ?

ಬೇಂಬಿ ತಲೆಯೆತ್ತಿ ನೋಡಿದ. ಫಲೀನಾ ಅಲ್ಲಿರಲಿಲ್ಲ. ತಾನು ನಿದ್ದೆ ಮಾಡುವ ಮುಂಚೆ ಅವನಲ್ಲಿಯೇ ಇದ್ದಳು. ಒಬ್ಬಳಿಗೇ ಏನೂ ತೋಚದೆ ಸುತ್ತಾಡಿಬರಲು ಹೋಗಿರಬಹುದು. ಅಲ್ಲಿಯೋ ಹತ್ತಿರದಲ್ಲೆಲ್ಲೋ ಇರಬೇಕೆಂದುಕೊಂಡಿದ್ದ.

ಅವನಿಗೆ ನಿದ್ದೆಯ ಅಮಲು ಇನ್ನೂ ಇಳಿದಿರಲಿಲ್ಲ. ಕಣ್ಣುಗಳಿನ್ನೂ ಪೂರ್ತಿ ತೆರೆದುಕೊಳ್ಳಲಿಲ್ಲ. ಮನಸ್ಸು ಪೂರ್ತಿಯಾಗಿನ್ನೂ ವಾಸ್ತವ ಪ್ರಪಂಚದೊಳಕ್ಕೆ ಬಂದಿರಲಿಲ್ಲ. ಅರ್ಧ ಚೈತನ್ಯಾವಸ್ಥೆಯಲ್ಲಿ ಆಲೋಚಿಸುತ್ತಿದ್ದ.

ತುಂಬಾ ಹೊತ್ತು ಮಲಗಿರಬೇಕು ತಾನು. ಫಲೀನಾ ಎಷ್ಟು ಹೊತ್ತಿನಿಂದ ಕರೆಯುತ್ತಿದ್ದಾಳೆಯೋ ಏನೋ ನೆನಪು ತಂದುಕೊಳ್ಳಲು ಪ್ರಯತ್ನಿಸಿದ.

ಮತ್ತೆ ಕೇಳಿಸಿತು. ಈ ಸಲ ಸ್ಪಷ್ಟವಾಗಿ ಹಕ್ಕಿಯ ಕೂಗಿನಂತೆ ಕೀರಲು ಕಂಠದಲ್ಲಿ, ವ್ಯಾಕುಲ ತುಂಬಿದ ವಿಚಿತ್ರವಾದ ಕೂಗು.

"ಪ್ರೀ....ದಿ, ಪ್ರೀ...ದಿ"

"ಹಾಂ, ಹೌದು, ಅದು ಫಲೀನಾಳದ್ದೇ ಕಂಠ ಅನುಮಾನವೆ ಇಲ್ಲ" ಎಂದುಕೊಂಡ ಬೇಂಬಿ. ಆ ಕೂಡಲೇ ಮೇಲೆದ್ದು ಮಿಂಚಿನಂತೆ ಮುಂದಕ್ಕೆ ಧುಮುಕಿದ. ಕೊಂಬೆಗಳು ಕರಕರ ಎಂದುವು. ಆದರೆ ಅವನು ತನ್ನ ಮೊದಲ ನೆಗೆತದಲ್ಲಿಯೇ ಅಡ್ಡಿಯನ್ನು ಎದುರಿರಬೇಕಾಯಿತು. ಅವನಿಗೆದು ರಾಗಿ ದಾರಿಗೆ ಅಡ್ಡವಾಗಿ ಮುದಿನಾಯಕ ನಿಂತಿದ್ದ!

ಈಗ ಬೇಂಬಿಯ ಮನಸ್ಸಿನ ತುಂಬಾ ಫಲೀನಾಳೇ ತುಂಬಿದ್ದಳು. ಈ ಸಮಯದಲ್ಲಿ ಮುದಿನಾಯಕನ ಬರವು ಅವನಿಗೆ ಹಿತವಾಗಿರಲಿಲ್ಲ. ಇನ್ನೆಂದಾದರೂ ಈ ರೀತಿ ಆತ ಬಂದಿದ್ದಲ್ಲಿ ಆತನೊಡನೆ ಮಾತನಾಡಲು ಎಷ್ಟೋ ಉತ್ಸಾಹ ಸಂತೋಷಗಳಿಂದ ಮುಂದಾಗುತ್ತಿದ್ದ. ಆದರೆ ಈಗ ಅವನಿಗೆ ಅದಕ್ಕೆ ಸಮಯವಿರಲಿಲ್ಲ. ಗೌರವದಿಂದ ತಲೆಬಾಗಿ ಪಕ್ಕದಿಂದ ಹೊರಟು ಹೋಗಲು ಪ್ರಯತ್ನಿಸಿದ.

"ಎಲ್ಲಿಗೆ? ಎಂದ ನಾಯಕ ಕಠಿಣವಾಗಿ.

ಹೇಳಲು ನಾಚಿದ ಬೇಂಬಿ. ಆದರೂ ಸುಳ್ಳಾಡಲಿಲ್ಲ,

"ಫಲೀನಾ ಬಳಿಗೆ."

"ಉಹುಂ, ನೀನೀಗ ಹೋಗಬಾರದು," ಆಜ್ಞಾಪಿಸುತ್ತಿದ್ದಂತೆ ಹೇಳಿದ ನಾಯಕ.

ಬೇಂಬಿ ಸಿಟ್ಟಿನಿಂದ ಕೆಂಪಾದ, "ಫಲೀನಾಳ ಬಳಿ ಹೋಗಬಾರದೇ? ಏನೀ ಮುದುಕನ ಜೋರು? ಹಿರಿಯ ಎಂದು ಗೌರವಿಸುತ್ತಿದ್ದರೆ ಇಂತಹ ಅಪ್ಪಣೆಯೇ? ಹೋದರೇನು ಮಾಡುತ್ತಾನಂತೆ!" ಎಂದುಕೊಂಡ.

ಆದರೆ ನಾಯಕನ ನಿಶ್ಚಿತದೃಷ್ಟಿ ಬೇಂಬಿಯನ್ನು ಕಟ್ಟಿಹಾಕಿದಂತೆ ನಿಲ್ಲಿಸಿತ್ತು. ಆದರೆ ತಾನು ಹೊರಡುವುದು ನಿಧಾನವಾಗುತ್ತಿದೆಯಲ್ಲಾ ಎಂದು ಚಡಪಡಿಸತೊಡಗಿದ.

"ಫಲೀನಾ ನನ್ನನ್ನು ಕರೆಯುತ್ತಿದ್ದಾಳೆ, ನಾನು ಹೋಗಬೇಕು."

"ಇಲ್ಲ, ಅವಳು ಕರೆಯುತ್ತಿಲ್ಲ."

ಅಷ್ಟರಲ್ಲಿ ಹಕ್ಕಿಯು ಕೂಗಿನಂತೆ ಕೀರಲು ಕಂಠ ಕೇಳಿಸಿತು,

"ಫ್ರಿ....ದಿ, ಫ್ರಿ....ದಿ"

"ಅಗೋ ಕೇಳಿದಿರಾ ?"

"ಕೇಳಿದೆ" ಎಂದು ತಲೆಯಾಡಿಸಿದ ನಾಯಕ.

"ಹಾಗಾದರೆ ನನ್ನನ್ನು ಹೋಗಗೊಡಿ ಮತ್ತೆ" ಎನ್ನುತ್ತಾ ಬೇಂಬಿ ಹೊರಡಲು ಸಿದ್ಧನಾದ.

"ನಿಲ್ಲು" ಎಂದ ನಾಯಕ.

"ಹೀಗೇಕೆ ಮಾಡುತ್ತಿದ್ದೀರಿ ? ದಯವಿಟ್ಟು ನನ್ನನ್ನು ಬಿಡಿ. "ಫಲೀನಾ ನನ್ನನ್ನು ಕೂಗುತ್ತಿದ್ದಾಳೆ. ನಾನು ಹೋಗಲೇಬೇಕು."

ಹಾಗೆ ಕರೆಯುತ್ತಿರುವುದು ಫಲೀನಾ ಅಲ್ಲ."

ಚೆನ್ನಾಯಿತು, ನನಗೆ ಫಲೀನಾಳ ಕಂಠಾನೇ ಗೊತ್ತಿಲ್ಲ ಅಂತೀರೇನು?"

"ನನ್ನ ಮಾತು ಕೇಳು" ಎಂದ ನಾಯಕ ಶಾಂತವಾಗಿ.

ಅಷ್ಟರಲ್ಲಿ ಮತ್ತೆ ಕೇಳಿಸಿತು "ಫ್ರಿ...ದಿ..."

ಬೇಂಬಿಗೆ ಮುಳ್ಳಿನಮೇಲೆ ನಿಂತಂತಿತ್ತು,

"ದಯವಿಟ್ಟು ನನ್ನನ್ನು ಹೋಗಗೊಡಿ. ಬೇಗ ಬಂದುಬಿಡ್ತೀನಿ."

"ಊಹೂ, ಈಗ ಹೋದರೆ ನೀನು ಮತ್ತೆ ಬರುವುದಿಲ್ಲ" ಎಂದ ನಾಯಕ ತಲೆ ಅಲ್ಲಾಡಿಸುತ್ತಾ.

ಮತ್ತೆ ಕೂಗು ಕೇಳಿಸಿತು "ಫ್ರಿ...ದಿ, ಫ್ರಿ...ದಿ."

ಬೇಂಬಿ ಇನ್ನು ತಡೆಯದಾದ. ದೃಢವಾಗಿ ಹೇಳಿದ,

"ನಾನಿನ್ನು ನಿಲ್ಲಲಾರೆ, ನಾನು ಹೋಗಲೇಬೇಕು."

ಮುದಿನಾಯಕ ವಿಧಿಯಿಲ್ಲದೆ ಚಿಂತೆಯಿಂದಲೇ ಅಂಗೀಕರಿಸಿದ..."ಸರಿ ಹಾಗಾದರೆ, ನಾವಿಬ್ಬರೂ ಜತೆಯಾಗಿಯೇ ಹೋಗೋಣ."

"ಹೂಂ....ನಡೆಯಿರಿ, ಬೇಗ ಹೋಗೋಣ" ಎಂದು ಅವಸರಿಸುತ್ತಾ

ಓಡಲು ಅಣಿಯಾದ ಬೇಂಬಿ.

"ಆತುರಬೇಡ ಮಗೂ, ನೀನು ನನ್ನ ಹಿಂದೆಯೇ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತಾ ಬಾ."

ಮುದಿನಾಯಕ ನಿಧಾನವಾಗಿ ನಡೆಯತೊಡಗಿದ. ಬೇಂಬಿಯ ಕಾಲ್ಗಳು ಜಿಗಿಯಲು ಹವಣಿಸುತ್ತಿದ್ದವು. ಅದನ್ನು ತಡೆದುಕೊಳ್ಳುವುದು ಬೇಂಬಿಗೆ ಕಷ್ಟವಾಗಿತ್ತು. ಹಾಗೆಯೇ ಚಡಪಡಿಸುತ್ತಾ ನಾಯಕನನ್ನು ಅನುಸರಿಸಿದ.

"ಒಂದು ವಿಷಯ ನೆನಪಿಡು. ಆ ಕೂಗು ಎಷ್ಟು ಸಲ ಕೇಳಿಸಿದರೂ ಸರಿ, ನನ್ನನ್ನು ಬಿಟ್ಟು ಹೋಗಬಾರದು. ಕರೆಯುತ್ತಿರುವುದು ಫಲೀನಾಳೇ ಆದಲ್ಲಿ ಅವಳು ನಿನ್ನನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಆದರೆ ಹೇಳ್ತಿದೀನಿ ಕೇಳು, ಅದು ಫಲೀನಾಳ ಕಂಠ ಅಲ್ಲ. ನಾನು ಹೇಳಿದಂತೆ ನಡೆದುಕೋ ..." ಎಂದು ಬಾರಿಬಾರಿಗೂ ಎಚ್ಚರಿಸಿದ ನಾಯಕ. ಬೇಂಬಿ ಒಪ್ಪಿಕೊಂಡ.

ಇಬ್ಬರೂ ಮೆಲ್ಲಮೆಲ್ಲನೆ ಮುಂದಕ್ಕೆ ನಡೆದರು. ಮುದಿನಾಯಕನಿಗೆ ನಡೆಯುವ ವಿಷಯದಲ್ಲಿ ಅಪಾರವಾದ ಬುದ್ಧಿಶಕ್ತಿಯಿತ್ತು. ಹೆಜ್ಜೆಯಿಡುತ್ತಿದ್ದರೆ ಸದ್ದೇ ಆಗುತ್ತಿರಲಿಲ್ಲ. ಒಂದು ಎಲೆಯೂ ಅಲುಗಾಡುತ್ತಿರಲಿಲ್ಲ. ಒಂದು ಕೊಂಬೆಯೂ ಗರಗರ ಎನ್ನುತ್ತಿರಲಿಲ್ಲ. ಅದು ಬಹಳ ಕಾಲದಿಂದ ಕಷ್ಟಪಟ್ಟು ಸಾಧಿಸಿದ ವಿದ್ಯೆ. ಇಲ್ಲಾ ಆತನಿಗೆ ಸ್ವತಃ ಸಿದ್ಧವಾಗಿ ಸಾಧಿಸಿತ್ತೇನೋ ಎನ್ನಿಸಿತು ಬೇಂಬಿಗೆ. ಬೇಂಬಿಯ ಮನಸ್ಸು ಫಲೀನಾಳಿಗಾಗಿ ಎಷ್ಟೇ ಆತುರಗೊಂಡಿದ್ದರೂ ಮುದಿನಾಯಕನ ಗಮನವೈಖರಿಯನ್ನು ಮೆಚ್ಚಿಕೊಳ್ಳದೆ ಇರಲಾರದಾದ.

"ಫ್ರಿ...ದಿ..." ಮತ್ತೆ ಕೇಳಿಸಿತು.

ನಿಧಾನವಾಗಿ ಹೆಜ್ಜೆಯಿಡುತ್ತಾ ಆ ಕಂಠಧ್ವನಿ ಕೇಳಿಬಂದ ಕಡೆಗೆ ನಡೆದರು.

"ನಿನಗೆ ಏನು ಕಾಣಿಸಿದರೂ ಸರಿ, ಕದಲಬೇಡ. ನನ್ನ ಹಿಂದೆಯೇ ಇರು. ಅನಾವಶ್ಯಕವಾಗಿ ಹೆದರಬೇಡ" ನಾಯಕ ಮತ್ತೊಂದು ಸಲ ಎಚ್ಚ

ರಿಕೆ ಕೊಟ್ಟ.

ಮತ್ತೂ ನಾಲ್ಕು ಹೆಜ್ಜೆ ಹಾಕುವಷ್ಟರಲ್ಲಿ ಬೇಂಬಿಗೆ ಘಾಟುವಾಸನೆ ಬಂತು. ತಲೆಸುತ್ತಿದಂತಾಗುವ ಆ ಗಬ್ಬುವಾಸನೆ ಅವನಿಗೆ ಪರಿಚಿತವಾದದ್ದೇ. ತಕ್ಷಣ ಗಾಬರಿಯಿಂದ ಕೂಗುವಂತಾಯಿತು. ಬಲವಂತವಾಗಿ ತಡೆದುಕೊಂಡ, ಕಲ್ಲಿನಂತೆ ನಿಂತಲ್ಲಿಯೇ ನಿಂತುಬಿಟ್ಟ. ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಂಡಿತು.

ಮುದಿನಾಯಕ ಗಂಭೀರವಾಗಿ ನಿಂತಿದ್ದ. ಆತನಿಗೆ ಹೆದರಿಕೆಯೇನೂ ಇದ್ದಂತಿರಲಿಲ್ಲ.

"ಅಲ್ಲಿ...." ಎಂದು ಕಣ್ಣಿನಲ್ಲಿಯೇ ತೋರಿಸಿದ ಬೇಂಬಿ.

ಅಲ್ಲಿಗೆ ಹತ್ತಿರವಾಗಿದ್ದ ಮತ್ತೊಂದು ಮರವೊಂದನ್ನು ಒರಗಿ ನಿಂತಿದ್ದ 'ಮನುಷ್ಯ', ಬಿಗಿಹಿಡಿದ ಕಂಠದಿಂದ, ಕೀರಲು ದನಿಯಲ್ಲಿ ಕೂಗುತ್ತಿದ್ದ, "ಪ್ರಿ ....ದಿ ! ಪ್ರಿ....ದಿ !"

ಅವನ ಬೆನ್ನು ಜಿಂಕೆಗಳ ಕಡೆಗಿತ್ತು, ಮುಂದುಗಡೆಗೆ ನೋಡುತ್ತಿದ್ದ. ಮುಖ ಸರಿಯಾಗಿ ಕಾಣುತ್ತಿರಲಿಲ್ಲ.

ಬೇಂಬಿ ನಿರ್ವಿಣ್ಣನಾದ. ತನ್ನಲ್ಲಿ ತಾನೇ ಗೊಣಗಿಕೊಂಡ,

"ಹೌದು, ಮನುಷ್ಯನೇ. ಫಲೀನಾಳ ಕಂಠಾನ ಅನುಕರಿಸ್ತಾ ಇದ್ದಾನೆ."

ನಿಜ ತಿಳಿದಮೇಲೆ ಬೇಂಬಿಗೆ ಜ್ಞಾನಬಂತು. ಭಯ ಅವನನ್ನು ಆವರಿಸಿತು. ಹಿಂತಿರುಗಿ ಶಕ್ತಿಯಿದ್ದಷ್ಟು ಜೋರಾಗಿ ಓಡಬೇಕೆಂಬ ಆತುರ ನರಗಳನ್ನು ಹಿಂಡಿತು.

"ಕದಲಬೇಡ" ಮುದಿನಾಯಕ ಆಜ್ಞಾಪಿಸಿದ.

ಬೇಂಬಿ ನಿಂತುಬಿಟ್ಟ. ಕೇಳಿಯೂ ಕೇಳಿಸದಂತೆ ಹೇಳಿದ ನಾಯಕನ ಮಾತಿನಲ್ಲಿ ಅಷ್ಟು ಶಕ್ತಿಯಿತ್ತು.

ಮುದಿನಾಯಕನ ಕಣ್ಣಿನಲ್ಲಿ ಹಾಸ್ಯರೇಖೆಯೊಂದು ಫಳಕ್ಕನೆ ಮಿಂಚಿ ಮಾಯವಾಯಿತು. ಅಷ್ಟರಲ್ಲಿಯೇ ವಾತ್ಸಲ್ಯ ತುಂಬಿ ಹೊರಸೂಸಿತು.

ಇನ್ನು ತಾನು ಅಲ್ಲಿರಬಾರದೆಂದು ಆ ನೋಟ ಸಾರಿ ಹೇಳಿದಂತಾಯಿತು. ಮನುಷ್ಯನಿಗೆ ಇಷ್ಟು ಹತ್ತಿರದಲ್ಲಿರುವುದು ಪ್ರಮಾದಕರ.

ಬೇಂಬಿಯ ಅಭಿಪ್ರಾಯ ಗ್ರಹಿಸಿ ಮುದಿನಾಯಕ ಹಿಂತಿರುಗಿ "ನಡೆ ಹೋಗೋಣ" ಎಂದ.

ಮುದಿನಾಯಕ ಹೆಜ್ಜೆಯಿಡುತ್ತಾ ನಡೆಯುತ್ತಿದ್ದ. ಬೇಂಬಿಗೆ ಅವನ ನಡಿಗೆಯಲ್ಲಿ ಮತ್ತೊಂದು ವಿಚಿತ್ರವಾದ ವಿಷಯ ಗೋಚರಿಸಿತು. ಯಾವುದೋ ಕಾರಣದಿಂದಾಗಿ ಆತ ನೇರವಾಗಿ ನಡೆಯುತ್ತಿರಲಿಲ್ಲ. ಅಂಕುಡೊಂಕಾಗಿ. ಹಾವಿನಂತೆ ನಡೆಯುತ್ತಿದ್ದ. ಕಾರಣ ಕೇಳುವಷ್ಟು ಧೈರ್ಯವಾಗಲಿಲ್ಲ ಬೇಂಬಿಗೆ. ಆದರೂ ತಾನು ಆತನನ್ನೇ ಅನುಕರಿಸಿ ನಡೆದ.

ನಾಯಕ ಅಲ್ಲಲ್ಲಿ ನಿಲ್ಲುತ್ತಿದ್ದ. ಕಿವಿ ನಿಮಿರಿಸಿ ಕೇಳುತ್ತಿದ್ದ. ಮತ್ತೆ ಸ್ವಲ್ಪ ಹೊತ್ತು ಅಂಕುಡೊಂಕಾದ ನಡಿಗೆ. ಮತ್ತೆ ನಿಂತ, ಮತ್ತೆ ಕೇಳಿದ. ಈ ಸಲ ಪ್ರಶಾಂತವಾಗಿ, ಬೇಸರವೇನೋ ಇಲ್ಲದಂತೆ ನೇರವಾಗಿ ನಡೆಯಲು ಪ್ರಾರಂಭಿಸಿದ.

ಅಪಾಯದಿಂದ ಪಾರಾಗಿ ಬಹಳದೂರ ಬಂದಿದ್ದೇವೆ ಎಂದು ಬೇಂಬಿಗೆ ಅರ್ಥವಾಯಿತು.

ಈಸಲ ನಾಯಕ ನಿಂತಾಗ ನಮಸ್ಕಾರ ಮಾಡಬೇಕೆಂದೂ ಕೃತಜ್ಞತೆಗಳನ್ನು ತಿಳಿಸಬೇಕೆಂದೂ ಬೇಂಬಿ ಎಷ್ಟೆಷ್ಟೋ ಅಂದುಕೊಂಡ. ಆದರೆ ಅದೊಂದೂ ನಡೆಯಲಿಲ್ಲ. ನೋಡುನೋಡುತ್ತಿದ್ದಂತೆಯೇ ಪೊದೆಗಳ ಹಿಂದೆ ಮಾಯವಾದ. ಅಷ್ಟು ವೇಗ ನಡೆದರೂ ಒಂದು ಎಲೆ ಸಹ ಅಲುಗಾಡಲಿಲ್ಲ.

ಬೇಂಬಿ ಆತನನ್ನು ಅನುಕರಿಸಲು ಪ್ರಯತ್ನಿಸಿದ. ಆದರೆ ಅದು ಅವನಿಂದಾಗಲಿಲ್ಲ. ಎಲೆಗಳು ಮೆಲ್ಲನೆ ಗಲಗಲ ಸದ್ದು ಮಾಡಿದುವು. ಹೊಟ್ಟೆಗೆ ತಾಗಿದ ಕೊಂಬೆಗಳು ಗರಗರ ಎಂದುವು. ನೆಲದಲ್ಲಿ ಬಿದ್ದ ಒಣಕೊಂಬೆಗಳು ಕಟಕ್, ಕಟಕ್ ಎಂದುವು.

ನಾಯಕ ಮಾಯವಾದ ದಿಕ್ಕಿನೆಡೆಗೆ ನೋಡುತ್ತಾ ನಿಂತ ಬೇಂಬಿ. "ಆತ

ನನ್ನನ್ನು ಕಾಪಾಡಿದರು" ಎಂದುಕೊಂಡ.

ಮೆಲ್ಲನೆ ಆ ಪೊದೆಗಳನ್ನು ದಾಟಿ ಹೊರಬಂದ, ಹಾಯಾಗಿ ಗಾಳಿ ಎಳೆದು ಕೊಂಡ. ಸ್ವೇಚ್ಛೆಯಾಗಿ ಪುನಸಾರ ಓಡಿದ. ನೆಗೆನೆಗೆದು ಬರುತ್ತಿದ್ದ ಬೇಂಬಿಯ ಶರೀರ ದಾಸವಾಳದ ತೋಪನ್ನು ಎರಡಾಗಿ ಸೀಳಿತ್ತು.

ಅವನು ಅದೇರೀತಿ ಬಹಳಹೊತ್ತು ಓಡಾಡಿದ. ಒಂದುಕಡೆ ಫಲೀನಾ ಕಾಣಿಸಿದಳು. ಅವಳನ್ನು ನೋಡುತ್ತಿದ್ದಂತೆಯೇ ಅವನ ಕಣ್ಣಿನಲ್ಲಿ ನೀರು ಉಕ್ಕಿತು. ಅಷ್ಟರಲ್ಲಿ ಸಂತೋಷವೂ ಉಂಟಾಯಿತು.

"ಫಲೀನಾ, ನಾನೊಂದು ಮಾತು ಹೇಳಲೇ ? ಕೇಳ್ತೀತಾನೆ ? ದೂರ ದಲ್ಲಿದ್ದಾಗ ನನ್ನನ್ನೆಂದೂ ಕರೆಯಬೇಡ ನೀನು ಕರೆಯಲೇಬೇಡ ಕಾಣದಿದ್ದಾಗ ಹುಡುಕುವುದರಲ್ಲಿಯೇ ಎಷ್ಟೋ ಆನಂದವಿರುತ್ತದೆ. ಸ್ವಲ್ಪ ಸಾವಕಾಶ ಆದರೇನಂತೆ ? ಆಗಲಿಬಿಡು"

ಕೆಲವು ದಿನಗಳನಂತರ ಒಂದು ದಿನ ಬೇಂಬಿ, ಫಲೀನಾ ಉಲ್ಲಾಸದಿಂದ ಕಾಡಿನಲ್ಲಿ ಓಡಾಡುತ್ತಿದ್ದರು. ಮೈದಾನವನ್ನು ದಾಟಿ ಆಚೆಕಡೆ ಇದ್ದ ಬಸರಿ ಮರದ ಬಳಿಗೆ ಹೋಗಬೇಕೆಂದು ಅವರ ಉದ್ದೇಶ.

ಸ್ವಲ್ಪ ದೂರ ಹೋದಮೇಲೆ ಬಸರಿಮರದ ಬಳಿ ಪೊದೆಗಳ ಹಿಂದೆ ಏನೋ ಅಲುಗಾಡುತ್ತಿದ್ದಂತೆ ಅನ್ನಿಸಿತು. ಕೆಂಪಗೆ ಹೊಳೆಯುತ್ತಿತ್ತದು.

"ಇನ್ನಾರು ? ಕಾರೋ ಇರಬಹುದು. ಇಲ್ಲವೇ ರೋನೋ ಆಗಿರ ಬಹುದು". ಎಂದಳು ಫಲೀನಾ.

"ಉಹೂಂ, ಅವರಿಬ್ಬರಿಗೂ ನನ್ನನ್ನು ಕಂಡರೇನೇ ಹೆದಲ್" ಎಂದ ಬೇಂಬಿ. ಫಲೀನಾಳಿಗೆ ಹಳೆಯ ವಿಷಯ ನೆನಪಾಯಿತು.

"ಹೌದು, ಹೌದು, ಅವರಾಗಿರಲಾರರು. ಮತ್ತೆ ಯಾರಿರಬಹುದು? ನಡಿಗೆ ವಿಚಿತ್ರವಾಗಿದೆಯಲ್ಲಾ !"

"ವಿಚಿತ್ರವೂ ಇಲ್ಲ, ಎಂಥದೂ ಇಲ್ಲ ಶುದ್ಧ ಬುದ್ಧಿಗೇಡಿಯಂತಿದ್ದಾನೆ.

ಶರೀರ ದೊಡ್ಡದಾಗಿದೆ. ಅಷ್ಟೆ ವ್ಯವಹಾರ ನೋಡಿದರೆ ಹುಡುಗಾಟ ಇದ್ದಂತಿದೆ. ಈ ಲೋಕದಲ್ಲಿ ಯಾವ ವಿಧವಾದ ಪ್ರಮಾದಗಳೂ ಇಲ್ಲವೇ ಇಲ್ಲವೇನೋ ಎಂಬಂತೆ ನಿಶ್ಚಿಂತೆಯಿಂದ ......"

ಫಲೀನಾ ಮುಂದೆ ಹೋಗಿ ನೋಡೋಣವೆಂದು ಉತ್ಸಾಹಪಟ್ಟಳು.

"ನಡೆ, ಹತ್ತಿರವಾಗಿ ಹೋಗಿ ನೋಡೋಣಂತೆ"

ಸರಿ, ನಡೆ"

ಇಬ್ಬರೂ ನಾಲ್ಕು ಹೆಜ್ಜೆ ಹಾಕುವಷ್ಟರಲ್ಲಿ ಫಲೀನಾಳಿಗೆ ದೊಡ್ಡ ಸಂದೇಹವೊಂದು ತಲೆದೋರಿತು.

"ನಾವು ನೋಡಲು ಹೋದರೆ ಅವನು ಜಗಳಕ್ಕೆ ಬಂದರೇನುಗತಿ? ನೋಡಲು ಬಲಿಷ್ಠನಾಗಿ ಕಾಣುತ್ತಿದಾನೆ ಕೂಡಾ"

"ಹೆಸ್" ಬೇಂಬಿ ನಿರ್ಲಕ್ಷ್ಯದಿಂದ ತಲೆ ಕೊಡವಿದ. "ಅವನ ಕಿರೀಟ ನೋಡು, ಎಷ್ಟು ಚಿಕ್ಕದಾಗಿದೆ ಅಂತ ನೋಡಿದರೆ ಗುಂಡುಕಲ್ಲಿನ ಹಾಗಿದಾನೆ. ಆದರೆ ಅದು ನಿಜವಾದ ಬಲ ಅಲ್ಲ. ಬರೀ ಬೊಜ್ಜು, ಶರೀರ ಇದ್ದಂತಿದೆ. ಅವನಿಗೆ ನಾನು ಹೆದರುತ್ತೇನೆಯೇ, ನಡೆ, ನಡೆ"

ಇಬ್ಬರೂ ಮುಂದಕ್ಕೆ ಹೆಜ್ಜೆ ಹಾಕಿದರು.

ಆ ಹೊಸ ಜಿಂಕೆ ತಲೆಬಾಗಿಸಿಕೊಂಡು ಹುಲ್ಲನ್ನು ಕಡಿಯುತ್ತಿದ್ದ. ಮೈದಾನದಲ್ಲಿ ಅರ್ಧದೂರ ಬಂದ ಮೇಲೆಯೇ ಇವರನ್ನು ಗಮನಿಸಿದ್ದು. ನೋಡಿದ ತಕ್ಷಣ ಹಾರಿ ನೆಗೆದು ಇವರ ಕಡೆಗೆ ಬಂದ. ಬೇಂಬಿ, ಫಲೀನಾ ಅಲ್ಲಿಯೇ ನಿಂತರು. ಆ ಹೊಸಜಿಂಕೆ ಓಡಿ ಬಂದು ಅವರ ಸಮೀಪದಲ್ಲಿ ನಿಂತು ಕೇಳಿತು.

"ನಿಮಗೆ ನನ್ನ ಗುರುತು ಹತ್ತಲಿಲ್ಲವೇ ?"

ಆತ ಬರುತ್ತಿದ್ದಂತೆ ಬೇಂಬಿ ತಲೆ ಮುಂದಕ್ಕೆ ಬಾಗಿಸಿ ಯುದ್ಧ ಸನ್ನದ್ಧನಾಗಿದ್ದ. ಈಗಲೂ ತಲೆ ಎತ್ತದೆ ತನ್ನ ಹುಷಾರಿನಲ್ಲಿ ತಾನಿರುತ್ತ ಕೇಳಿದ.

ಏಕೆ, ನಿನಗೆ ನಮ್ಮ ಪರಿಚಯವಿದೆಯೇನು?

ಹೊಸ ಜಿಂಕೆ ಆಶ್ಚರ್ಯದಿಂದ ಕೇಳಿತು.

"ಬೇಂಬಿ, ನಿನಗೆ ನನ್ನ ನೆನಪಿಲ್ಲವೇ ?"

ತನ್ನನ್ನು ಹೆಸರು ಹಿಡಿದು ಕೂಗಿದಾಕ್ಷಣ ಬೇಂಬಿ ತಾತ್ಕಾಲಿಕವಾಗಿ ಯುದ್ಧ ಪ್ರಯತ್ನವನ್ನು ಬಿಟ್ಟುಕೊಟ್ಟು, ಎರಡು ಹೆಜ್ಜೆ ಹಿಂದಿಟ್ಟು ತಲೆಯೆತ್ತಿದ. ಆ ಕಡೆಯಲ್ಲಿ ತನ್ನ ಬಾಲ್ಯದ ಪರಿಚಯದ ಎಳೆ ಸಿಕ್ಕಿದಂತೆನಿಸಿತು.

ಫಲೀನಾ ಒಂದು ನೆಗೆತದಲ್ಲಿ ಹೊಸ ಜಿಂಕೆಯ ಬಳಿಗೋಡಿದಳು.

"ನೀನು ಗೋಬೋ ಅಲ್ಲವೇ ?"

"ಫಲೀನಾ, ನೀನಾದರೂ ನನ್ನನ್ನು ಗುರ್ತು ಹಿಡಿದೆಯಲ್ಲ..." ಎಂದ ಗೋಬೋ ನಿಧಾನವಾಗಿ ಅವಳ ಕೆನ್ನೆಗೆ ಕೆನ್ನೆಯೊತ್ತಿದ. ಅವನ ಕಣ್ಣಿಂದ ಕಣ್ಣೀರು ಹರಿಯುತೊಡಗಿತು. ಫಲೀನಾ ಸಹ ಮೂಕಳಂತೆ ಕಣ್ಣೀರು ಹರಿಸುತ್ತಿದ್ದಳು.

"ಗೋಬೋ ...ಹೌದು...ಗೋಬೋನೇ" ಎನ್ನುತ್ತಾ ಹತ್ತಿರ ಬಂದ ಬೇಂಬಿ.

ಸತ್ತು ಹೋದನೆಂದುಕೊಂಡಿದ್ದ ಮಿತ್ರನನ್ನು ನೋಡಿ ಬೇಂಬಿಗೆ ತುಂಬಾ ಸಂತೋಷವಾಯಿತು.

"ಹಾಗಾದರೆ ನೀನು ಸತ್ತುಹೋಗಲಿಲ್ಲಾನ್ನು"

ಗೋಬೋ ಪಕಪಕನೆ ನಕ್ಕ,

"ನೋಡ್ತಿದೆಯಲ್ಲ"

"ಮತ್ತೆ...ಆದಿನ....ಮಂಜಿನಲ್ಲಿ" ಎಂದ ಬೇಂಬಿ.

ಅರ್ಧದಲ್ಲಿಯೇ ತಡೆದು ಗೋಬೋ ಹೇಳಿದ.

"ಓ...ಅಂದಿನ ವಿಷಯ ಹೇಳ್ತಿದೀಯಾ ? ಆ ಮನುಷ್ಯನೇ ನನ್ನನ್ನು ರಕ್ಷಿಸಿದ್ದು"

"ಮತ್ತೆ ಇಷ್ಟುದಿನ ಎಲ್ಲಿದ್ದೆ ?" ಕಣ್ಣುಗಳನ್ನು ಅಗಲಿಸಿ ಕೇಳಿದಳು ಫಲೀನಾ,

"ಆತನ ಹತ್ತಿರಾನೇ ಇದ್ದೆ, ಅಂದಿನಿಂದ ಇಂದಿನವರೆಗೂ ಆತನ ಬಳಿಯೇ ಇದ್ದೆ"

ಆಶ್ಚರ್ಯದಿಂದಾಗಿ ಬಾಯಿಂದ ಮಾತೇ ಹೊರಡದೆ ಕಣ್ಣುಕಣ್ಣು ಬಿಡುತ್ತಾ ನಿಂತಿದ್ದ ಫಲೀನಾ, ಬೇಂಬಿಯರನ್ನು ನೋಡಿ ನಕ್ಕ ಗೋಬೋ.

"ನಿಮ್ಮ ಕಾಡಿನಲ್ಲಿನ ವಿಷಯಗಳಿಗಿಂತಲೂ ಬೇರೆಯಾದ ಎಷ್ಟೋ ವಿಶೇಷಗಳನ್ನು ನೋಡಿದೆ ನಾನು"

ಅವನ ಮಾತು ಮತ್ತಷ್ಟು ಚಕಿತಗೊಳಿಸಿತು ಅವರನ್ನು.

"ಹೂಂ...ಬೇಗ ಹೇಳು, ಏನಾಯಿತೂಂತ?" ಎಂದಳು ಫಲೀನಾ.

"ಓ...ಅದೇ, ನನ್ನನ್ನು ಕುರಿತು ಹೇಳಬೇಕೆಂದರೆ ಕೆಲವು ದಿನಗಳೇ ಬೇಕಾಗುತ್ತೆ, ಅದಕ್ಕೆ ಕೊನೆಯೆಲ್ಲಿದೆ ?" ಎಂದ ಗೋಬೋ.

"ಅದೇನೋ ಸರಿ. ಆದರೆ ಎಲ್ಲೋ ಒಂದು ಕಡೆ ನೋಡಿ ಪ್ರಾರಂಭಿಸು ಮತ್ತೆ...." ಎಂದ ಬೇಂಬಿ.

ಗೋಬೋ ಫಲೀನಾಳ ಕಡೆ ತಿರುಗಿ, ಅನುಮಾನಿಸುತ್ತಲೇ ಮೆಲುದನಿಯಲ್ಲಿ ಕೇಳಿದ.

"ಅಮ್ಮ ಬದುಕಿದ್ದಾಳೆಯೇ?"

"ಹೂಂ, ಆದರೆ ನಾನು ಕೂಡಾ ಅಮ್ಮನ್ನ ನೋಡಿ ತುಂಬಾ ದಿನಗಳಾಯಿತು "ಎಂದಳು ಫಲೀನಾ.

"ಅಮ್ಮನ್ನ ನೋಡಬೇಕು. ಹೋಗೋಣವೇ?"

ಮೂವರೂ ಅಲ್ಲಿಂದ ಹೊರಟರು ಮೌನವಾಗಿ.

ಗೋಬೋ ತಾಯಿಯನ್ನು ನೋಡಲು ಕಾತರನಾಗಿರುವನೆಂದರಿತ ಬೇಂಬಿ, ಫಲೀನಾ ಮತ್ತೆ ಅವನನ್ನು ಮಾತನಾಡಿಸಲಿಲ್ಲ. ಸೀಳುದಾರಿ ಬಂದಾಗ, ತಪ್ಪುದಾರಿಯಲ್ಲಿ ಹೆಜ್ಜೆ ಹಾಕಿದಾಗ ಮಾತ್ರ ಅವನನ್ನು ಎಚ್ಚರಿಸುತ್ತಿದ್ದರು.

"ಅತ್ತ ಹೋಗಬೇಡ....ನೇರವಾಗಿ ನಡೆ"

"ಹಾಗಲ್ಲ ಹೀಗೆ...."

ಗಿಡಮರಗಳು ಗುಂಪಾಗಿಲ್ಲದ ಸ್ಥಳಗಳಲ್ಲಿಯೂ ಮರೆಯಾಗಿ ಅಡಗುವ ಪ್ರದೇಶಬಂದಾಗಲೂ, ಹುಷಾರಾಗಿ ಆಚೆ ಏನಿದೆ ಎಂದು ನೋಡಿ ಅನಂತರ ಹೆಜ್ಜೆ ಮುಂದಿಡುತ್ತಿದ್ದರು. ಗೋಬೋಗೆ ಅಂತಹ ಶ್ರದ್ಧೆಯೇನೂ ಇದ್ದಂತೆ ಕಾಣಲಿಲ್ಲ. ಗಕ್ಕನೆ ದಾಟಿಬಿಡುತ್ತಿದ್ದ. ಅದನ್ನು ನೋಡಿ ಬೇಂಬಿ, ಫಲೀನಾ ಆಶ್ಚರ್ಯಗೊಳ್ಳುತ್ತಿದ್ದರು. ಆದರೆ ಗೋಬೋಗೆ ಮಾತ್ರ ಏನೂ ಹೇಳದೆ ತಮ್ಮಲ್ಲಿ ತಾವು ಮುಖ ಮುಖ ನೋಡಿಕೊಳ್ಳುತ್ತಿದ್ದರು. ಮೂವರೂ ಬಹಳದೂರ ಕಾಡಿನಲ್ಲಿ ನಡೆದರು. ಚಿಕ್ಕಂದಿನಲ್ಲಿ ತಾವು ಓಡಾಡಿದ ಸಣ್ಣ ದಾರಿ ಕಾಣಸಿತು. ಬೇಂಬಿ, ಫಲೀನಾ ತನ್ನನ್ನು ಬೇಕೆಂದೇ ಅಲ್ಲಿಗೆ ಕರೆತಂದರೆಂದು ಗೋಬೋಗೆ ಅರ್ಥವಾಗಲೇ ಇಲ್ಲ.

"ನೋಡಿದಿರಾ, ನಮ್ಮ ಹಳೆಯ ಸ್ಥಳ ಕಂಡುಹಿಡಿದೆ ನಾನು" ಎಂದ ಹೆಮ್ಮೆಯಿಂದ ಗೋಬೋ ಅಲ್ಲಿನ ರಹಸ್ಯಸ್ಥಳ ಅದು. ಅಲ್ಲಿಯೇ ಅವರಿಬ್ಬರೂ ಹುಟ್ಟಿದ್ದರು. ಅಲ್ಲಿಯೇ ಅಮ್ಮನೊಂದಿಗೆ ಆಡಿ ಕುಣಿದಾಡಿದ್ದರು.

"ಇಲ್ಲಿಯೇ " ಎನ್ನುತ್ತಾ ಫಲೀನಾ ಒಳಕ್ಕೆ ಹೋದಳು. ಗೋಬೋ ಅವಳ ಹಿಂದೆಯೇ ನಡೆದ. ಹಳೆಯ ನೆನಪುಗಳಿಂದ ಅವರ ಮನ ತುಂಬಿ ಬಂತು. ಗೋಬೋ, ಫಲೀನಾ ಇಬ್ಬರೂ ಒಬ್ಬರ ಮುಖದ ಬಳಿ ಮತ್ತೊಬ್ಬರ ಮುಖವರಿಸಿಕೊಂಡು ಹಾಗೆಯೇ ನಿಂತು ಬಿಟ್ಟರು.

ಕೆಲಕ್ಷಣಗಳ ನಂತರ ಮತ್ತೆ ಅರಣ್ಯದಲ್ಲಿ ಸುತ್ತಾಡಲಾರಂಭಿಸಿದರು. ಬಿಸಿಲು ಕಾಯುತ್ತಿತ್ತು. ಆರಣ್ಯವೆಲ್ಲಾ ನಿಶ್ಶಬ್ದವಾಗಿತ್ತು. ಎಲ್ಲರೂ ವಿಶ್ರಾಂತಿ ತೆಗೆದುಕೊಳ್ಳುವ ಸಮಯ ಅದು. ಆದರೆ ಗೋಬೋಗೆ ಅದೇನೂ ಅಭ್ಯಾಸವಿದ್ದಂತಿರಲಿಲ್ಲ. ಅವನು ಕಾಡಿನಬದುಕಿನಲ್ಲಿನ ಅಭ್ಯಾಸಗಳನ್ನು ಪೂರ್ತಿ ಮರೆತಂತಿತ್ತು. ಹಾದಿಯಲ್ಲಿ ಅಡ್ಡದಿಡ್ಡವಾಗಿ ನಡೆಯುತ್ತಿದ್ದ. ಮುಂದಿನ ದಾರಿಯನ್ನು ಸರಿಯಾಗಿ ಗಮನಿಸದೆ ನಿರ್ಲಕ್ಷ್ಯವಾಗಿ ನಡೆದೇ ಬಿಡುತ್ತಿದ್ದ. ಒಂದು ಸಲ ದಾರಿಯ ಪಕ್ಕದಲ್ಲಿ ನೆಲದಮೇಲೆ ಮಲಗಿದ್ದ ಕಾಡುಕೋಳಿಗಳನ್ನು ತುಳಿಯುವದರಲ್ಲಿದ್ದ. ಅವು ಹೆದರಿ ಕೇರ್, ಕೇರ್ ಎಂದು ಕೂಗುತ್ತಾ ರೆಕ್ಕೆ

ಗಳನ್ನು ಟಪಟಪನೆ ಬಡಿದುಕೊಳ್ಳುತ್ತಾ ಮೇಲಕ್ಕೆ ಹಾರಿದುವು. ಗೋಬೋ ಬೆದರಿಬಿಟ್ಟ.

ಅವನು ಏನೂ ತಿಳಿಯದ ಪೆದ್ದನಂತೆ ಹೆಡ್ಡನಂತೆ ಕಾಣಿಸಿದ ಬೇಂಬಿಗೆ.

ನಡೆ ನಡೆಯುತ್ತಲೇ ಗೋಬೋ ಫಲೀನಾಳ ಕಡೆ ತಿರುಗಿ ವ್ಯಾಕುಲ ಕಂಠದಿಂದ "ಅಮ್ಮ ಕಾಣಿಸುತ್ತಾಳೋ ಇಲ್ಲವೋ" ಎಂದ.

ಚಿಕ್ಕಂದಿನಲ್ಲಿ ಗೋಬೋನಲ್ಲಿದ್ದ, ಪುಕ್ಕಲುತನ, ವ್ಯಾಕುಲತೆ ಮತ್ತೆ ಈಗ ಕಾಣಿಸಿಕೊಂಡಿತು.

"ಕಾಣಿಸ್ತಾಳೆ. ಇನ್ನು ಬಹಳ ದೂರವೇನಿಲ್ಲ. ಹತ್ತಿರ ಬಂದಿದೀವಿ" ಎಂದಳು ಫಲೀನಾ.

"ಹೋಗಲಿ, ಚಿಕ್ಕಂದಿನಲ್ಲಿ ಕೂಗಿದ ಹಾಗೆ 'ಅಮ್ಮಾ, ಅಮ್ಮ' ಎಂದು ಕೂಗಿ ಹೆದರಿಸೋಣವೇನು ?" ಎಂದಳು ತುಂಟತನದಿಂದ.

ಬೇಂಬಿ ಏಣಿ ಚಿಕ್ಕಮ್ಮನನ್ನು ಮೊಟ್ಟಮೊದಲು ನೋಡಿದ, ಆಕೆ ಬಾದಾಮಿ ಗಿಡದ ಕೆಳಗೆ ನೆರಳಿನಲ್ಲಿ ಮಲಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಳು.

"ಅಗೋ, ಅಲ್ಲಿ" ಎಂದು ಅವನು ಹೇಳುತ್ತಿದ್ದಂತೆಯೇ ಗೋಬೋ. ಫಲೀನಾ ಕೂಡಾ ತಾಯಿಯನ್ನು ನೋಡಿದರು.

ಮೂವರೂ ಮೌನವಾಗಿ ಆಕೆಯನ್ನು ಸಮೀಪಿಸಿದರು. ಆಕೆ ಮೆಲ್ಲನೆ ಕಣ್ಣು ತೆರೆದು ನೋಡಿದಳು.

ಗೋಬೋ ನಾಚುತ್ತಾ ಮುಂದಕ್ಕಡಿಯಿಟ್ಟ. ಕಂಪಿಸುತ್ತಿದ್ದ ಕಂಠ ದಿಂದ "ಅಮ್ಮಾ" ಎಂದ ಮೆಲ್ಲನೆ.

ಏಣಿ ಚಿಕ್ಕಮ್ಮ ಮಗನ ಕಡೆ ತದೇಕವಾಗಿ ನೋಡಿದಳು. ಅವಳ ಶರೀರವೆಲ್ಲಾ ಕಂಪಿಸಿತು. ಅವಳು ಏನೂ ಮಾತನಾಡಲಿಲ್ಲ. ಏನೂ ಕೇಳ ಲಿಲ್ಲ. ಹತ್ತಿರ ಬಂದು ಗೋಬೋನನ್ನು ಅಪ್ಪಿ ಮುತ್ತಿಟ್ಟಳು—ಚಿಕ್ಕಂದಿನಲ್ಲಿ ಮುತ್ತಿಟ್ಟ ಹಾಗೆಯೇ... ಅವಳ ಕಣ್ಣಿನಿಂದ ಆನಂದಾಶ್ರುಗಳುದುರಿದುವು.

ಗೋಬೋ ಹೇಳುವ ಕಥೆಯನ್ನು ಕೇಳಲು ಪರಿಚಯವಿದ್ದ ಅರಣ್ಯದ

ಜಂತುಗಳೆಲ್ಲಾ ಪಾರಿಜಾತದ ತೋಪಿನ ಬಳಿ ದುಂಡಾಗಿ ಹತ್ತಿರ ಹತ್ತಿರ ಕುಳಿತಪ್ಪು.

ಅಲ್ಲಿ ಮೊಲಣ್ಣ ಇದ್ದ. ಅವನು ಸತ್ತು ಹೋದ ಮೊಲ—ಮಾವನ ಮಗನೇ, ಕಿವಿ ನಿಗರಿಸಿ, ಒಂದು ಮಾತನ್ನೂ ಬಿಡದೆ ಕೇಳಿಸಿಕೊಳ್ಳಲು ಸಿದ್ಧನಾಗಿದ್ದ. ಮಾತುಮಾತಿಗೂ ಆ ಕಿವಿಗಳನ್ನು ತಟ್ಟನೆ ಕೆಳಗಿಳಿಸಿ, ಮತ್ತೆ ನೆಟ್ಟಗೆ ನಿಲ್ಲಿಸುತ್ತಿದ್ದ.

ಮೈನಾ ಬಾದಾಮಿ ಗಿಡದ ಕೆಳಗಿನ ಕೊಂಬೆಯ ಮೇಲೆ ಗೋಬೋ ತನಗೆ ಚೆನ್ನಾಗಿ ಕಾಣಿಸುವಂತೆ ಸ್ಥಳ ಮಾಡಿಕೊಂಡು ಕುಳಿತುಕೊಂಡಿತು. ಮತ್ತೊಂದು ಕಡೆ ಗೀಜಗ ಬಾಲವನ್ನು ಕೆಳಕ್ಕೂ ಮೇಲಕ್ಕೂ ಆಡಿಸುತ್ತಾ ಕುಳಿತುಕೊಂಡ. ಒಂದುಪಕ್ಕದಲ್ಲಿ ನವಿಲೂ ಆತನ ನಾಲ್ಕುಜನ ಹೆಂಡಿರೂ ಮಕ್ಕಳೂ ಕುಳಿತಿದ್ದರು. ಬಣ್ಣಬಣ್ಣದ ಕತ್ತುಗಳನ್ನು ತಿರುಗಿಸುತ್ತಾ ಕಾಡು ಕೋಳಿಗಳು ಒಂದು ಪಕ್ಕದಲ್ಲಿ ಕುಳಿತಿದ್ದುವು.

ಬಳಲಿಕೆಯೆಂಬುದೇ ಇಲ್ಲದೆ ಕೊಂಬೆಯಿಂದ ಕೊಂಬೆಗೆ ನೆಗೆದಾಡುತ್ತಾ ಅಳಿಲೂ ಅಲ್ಲಿಯೇ ಇತ್ತು. ಮಧ್ಯದಲ್ಲಿ ಒಂದು ಕ್ಷಣ ಕುಚ್ಚುಬಾಲದ ಮೇಲೆ ಕುಳಿತು ಬಿಳಿಯ ಹೊಟ್ಟೆಗೆ ಕೈಗಳನ್ನು ಒತ್ತಿಕೊಂಡಿತು. ತುಸುವೇ ಸಮಯ ಸಿಕ್ಕರೂ ಸಾಕು, ತನ್ನ ಕತೆಯನ್ನು ಹೇಳಿ ಬಿಡಬೇಕೆಂದು ಮಹಾ ಆತುರ ಪಡುತ್ತಿತ್ತು ಅದು. ಆದರೆ ಅಲ್ಲಿಗೆ ಬಂದ ಮಿಕ್ಕ ಜಂತುಗಳು ಅದರ ಬಾಯಿ ಮುಚ್ಚಿಸುತ್ತಿದ್ದುವು.

ಗೋಬೋ ತನ್ನ ಕಥೆ ಪ್ರಾರಂಭಿಸಿದ.

ಮಂಜಿನಲ್ಲಿ ಬಿದ್ದು ಏಳಲೂ ಕೈಲಾಗದೆ ಇದ್ದಾಗಿನಿಂದ ನಡೆದ ವಿಷಯಗಳನ್ನು ಹೇಳ ಬೇಕೆಂದರು ಶ್ರೋತೃಗಳು.

ಅವನು ಅಲ್ಲಿಂದಲೇ ಪ್ರಾರಂಭಿಸಿದ.

"ಬೇಟೆನಾಯಿಗಳು ನಾನಿರುವ ಜಾಗ ಗುರ್ತಿಸಿದುವು. ಆ ನಾಯಿಗಳಂತಹ ಭಯಂಕರ ಜಂತುಗಳು ಬೇರೆ ಇಲ್ಲವೆಂದೇ ಹೇಳಬೇಕು. ತುಂಬಾ

ಕ್ರೂರವಾದ ಪ್ರಾಣಗಳು ಅವು. ಬಾಯಿ ತುಂಬಾ ರಕ್ತ, ಕಂಠದಲ್ಲಿ ಕೋಪ, ದಯೆಯೆಂಬುದನ್ನೇ ಕಾಣದ ಕ್ರೂರವಾದ ನೋಟ ಅವುಗಳದು."

ಒಂದುಸಲ ತಲೆ ಮೇಲಕ್ಕೆತ್ತಿ ಎಲ್ಲರನ್ನೂ ಗಮನಿಸಿ ಮತ್ತೆ ಹೇಳ ತೊಡಗಿದ ಗೋಬೋ.

"ಆನಂತರ ಆ ಬೇಟೆನಾಯಿಗಳೊಂದಿಗೆ ಎಷ್ಟೋ ಸಲ ಆಡಿಕೊಂಡಿದ್ದೇನೆ ಅದನ್ನು ಕಂಡರೆ ನನಗೆ ಹೆದರಿಕೆ ಯೇನಿಲ್ಲ. ಆದರೂ ಈಗ್ಲೂ ಅದರ ಕೂಗನ್ನು ಕೇಳಿದರೆ ಮಾತ್ರ ನನಗೆ ಮೊದಲಿನಂತೆಯೇ ಎದೆ ಯಲ್ಲಿ ನಡುಕ ಹುಟ್ಟುತ್ತೆ. ಅವುಗಳು ಸ್ವಭಾವತಃ ಕೆಟ್ಟವೇನೂ ಅಲ್ಲ. ಅವುಗಳ ಕಂಠ ಅಂಥಾದ್ದು ಅಷ್ಟೆ" ಎಂದು ಒಂದು ಕ್ಷಣ ಮೌನವಹಿಸಿದ ಅವನು.

ಫಲೀನಾ ಆತುರದಿಂದ "ಸರಿ, ಆಮೇಲೇನಾಯಿತು?" ಎಂದಳು.

"ಹಾಂ ನಾನು ಕೆಳಗೆ ಬಿದಿದ್ದೆನಲ್ಲವೇ? ಬಾಯಿತೆರೆದುಕೊಂಡ ಕೂಗುತ್ತಾ ಆ ಬೇಟೆನಾಯಿಗಳು ಓಡೋಡಿ ಬಂದುವು. ಒಂದು ಕ್ಷಣದಲ್ಲಿ ಅವು ನನನ್ನು ಕಿತ್ತು ಚೂರು ಚೂರು ಮಾಡಿಯೇ ಬಿಡುತ್ತಿದ್ದಾವೇನೋ, ಆದರೆ ಆ ಸಮಯಕ್ಕೆ ಸರಿಯಾಗಿ ಆ ಮನುಷ್ಯ ಅಲ್ಲಿಗೆ ಬಂದ."

ಗೋಬೋ ಒಂದು ಕ್ಷಣ ತಡೆದ, ಶ್ರೋತೃಗಳು ಉಸಿರು ಬಿಗಿ ಹಿಡಿದು ಕೇಳುತ್ತಿದ್ದರು,

"ಆತ ನಾಯಿಗಳನ್ನು 'ನಿಲ್ಲಿ' ಎಂದು ಗದರಿಸಿದ. ಅವು ತಟ್ಟನೆ ಸುಮ್ಮನಾದುವು. ಮತ್ತೆ ಇನ್ನೆಂತಹುದೋ ಕೂಗು ಹಾಕಿದ. ಅವು ಹೋಗಿ ಆತನ ಕಾಲಬಳಿ ಮಲಗಿ ಬಾಲ ಅಲ್ಲಾಡಿಸಲಾರಂಭಿಸಿದುವು. ಆತ ನನ್ನ ಬಳಿ ಬಂದು ನನ್ನನ್ನು ಎತ್ತಿಕೊಂಡ."

"ಎತ್ತಿಕೊಳ್ಳೋದೆಂದರೇನು?" ಕೇಳಿದಳು ಫಲೀನಾ. ಗೋಬೋ ವಿವರಿಸಲು ಪ್ರಯತ್ನಿಸಿದ. ಅಷ್ಟರಲ್ಲಿ ಬೇಂಬಿ ಹೇಳಿದ.

"ಅಂದರೆ ಮತ್ತೇನಿಲ್ಲ. ಅಳಿಲು ತನ್ನ ಮುಂದಿನ ಕಾಲಿನಿಂದ ಬಾದಾಮಿ ಕಾಯಿಯನ್ನು ಹಿಡಿದುಕೊಳ್ಳುವುದಿಲ್ಲವೇ. ಹಾಗೆ, ಅದೇ ತರಹ ಅಷ್ಟೆ"

ತನ್ನ ಮಾತು ಬರುತ್ತಲೇ ಅಳಿಲಿಗೆ ಎಲ್ಲಿಲ್ಲದ ಹುರುಪೂ ಬಂತು. ತನ್ನ ಕತೆ ಹೇಳಲು ಅವಕಾಶ ಸಿಕ್ಕಿತೆಂದು ಸಂಭ್ರಮಗೊಂಡಿತು. ಕೀರಲು ಕಂಠದಿಂದ "ನಮ್ಮ ಬಂಧುಗಳ ಹುಡುಗಿಯೊಬ್ಬಳೂ ....." ಎಂದು ಪ್ರಾರಂಭಿಸಿತು. ಆದರೆ ಅಲ್ಲಿ ಸೇರಿದ್ದವರೆಲ್ಲಾ ಅದನ್ನು ಮಾತನಾಡಲು ಬಿಡದೆ ಗದರಿಸಿಕೊಂಡರು.

"ಉಷ್ ಉಷ್... ಸುಮ್ಮನಿರು. ಗೋಬೋ ಹೇಳೋದನ್ನು ಕೇಳಿಲ್ಲ ಸುಮ್ಮನೆ..."

ಪಾಪ! ಅಳಿಲು ಬಾಯಿ ಮುಚ್ಚಿಕೊಂಡಿತು. ಮುಖ ಚಿಕ್ಕದು ಮಾಡಿಕೊಂಡು ಕೈಗಳಿಂದ ಎದೆಯನ್ನು ಒತ್ತಿಕೊಂಡಿತು. ಮೈನಾಳ ಕಡೆ ನೋಡಿತು, ಅದಾದರೂ ತನ್ನ ಕತೆಯನ್ನು ಕೇಳುವುದೇನೋ ಎಂಬ ಆಶೆ ಯಿಂದ.

"ನಮ್ಮ ಬಂಧುಗಳ ಹುಡುಗಿಯೊಬ್ಬಳೂ...ಎಂದು ಪ್ರಾರಂಭಿಸಿತು.

ಆದರೆ ಮೈನಾ ಮುಖ ಪಕ್ಕಕ್ಕೆ ತಿರುಗಿಸಿ ಕೊಂಡಿತು.

ಗೋಬೋ ತಾನು ನೋಡಿದ ವಿಚಿತ್ರವಾದ ವಿಷಯುಗಳನ್ನು ಹೇಳಲು ಪ್ರಾರಂಭಿಸಿದ.

ಹೊರಗೆ ಮೈನಡುಗಿಸುವ ಚಳಿ ಇದ್ದರೂ ಒಳಗೆ ವಸಂತಕಾಲದಲ್ಲಿದ್ದಂತೆ ಬೆಚ್ಚಗಿರುತ್ತದೆ. ಹೊರಗೆ ವಿಪರೀತ ಮಳೆ ಸುರಿಯುತ್ತಿದ್ದರೂ ಒಳಗೆ ಒಂದೇ ಒಂದು ಹನಿ ನೀರೂ ಬೀಳುವುದಿಲ್ಲ. ಅಷ್ಟೇ ಒಣನೆಲ ಇರುತ್ತದೆ,"

"ಹೊರಗೆ ಬಿಳುಪಾದ ಮಂಜು ಗುಡ್ಡೆಗಳಂತೆ ಬಿದ್ದಿರುತ್ತದೆ. ಆದರೆ ಒಳಗೆ ಬೆಚ್ಚಗೆ ಹಾಯಾಗಿರುತ್ತದೆ. ನನಗೆ ಆಲೂಗಡ್ಡೆ, ಕಾಳು, ಗರಿಕೆ ಹುಲ್ಲು ನನಗೆ ಏನೇನು ಬೇಕೋ ಎಲ್ಲವನ್ನೂ ತಂದುಕೊಡೋರು "

"ಗರಿಕೆಹುಲ್ಲು ಸಹ ತಂದುಕೊಡೋರೇನು?" ಆಶ್ಚರ್ಯದಿಂದ ಕೇಳಿ ದುವು ಜಿಂಕೆಗಳು.

"ಹಾಂ...ಒಳ್ಳೆ ಹಸನಾದ ಗರಿಕೆ ಹುಲ್ಲು...." ಅದೆಲ್ಲಾ ತನಗೆ

ಮಾಮೂಲು, ಅತಿ ಸಾಧಾರಾಣ ಎಂಬಂತೆ ಮಾತನಾಡಿದ ಗೋಬೋ, ಒಂದು ಕ್ಷಣ ನಿಶ್ಯಬ್ಧ ಆವರಿಸಿತು. ಆ ಅವಕಾಶ ನೋಡಿಕೊಂಡು ಕೀರಲು ಕಂಠದಲ್ಲಿ ಅಳಿಲು ಆತುರದಿಂದ ತನ್ನ ಕತೆ ಪ್ರಾರಂಭಿಸಿಬಿಟ್ಟಿತು.

"ನಮ್ಮ ಬಂಧುಗಳ ಹುಡುಗಿ ಒಬ್ಬಳೂ........"

"ಬಾಯಿ ಮುಚ್ಚುತ್ತೀಯೋ ಇಲ್ಲವೋ" ಎಂದು ಮಿಕ್ಕವರು ಗದರಿಸಿದರು.

ಫಲೀನಾ ಗೋಬೋನನ್ನು ಕೇಳಿದಳು.

"ಅಂತಹ ಚಳಿಗಾಲದಲ್ಲಿ ನನಗೆ ಗರಿಕೆಹುಲ್ಲೂ ಕಾಳೂ ಎಲ್ಲಿಸಿಗುತಿತ್ತು?"

"ಆತ ಬೆಳೆಯುತ್ತಿದ್ದ. ಆತ ಬೇಕೆಂದಾಗ ಯಾವುದನ್ನಾದರೂ ಬೆಳಸ ಬಲ್ಲ. ಆತನಿಗೆ ಬೇಕಾದ್ದನ್ನೆಲ್ಲ ತರಸಿಕೊಳ್ಳಬಲ್ಲ..."

ಆಶ್ಚರ್ಯದಿಂದ ದಂಗಾದ ಅವರೆಲ್ಲರ ಬಾಯಿಂದ ಮಾತೇ ಹೊರಡಲಿಲ್ಲ. ಒಂದು ಕ್ಷಣ ಸುಮ್ಮನಿದ್ದು ಕೇಳಿದರು.

"ಆ ಮನುಷ್ಯನನ್ನು ನೋಡಿ ನಿನಗೆ ಭಯವಾಗಲಿಲ್ಲವೇ?"

ಗೋಬೋ ಪಕಪಕನೆ ನಕ್ಕ.

"ಉಹುಂ ...ನನಗೇಕೆ ಭಯ? ಆತ ನನಗೇನೂ ಅಪಕಾರ ಮಾಡೋಲ್ಲ ಅಂತ ನನಗೆ ಗೊತ್ತಿಲ್ಲ. ಹಾಗಿರುವಾಗ ನಾನೇಕೆ ಭಯಪಡಬೇಕು? ನೀವೆಲ್ಲಾ ಆತನನ್ನು ಕ್ರೂರಿ ಅಂದುಕೊಂಡಿದೀರ ಆದರೆ ಅದು ನಿಜವಲ್ಲ. ವಿಶ್ವಾಸದಿಂದ ಆತನ ಸೇವೆ ಮಾಡಿದರೆ, ಅಂತಹವರನ್ನು ಎಷ್ಟೋ ಪ್ರೀತಿಯಿಂದ ನೋಡಿ ಕೊಳ್ಳುತ್ತಾನೆ. ನನ್ನ ಉದ್ದೇಶ ಏನೆಂದರೆ ಈ ಪ್ರಪಂಚದಲ್ಲಿ ಆತನಿಗಿಂತ ಒಳ್ಳೆಯವರು ಯಾರೂ ಇರುವುದಿಲ್ಲ ..."

ತನ್ನ ಯಜಮಾನನ ಒಳ್ಳೆಯತನವನ್ನು ಗೋಬೋ ತುಂಬಾ ಹೊಗಳಿದ ಸರಿಯಾಗಿ ಅದೇ ಸಮಯದಲ್ಲಿ ಒಂದಿಷ್ಟೂ ಶಬ್ಧವಾಗದಂತೆ ಪೊದೆಗಳ ಮರೆಯಿಂದ ಮುದಿನಾಯಕ ಅವರ ಎದುರಿನಲ್ಲಿ ಬಂದು ನಿಂತ. ಗೋಬೋ ಆತನನ್ನು ನೋಡಲಿಲ್ಲ. ಆದರೆ ಮಿಕ್ಕವರೆಲ್ಲಾ ಆತನನ್ನು ನೋಡಿ. ಭಯ ಭಕ್ತಿಗಳಿಂದ ಎದ್ದುನಿಂತರು. ಆತ ಬೆಟ್ಟದಂತೆ ಅಲ್ಲಿಯೇ ನಿಂತು ನಿಶಿತ ದೃಷ್ಟಿಯಿಂದ ಗೋಬೋನನ್ನು ಪರಿಶೀಲಿಸಿ ನೋಡಿದ.

ಆದರೆ ಗೋಬೋ ಇದೇ ನನ್ನೂ ಗಮನಿಸದೆ ತನ್ನ ಪಾಡಿಗೆ ತಾನು ಹೇಳುತ್ತಲೇ ಇದ್ದ.

"ಆತನ ಮಕ್ಕಳಿಗೆ ನನ್ನನ್ನು ಕಂಡರೆ ತುಂಬಾ ಇಷ್ಟ, ಆತನ ಹೆಂಡತಿಗೆ ನಾನೆಂದರೆ ಮುದ್ದು. ನೌಕರರಿಗೆ ನನ್ನ ಮೇಲೆ ಗೌರವ. ಅವರೆಲ್ಲಾ ನನ್ನ ಮೈ ಸವರುತ್ತಿದ್ದರು. ಏನೇನೋ ತಿನ್ನಲು ಕೊಡುತ್ತಿದ್ದರು, ನನ್ನೊಂದಿಗೆ ಆಟವಾಡುತ್ತಿದ್ದರು......."

ಅಷ್ಟರಲ್ಲಿ ಗೋಬೋನ ದೃಷ್ಟಿ ಮುದಿನಾಯಕನ ಮೇಲೆ ಬಿತ್ತು. ಅವನ ಬಾಯಿಂದ ಮಾತೇ ಹೊರಡದೆ ನಿಂತುಬಿಟ್ಟ.

ನಾಯಕ ತನ್ನ ಸಹಜ ಗಂಭೀರ ಸ್ವರದಲ್ಲಿ ಗೋಬೋನನ್ನು ಕೇಳಿದ,

"ನಿನ್ನ ಕಂಠದ ಸುತ್ತಲೂ ಕಾಣಿಸುತ್ತಿರುವ ಆ ಕಲೆ ಏನು?"
ಅದುವರೆವಿಗೂ ಕಂಠದ ಸುತ್ತಲೂ ಕೂದಲು ಉದುರಿಬಿದ್ದಿದ್ದ ಕಲೆ ಕಾಣು ತ್ತಿದ್ದುದನ್ನು ಯಾರೂ ಗಮನಿಸಿಯೇ ಇರಲಿಲ್ಲ. ಈಗ ಗಮನವಿಟ್ಟು ನೋಡಿ ಕೇಳಿದರು,

"ಹೌದಲ್ಲಾ ಏನದು?"

ಗೋಬೋ ಒಂದು ಕ್ಷಣ ಗಾಬರಿಯಾದ. ತಡವರಿಸಿದ.

"ಇದೇ...ಇದೇನೂ ಇಲ್ಲ, ನನ್ನ ಕಂಠಕ್ಕೆ ಒಳ್ಳೆ ಪಟ್ಟಿಯೊಂದನ್ನು ಹಾಕಿದ್ದ ಆತ. ಅದರ ಗುರ್ತು ಅಷ್ಟೆ. ಅದನ್ನು ಹಾಕಿಕೊಳ್ಳೋದೇ ಒಂದು ಅದೃಷ್ಟದ ವಿಷಯ. ನಾನದನ್ನ ಹಾಕಿಕೋತಾ ಇದ್ದೆ."

ಮುದಿನಾಯಕ ಸ್ವಲ್ಪ ಹೊತ್ತು ಗೋಬೋನ ಕಡೆ ನೋಡುತ್ತಿದ್ದು, ನಂತರ ಕರುಣೆಯಿಂದ ಹೇಳಿದ.

"ದುರದೃಷ್ಟವಂತ" ಹೀಗೆಂದು ತಕ್ಷಣ ಅಲ್ಲಿಂದ ಹೊರಟು ಮಾಯವಾದ.

ಎಲ್ಲರೂ ನಿಶ್ಶಬ್ದವಾಗಿದ್ದ ಆ ಅವಕಾಶವನ್ನು ಉಪಯೋಗಿಸಿಕೊಂಡು ಅಳಿಲು ಗಬಗಬನೆ ತನ್ನ ಕಥೆಯನ್ನು ಹೇಳಿ ಮುಗಿಸಿತು.

"ನಮ್ಮ ಬಂಧುಗಳ ಹುಡುಗಿಯೊಬ್ಬಳು ಆ ಮನುಷ್ಯನ ಹತ್ತಿರ ಇದ್ದಳು. ಅವಳನ್ನ ಆತ ಬಹಳ ದಿನ ಬಂಧಿಯಾಗಿಟ್ಟಿದ್ದ...ತುಂಬಾದಿನ ಹಾಗೇ ಇದ್ದಳಂತಿಟ್ಟುಕೊಳ್ಳಿ.. ಹೀಗಿರೋವಾಗ ಒಂದುದಿನ ಆ ಹುಡುಗೀನ ..."

ಅಳಿಲಿನ ಕಥೆಯನ್ನು ಯಾರೂ ಕೇಳಲಿಲ್ಲ. ಅವರವರ ಆಲೋಚನೆಗಳಲ್ಲಿ ಮುಳುಗಿ ತಮ್ಮ ಪಾಡಿಗೆ ತಾವು ಹೊರಟುಹೋದರು.

ಅಷ್ಟರಲ್ಲಿ ಮರೀನಾ ಅಲ್ಲಿಗೆ ಬಂದಳು. ಅವಳ ಬರವನ್ನು ಯಾರೂ ಗಮನಿಸಲಿಲ್ಲ.

ಹಿಂದಿನ ಚಳಿಗಾಲದಲ್ಲಿ ಗೋಬೋ ಮಾಯವಾಗುವ ಹೊತ್ತಿಗೇ ಅವಳು ಬೆಳೆದ ಹುಡುಗಿ. ಆ ನಂತರ ಅವಳನ್ನು ಯಾರೂ ನೋಡಲಿಲ್ಲ. ಯಾರ ಕಣ್ಣಿಗೂ ಬೀಳದೆ ಎಲ್ಲಿಯೋ ಓಡಾಡಿಕೊಂಡಿದ್ದಳು.

ಅಳಿಲು, ಮೈನಾ, ಗೀಜಗ, ಇವರೆಲ್ಲಾ ಹೇಳುತ್ತಿದ್ದ, ಗೋಬೋ ಹಿಂತಿರುಗಿದ ಕತೆ ಕೇಳಿದಳು. ವಿಚಿತ್ರವಾದ ಪರಿಸ್ಥಿತಿಯಲ್ಲಿ ಮನುಷ್ಯನ ಬಳಿ ಅಷ್ಟುದಿನ ಇದ್ದು ಬಂದ ಗೋಬೋನನ್ನು ನೋಡಿ ಮಾತನಾಡಿಸಿಕೊಂಡು ಹೋಗೋಣವೆಂದು ಅದೇ ಕೆಲಸವಾಗಿ ಬಂದಿದ್ದಳು.

ತನ್ನ ಮಗನನ್ನು ನೋಡಲೆಂದೇ ಮರೀನಾ ಬಂದದ್ದು ಏಣ ಚಿಕ್ಕಮ್ಮನಿಗೆ ತುಂಬಾ ಸಂತೋಷವನ್ನುಂಟುಮಾಡಿತ್ತು. ಅವಳಿಗೀಗ ಹೊಸ ಹುರುಪು ಬಂದಿತ್ತು. ತನ್ನ ಬದುಕಿನಲ್ಲಿ ಇದೇ ಮಧುರಾತಿಮಧುರವಾದ ತಿರುವು ಅನ್ನಿಸಿತ್ತವಳಿಗೆ. ಅರಣ್ಯದಲ್ಲೆಲ್ಲಾ ತನ್ನ ಮಗನದೇ ಮಾತು. ಆ ಕೀರ್ತಿ ಕಥೆಗಳಲ್ಲಿ ಪೂರ್ತಿ ಮುಳುಗಿಹೋಗಿದ್ದಳವಳು.

ಪ್ರಪಂಚದಲ್ಲೆಲ್ಲಾ ತನ್ನ ಗೋಬೋನಂತಹ ಜಾಣ ಕೀರ್ತಿ ಪ್ರತಿಷ್ಠೆಗಳನ್ನು ಸಂಪಾದಿಸಿದ ವೀರ ಮತ್ತೊಬ್ಬನಿಲ್ಲವೆಂಬ ದೃಢವಾದ ನಂಬಿಕೆ ಅವಳಿಗೆ. ಅರಣ್ಯದ ಜೀವಗಳೆಲ್ಲಾ ಹಾಗೆಯೇ ಭಾವಿಸಬೇಕೆಂದು ಅವಳ ಇಚ್ಛೆ.

"ಏನೇ ಮರೀನಾ, ಏನಂತೀಯಾ ? ಗೋಬೋ ವಿಷಯ ಕೇಳ್ತಿದೀನಿ-ನಿನ್ನ ಅಭಿಪ್ರಾಯ ಏನು ?"

ಅವಳ ಉತ್ತರಕ್ಕಾಗಿ ಕಾಯದೆ ತಾನೇ ಹೇಳತೊಡಗಿದಳು,

"ನವೀನ ಅಂದದ್ದು ನೆನಪಿದೆಯೇನು ? ಚಳಿಗಾಲದಲ್ಲಿ ಸ್ವಲ್ಪ ಚಳಿ ಅಂದದ್ದಕ್ಕೆ ಎಷ್ಟು ಕೀಳಾಗಿ ಮಾತನಾಡಿದಳಲ್ಲಾ ! ಅವನಿಂದ ನನಗೆ ತೊಂದರೆಯೇ ಹೊರತು ಸುಖವಿಲ್ಲ ಅಂದಿದ್ದಳು, ನೆನಪಿದೆಯೇ?"

"ಗೋಬೋನಿಂದ ನಿನಗೆ ಚಿಂತೆಯುಂಟಾದದ್ದು ನಿಜಾತಾನೆ ?" ಎಂದಳು ಮರೀನಾ.

"ಹಾಂ.... ಅದು ಯಾವಕಾಲದ ಮಾತು."

ಈಗ ಆ ತರಹದ ಸಣ್ಣಪುಟ್ಟ ವಿಷಯಗಳನ್ನು ನೆನಪುಮಾಡಿಕೊಡುವ ಅಗತ್ಯವೇನು ಎಂಬಂತೆ ಆಶ್ಚರ್ಯ ವ್ಯಕ್ತಪಡಿಸಿದಳು ಏಣಿ ಚಿಕ್ಕಮ್ಮ.

"ನನ್ನ ಮಗ ಎಷ್ಟರ ಮಟ್ಟಿಗೆ ಆಗಿದ್ದಾನೆ ಅಂತ ನೋಡಿದರೆ ನವೀನಾ ಈಗ ಏನಂತಿದ್ದಳೋ! ಪ್ರಾಪ್ತವಿಲ್ಲ ಅವಳಿಗೆ ಪ್ಚ ಪ್ಚ..."

ಮರೀನಾ ದುಃಖದಿಂದ "ಹೌದು, ಬದುಕಿದ್ದರೆ ಎಷ್ಟೋ ಸಂತೋಷಪಡುತ್ತಿದ್ದಳು" ಎಂದಳು.

ಅಮ್ಮನ ಹೊಗಳಿಕೆ ಗೋಬೋನಿಗೆ ವಸಂತದಲ್ಲಿನ ಬಿಸಿಲಿನಂತೆ ಮಹದಾನಂದನ್ನುಂಟುಮಾಡಿತ್ತು.

"ನಮ್ಮ ಗೋಬೋನ ನೋಡೋಕೆ ಅಂತ ಕೊನೆಗೆ ಮುದಿನಾಯಕನಂತಹ ಹಿರಿಯ ಸಹ ಬಂದಿದ್ದ. ಆತ ಯಾರಿಗೂ ಕಾಣಿಸಿಕೊಳ್ಳೋದೇ ಇಲ್ಲ. ಅಂಥಾದ್ದು ಗೋಬೋಗೋಸ್ಕರ ಬಂದಿದ್ದ...." ಎಂದು ಏಣಿ ಚಿಕ್ಕಮ್ಮ ಗುಟ್ಟು ಹೇಳುವವಳಂತೆ ಕಂಠ ತಗ್ಗಿಸಿ ಹೇಳಿದಳು.

ಗೋಬೋ ಮುದಿನಾಯಕನ ಹೆಸರನ್ನು ಕೇಳಿ ತನ್ನ ಅಸಂತೃಪ್ತಿಯನ್ನು ವ್ಯಕ್ತಪಡಿಸಿದ,

"ಅದೆಲ್ಲಾ ಸರಿ, ಆದರೆ ನನ್ನನ್ನು ದುರದೃಷ್ಟವಂತ ಅಂತ ಅಂದಿದ್ದು

ಏಕೆ ಅಂತ ಕೇಳಬೇಕೆನಿಸಿತು ನನಗೆ."

ಏಣಿ ಗೋಬೋನನ್ನು ಸಮಾಧಾನಪಡಿಸಿದಳು,

"ಅಂ....ಏನಿಲ್ಲಬಿಡು, ಆತನಿಗೂ ವಯಸ್ಸಾಯಿತಲ್ಲಾ! ಸ್ವಲ್ಪ ಬುದ್ಧಿ ನೆಟ್ಟಗಿರೊಲ್ಲ ನೋಡು."

ಆ ಮಾತಿನಿಂದ ಗೋಬೋಗೆ ಸಮಧಾನವಾಗಲಿಲ್ಲ.

"ಹಾಗೇಕಂದದ್ದು ಅಂತ ಅರ್ಥವಾಗಲಿಲ್ಲ ನನಗೆ. ನಾನು ದುರದೃಷ್ಟವಂತನೇ? ನನ್ನ ದುರದೃಷ್ಟ ಆತನಿಗೇನು ಕಾಣಿಸಿತು? ಈ ಅರಣ್ಯದಲ್ಲಿನ ಒಂದು ಜಂತುವಾದರೂ ನಾನು ನೋಡಿದ ಆಶ್ಚರ್ಯಕರವಾದ, ಅದ್ಭುತವಾದ ವಿಷಯಗಳ ಬಗ್ಗೆ ಯಾರಿಗಾದರೂ ಗೊತ್ತಿದೆಯೋ? ಏನಂತೀಯಾ ಮೇರಿನಾ?"

"ನಿಸ್ಸಂದೇಹವಾಗಿ ನಿನ್ನ ಮಾತು ಸರಿ, ನಿನಗಿಂತ ಹೆಚ್ಚಾಗಿ ತಿಳಿದವರು ಯಾರಿದ್ದಾರೆ ಇಲ್ಲಿ!"

ಅಂದಿನಿಂದ ಗೋಬೋ ಮರೀನಾ ಜತೆಯಾಗಿ ತಿರುಗಾಡಲಾರಂಭಿಸಿದರು.

ಬೇಂಬಿಗೆ ಮುದಿನಾಯಕನನ್ನು ನೋಡಬೇಕೆನಿಸಿತ್ತು. ಆತನಿಗೋಸ್ಕರ, ರಾತ್ರಿ ಸಮಯಗಳಲ್ಲಿಯೂ ಹಗಲಿನಲ್ಲಿಯೂ, ಫಲೀನಾ ಜತೆಯಲ್ಲಿದ್ದಾಗಲೂ, ಹೊಸ ಹೊಸ ದಾರಿಗಳಲ್ಲಿ ತಿರುಗಾಡುತ್ತಾ ಮುದಿನಾಯಕನಿಗೋಸ್ಕರ ಹುಡುಕತೊಡಗಿದ.

ಫಲೀನಾ ಜತೆಯಲ್ಲಿದ್ದಷ್ಟು ಹೊತ್ತು ಅವನಿಗೆ ಸಂತೋಷವಾಗಿ ಕಾಲ ಕಳೆದುಹೋಗುತ್ತಿತ್ತು. ಅವಳು ಹುರುಪಿನಿಂದ ಉಲ್ಲಾಸವಾಗಿ, ಹೇಳುವ ಮಾತು, ಕತೆಗಳನ್ನು ಕೇಳುತ್ತಾ ಹಾಯಾಗಿ ಕಾಲಕಳೆಯುತ್ತಿದ್ದ. ಅವಳೊಂದಿಗೇ ಊಟ ಮಾಡುತ್ತಿದ್ದ. ಮೈದಾನದಲ್ಲಿ, ಪಾರಿಜಾತದ ತೋಟಗಳಲ್ಲಿ ಬಾದಾಮಿಗಿಡದ ನೆರಳಿನಲ್ಲಿ, ದಾಸವಾಳದ ತೋಪುಗಳಲ್ಲಿ ಅವಳೊಂದಿಗೆ ಚಕ್ಕಂದವಾಡುತ್ತಾ ಕಾಲಕಳೆಯುತ್ತಿದ್ದ. ಆದರೂ ಮೊದಲಿಗೂ ಈಗ್ಯೂ ವ್ಯತ್ಯಾಸವೆಂದರೆ ಈಗ ಅವಳೊಂದಿಗಿನದೇ ಪ್ರಪಂಚವೆಂಬಂತಿರಲಿಲ್ಲ.

ಮೊದಲಲ್ಲಿ ಫಲೀನಾ ಜತೆಯಲ್ಲಿದ್ದರೆ ಸಾಕು. ಏನೂ ಬೇಕೆನಿಸುತ್ತಿರಲಿಲ್ಲ. ಮುದಿನಾಯಕನ ಆಲೋಚನೆ ರೇಖಾಮಾತ್ರವಾಗಿ ಅವನ ಮನಸ್ಸಿನಲ್ಲಿ ಸುಳಿಯುತ್ತಿತ್ತು. ಆದರೆ ಈಗಿನ ಪರಿಸ್ಥಿತಿಯೇ ಬೇರೆ, ನಾಯಕನಿಗಾಗಿ ಹುಡುಕುತ್ತಿದ್ದಾಗ ಫಲೀನಾಳ ನೆನಪಾಗುತ್ತಿದ್ದುದು ಅಪರೂಪ.

ಗೋಬೋನನ್ನು ಕುರಿತು ನಾಯಕ ಹೇಳಿದ ಮಾತು ಬೇಂಬಿಯ ಕಿವಿಯಲ್ಲಿ ಗುಂಯ್ಗುಡುತ್ತಿತ್ತು. ಗೋಬೋ ಹಿಂದಿರುಗಿ ಬಂದಾಗಿನಿಂದ ಬೇಂಬಿಯ ಹೃದಯದಲ್ಲಿ ಏನೋ ತಳಮಳವುಂಟಾಗಿತ್ತು. ಅವನ ಪದ್ಧತಿಗಳನ್ನು ನೋಡಿದರೆ ಅಯ್ಯೋ ಅನಿಸುತ್ತಿತ್ತು. ಅವನ ವಿಷಯದಲ್ಲಿ ಅವ್ಯಕ್ತವಾದ ಭಯ ಅವನಲ್ಲಿ ಮನೆಮಾಡಿಕೊಂಡಿತ್ತು.

ಆಗಾಗ ಗೋಬೋನ ಭೇಟಿಯಾಗುತ್ತಿತ್ತು. ಆಗೆಲ್ಲಾ ನೇರವಾಗಿ ಮಾತನಾಡುವ ಅವನ ಧೋರಣೆ, ಅವನಲ್ಲಿ ಕಂಡುಬರುವ ಆತ್ಮವಿಶ್ವಾಸ, ತನ್ನ ಹಿರಿಮೆಯ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲದಿರುವಿಕೆ,—ಅದಕ್ಕೂ 'ದುರದೃಷ್ಟವಂತ' ಎಂದ ನಾಯಕನ ಮಾತಿಗೂ ಹೊಂದಾಣಿಕೆ ಕಾಣದೆ ಕಳವಳಗೊಳ್ಳುತ್ತಿದ್ದ.

ಒಂದು ಕತ್ತಲ ರಾತ್ರಿಯಲ್ಲಿ ಬೇಂಬಿ ಕಾಡಿನಲ್ಲಿ ತಿರುಗಾಡುತ್ತಿದ್ದ. ಆಗ ಆಕಸ್ಮಾತ್ತಾಗಿ ಅವನ ಹಳೆಯ ಸ್ನೇಹಿತ ಗೂಬೆಯ ಕೂಗು ಕೇಳಿಸಿತು. ಆ ಕೂಗನ್ನು ಕೇಳಿ ಬೇಂಬಿ ಗಾಬರಿಯಿಂದ ಮುಂದಕ್ಕೆ ನೆಗೆದ. ಅಷ್ಟರಲ್ಲಿ ಆ ಕೂಗು ಯಾರದ್ದೆಂದು ಅರ್ಥವಾಗಿ ತನ್ನನ್ನು ತಾನು ಸಂಬಾಳಿಸಿಕೊಂಡ. ತಟ್ಟನೆ ಅವನ ಮನಸ್ಸಿನಲ್ಲಿ ಒಂದು ಆಲೋಚನೆ ಹೊಳೆಯಿತು. ಈ ಗೂಬೆಗೇನಾದರೂ ನಾಯಕ ಇರುವ ಸ್ಥಳ ತಿಳಿದಿರಬಹುದೇ ಎಂದು. ಕೂಡಲೇ ಕೇಳಿದ,

ನಮ್ಮ ಮುದಿನಾಯಕರು ಈಗ ಎಲ್ಲಿರುತ್ತಾರೋ ತಮಗೇನಾದರೂ ಗೊತ್ತೆ?"

ತನಗೇನೂ ತಿಳಿಯದೆಂದು ಹೇಳಿತು ಗೂಬೆ. ಆದರೆ ಬೇಂಬಿಗೆ, ಗೂಬೆ ತನ್ನಿಂದ ಏನನ್ನೋ ಮುಚ್ಚಿಡುತ್ತಿದೆ ಅನ್ನಿಸಿತು.

"ಉಹೂಂ, ನಿಮಗೆ ತಿಳಿಯದೊಂದರೆ ನಾನು ನಂಬಲಾರೆ. ನೀವು ತುಂಬಾ ಜಾಣರು. ಕಾಡಿನಲ್ಲಿ ಎಲ್ಲಿ ಏನು ನಡೆದರೂ ಅದರ ವಿಷಯ ನಿಮಗೇ ಮೊದಲು ತಿಳಿಯುತ್ತದೆ. ಹಾಗಿರುವಾಗ ಇಷ್ಟು ಚಿಕ್ಕ ವಿಷಯ ನಿಮಗೆ ತಿಳಿಯದೊಂದರೆ ಹೇಗೆ ನಂಬೋದು. ನೀವೇ ಹೇಳಿ."

ಗೂಬೆ ಉಬ್ಬಿಹೋಯಿತು. ರೆಕ್ಕೆಗಳನ್ನು ಬಿಡಿದುಕೊಳ್ಳುತ್ತಾ ಚೆಂಡಿನಂತೆ ಮೈ ಉಬ್ಬಿಸಿ ಕುಳಿತುಕೊಂಡಿತು,

"ನನಗೆ ನಾಯಕ ಇರುವ ಸ್ಥಳ ತಿಳಿಯದೆ ಏನಂತೆ? ಆದರೆ ...ಅದನ್ನ ...ಹೇಳಿದರೆ ಹೇಗೋಂತ."

ಬೇಂಬಿ ಬೇಡಿಕೊಳ್ಳತೊಡಗಿದ.

"ನೀವು ಹೇಳಿದಿರಿ ಅಂತ ಯಾರೊಂದಿಗೂ ಹೇಳೋಲ್ಲ ನಾನು. ಬೇಕಾದರೆ ಆಣೆ ಮಾಡುತ್ತೇನೆ, ತಮ್ಮ ಮೇಲೆ ನನಗಿರುವ ಗೌರವಭಾವನೆ ತಮಗೆ ಗೊತ್ತೇ ಇದೆ, ಅಲ್ಲವೇ?"

ಗೂಬೆ ಮತ್ತೆ ಚೆಂಡಿನಂತೆ ಉಬ್ಬಿತು ದುಂಡನೆಯ ತನ್ನ ಕಪ್ಪು ಕಣ್ಣುಗಳನ್ನು ಎರಡೂ ಕಡೆಗೂ ತಿರುಗಿಸಿತು.

"ಓಹೋ, ನಿಮಗೆ ನನ್ನ ಮೇಲೆ ತುಂಬಾ ಗೌರವದ ಭಾವನೆ ಸರಿ, ಆದರೆ ಅದೇಕೆಂದು ನಾನು ತಿಳಿದುಕೊಳ್ಳಬಹುದೇ?"

ಬೇಂಬಿ ಹೊಗಳಿಕೆ ಮುಂದುವರಿಸಿದ,

"ತಾವು ವಿಜ್ಞಾನನಿಧಿ. ಮತ್ತು ಸದಾ ಮರ್ಯಾದೆಯಿಂದಲೂ ಉಲ್ಲಾಸದಿಂದಲೂ ಮಾತನಾಡುತ್ತೀರಿ. ಎಷ್ಟೋ ಚಾಕಚಕ್ಯತೆಯಿಂದ ದಾರಿಯಲ್ಲಿ ಹೋಗುವವರನ್ನು ಭಯಪಡಿಸಬಲ್ಲಿರಿ. ಆ ವಿದ್ಯೆ ಎಲ್ಲರಿಗೂ ಅಷ್ಟು ಸುಲಭವಾಗಿ ಕರಗತವಾಗುವುದಿಲ್ಲ. ಅದಕ್ಕೆಷ್ಟು ಜಾಣತನ ಬೇಕು, ಏನು ಕಥೆ! ನನಗೇನಾದರೂ ಆ ವಿದ್ಯೆ ಬಂದಿದ್ದರೆ..."

ಗೂಬೆಗೆ ತೃಪ್ತಿಯಾಯಿತು. ಸಂತೋಷವಾಯಿತು. ಮೂಗಿನಿಂದ ತನ್ನ ರೆಕ್ಕೆಗಳನ್ನು ಸವರಿಕೊಂಡಿತು.

"ಮುದಿನಾಯಕರಿಗೆ ನಿಮ್ಮ ಮೇಲೆ ತುಂಬಾ ಪ್ರೀತಿ ಅಂತ ನನಗೆ ಗೊತ್ತು."

ಬೇಂಬಿಯ ಹೃದಯ ಡವಡವನೆ ಹೊಡೆದುಕೊಂಡಿತು.

"ತಮಗೆ ಹಾಗನ್ನಿಸಲು ಕಾರಣವೇನು?"

ಗೂಬೆ ತಲೆ ಅಲ್ಲಾಡಿಸುತ್ತಾ "ನನಗೆ ಗೊತ್ತು ಬಿಡಿ...ನಿಮ್ಮ ಮೇಲೆ ತುಂಬಾ ವಾತ್ಸಲ್ಯ ಅವರಿಗೆ. ಆದ್ದರಿಂದ ಅವರಿರುವ ಸ್ಥಳ ನಿಮಗೆ ತಿಳಿಸುವುದರಲ್ಲಿ ತಪ್ಪೇನಿಲ್ಲ..."

ಮತ್ತೆ ಮೂಗಿನಿಂದ ರೆಕ್ಕೆಗಳನ್ನು ಸವರಿಕೊಂಡಿತು. ಓರೆನೋಟದಿಂದ ಬೇಂಬಿಯ ಕಡೆ ನೋಡುತ್ತಾ ಸಂಭಾಷಣೆಯನ್ನು ಮುಂದುವರಿಸಿತು.

"ಬೇಲದ ತೋಪು ಗೊತ್ತಲ್ಲವೇ ನಿಮಗೆ?"

ಬೇಂಬಿ ತಲೆ ಆಡಿಸಿದ,

"ಹಾಂ...."

"ಅದರ ಈಶಾನ್ಯ ದಿಕ್ಕಿನಲ್ಲಿ ದೊಡ್ಡ ಬಸರಿ ಮರ ಇದೆ. ಎಂದಾದರೂ ನೋಡಿದೀರಾ?"

"ಉಹುಂ ಆ ಕಡೆ ನಾನೆಂದೂ ಹೋಗಿಲ್ಲ" ಎಂದು ಒಪ್ಪಿಕೊಂಡ ಬೇಂಬಿ.

"ಹಾಗಾದರೆ ಗಮನವಿಟ್ಟು ಕೇಳಿ ಎಂದು ಗೂಬೆ ಕಂಠ ತಗ್ಗಿಸಿ ಗುಟ್ಟಾಗಿ ಹೇಳಿತು. ಬೇಲದ ತೋಪಿನಿಂದ ಈಶಾನ್ಯ ದಿಕ್ಕಿನಲ್ಲಿ ಬಸರಿಮರ, ಆ ಮರದಿಂದಾಚೆಗೆ ಪುಟ್ಟ ಕಾಡಿನಂತಹ ಪ್ರದೇಶವಿದೆ. ಅದರ ಮಧ್ಯದಲ್ಲಿ ಹಿಂದಿನ ವರ್ಷ ಬಿರುಗಾಳಿ ಬೀಸಿದಾಗ ಮುರಿದು ಬಿದ್ದ ನೇರಳೆಮರ ಇದೆ. ಅಲ್ಲಿಗೆ ಹೋಗಿ ಹುಡುಕಿ. ನಾನು ಹೇಳಿದೆಂತ ಮಾತ್ರ ಬಾಯಿ ಬಿಡಬೇಡಿ, ಗೊತ್ತಾಯಿತೇ?"

"ಆ ಗಿಡದ ಕೆಳಗೆ ಇದಾರೇನು?"

"ಮುರಿದುಬಿದ್ದ ನೇರಳೆಗಿಡದ ಕೆಳಗೆ ದೊಡ್ಡ ಹಳ್ಳ ಇದೆ, ಅದರಲ್ಲಿರುತ್ತಾರೆ ನಾಯಕರು."

ಬೇಂಬಿಗೆ ತುಂಬಾ ಸಂತೋಷವಾಯಿತು.

"ನಿಮ್ಮ ಉಪಕಾರ ಎಂದಿಗೂ ಮರೆಯುವುದಿಲ್ಲ ನೀವು ಹೇಳಿದ ವಿಷಯಗಳನ್ನೆಲ್ಲಾ ನೆನಪಿನಲ್ಲಿಟ್ಟುಕೊಂಡು ಹಾಡಬಲ್ಲೆನೋ ಇಲ್ಲವೋ ಕಾಣೆ. ಆದರೆ ನಿಮ್ಮ ಸಹಾಯವನ್ನು ಮಾತ್ರ ಎಂದಿಗೂ ಮರೆಯಲಾರೆ...."

ಬೇಂಬಿ ಜಿಗಿಯುತ್ತಾ ಮುಂದೆ ನಡೆದ. ಅವನ ಹಿಂದೆಯೇ ಸದ್ದು ಮಾಡದಂತೆ ಹಾರಿಬರುತ್ತಿತ್ತು ಗೂಬೆ. ಆಕಸ್ಮಾತ್ತಾಗಿ "ವೂ ಇಕ್! ವೂ ಇಕ್" ಎಂದು ಕೂಗಿತು. ಬೆಚ್ಚಿಬಿದ್ದ ಬೇಂಬಿ ತಲೆಯೆತ್ತಿ ನೋಡಿದ.

"ನೀವು ಹೆದರಿಬಿಟ್ಟಿರೇನು?" ಸಂತೋಷದಿಂದ ಕೇಳಿತು ಗೂಬೆ.

"ಮತ್ತೆ!...."

ಈ ಸಲ ಬೇಂಬಿ ನಿಜವನ್ನೇ ನುಡಿದಿದ್ದ. ಗೂಬೆಗೆ ತೃಪ್ತಿಯಾಯಿತು.

"ನಿನ್ನ ಹೆಸರು ಹೇಳಬೇಡಿ ಅಂತ ನೆನಪಿಸೋಣ ಅಂತ ಬಂದೆ, ಅಷ್ಟೆ ಮತ್ತೇನಿಲ್ಲ."

ಬೇಂಬಿ ಮುಂದಕ್ಕೆ ಧಾವಿಸಿದ. ಬೇಲದ ತೋಪಿನ ಬಳಿಗೆ ಹೋಗುವ ವೇಳೆಗೆ ಆ ಪುಟ್ಟ ಕಾಡಿನೊಳಗಿನಿಂದ ನಾಯಕ ಪ್ರತ್ಯಕ್ಷನಾದ.

"ಎಲ್ಲಿಗೆ ಹೋಗುತ್ತಿದ್ದೀ? ಈ ಕಡೆ ಏನಾದರೂ ಕೆಲಸವಿತ್ತೇ?

ಬೇಂಬಿ ನಾಚಿ ನೀರಾದ, "ಆಹಾಂ, ಏನಿಲ್ಲ...ಅಂತಹ ಮುಖ್ಯವಾದ ಕೆಲಸ ಏನಿಲ್ಲ..." ಎಂದು ಗೊಣಗಿದ.

ಒಂದು ನಿಮಿಷ ನಾಯಕ ಮೌನವಾಗಿ ನಿಂತ. ಅನಂತರ ಆಪ್ಯಾಯತೆ ತುಂಬಿದ ಕಂಠದಿಂದ ಹೇಳಿದ, "ಈ ನಡುವೆ ನೀನು ನನಗೋಸ್ಕರ ಹುಡುಕ್ತಾ ಇರೋಹಾಗಿದೆಯಲ್ಲಾ! ನಿನ್ನೆ ಎರಡುಸಲ ಈ ಕಡೆ ಬಂದುಹೋದಿ ಏನು ವಿಶೇಷ?"

"ನೀವು ಗೋಬೋನನ್ನು ಹಾಗೇಕಂದಿರೋ ತಿಳಿದುಕೊಳ್ಳೋಣಾಂತ."

"ನಾನಂದಿದ್ದು ಸರಿಯಲ್ಲ ಅನ್ನೋ ಅನುಮಾನ ಇದೆಯೇನು ನಿನಗೆ?"

"ಉಹುಂ... ಹಾಗೇನಿಲ್ಲ. ನೀವಂದದ್ದು ಸರಿ ಅಂತಲೇ ನನಗೂ ಅನ್ನಿಸ್ತಿದೆ, ಆದರೆ..."

ಮುದಿನಾಯಕ ತಲೆ ಅಲ್ಲಾಡಿಸಿದ. ಬೇಂಬಿಯಕಡೆ ಮಾತೃಪ್ರಿ ವಾತ್ಸಲ್ಯ ತುಂಬಿದ ದೃಷ್ಟಿಯಿಂದ ವೀಕ್ಷಿಸಿದ.

ಬೇಂಬಿ ಧೈರ್ಯ ತಂದುಕೊಂಡು ಮತ್ತೆ ಕೇಳಿದ,

"ನನಗೂ ಅನ್ನಿಸಿತು. ಆದರೆ ಯಾಕೇಂತ, ಅರ್ಥವಾಗಲಿಲ್ಲ."

"ನಿನಗೂ ಅನ್ನಿಸಿತು. ತಾನೆ? ಅಷ್ಟು ಸಾಕು. ಸಮಯ ಬಂದಾಗ ನಿನಗೇ ಎಲ್ಲಾ ಅರ್ಥವಾಗುತ್ತೆ" ಎಂದು ಮುದಿನಾಯಕ ಅಲ್ಲಿಂದ ಮಾಯವಾದ.

ಗೋಬೋನ ವಿಚಿತ್ರವಾದ ನಡವಳಿಕೆ ತುಂಬಾ ಅಪಾಯಕಾರಿ ಎಂದು ಕಾಡಿನಲ್ಲಿದ್ದ ಜಂತುಗಳೆಲ್ಲಾ ಗಮನಿಸಿದುವು.

ರಾತ್ರಿಯ ಹೊತ್ತು ಜಂತುಗಳೆಲ್ಲಾ ಕಾಡಿನಲ್ಲಿ ಓಡಾಡುವ ಸಮಯದಲ್ಲಿ ಗೋಬೋ ನಿದ್ರಿಸುತ್ತಿದ್ದ. ಹಗಲಿನಹೊತ್ತು ಮರೆಯಾದ ಸ್ಥಳಗಳಲ್ಲಿ ಎಲ್ಲ ವರೆಲ್ಲಾ ವಿಶ್ರಾಂತಿ ತೆಗೆದುಕೊಳ್ಳುವ ಸಮಯದಲ್ಲಿ ಗೋಬೋ ಭಯ–ಭೀತಿ ಎಂಬುದಿಲ್ಲದೆ, ಅಪಾಯದ ಅರಿವೇ ಇಲ್ಲದಂತೆ ಪೊದೆಗಳನ್ನು ಬಿಟ್ಟು ಮೈದಾನದಲ್ಲಿ ಎಲ್ಲರಿಗೂ ಕಾಣುವಂತೆ ನಿಲ್ಲುತ್ತಿದ್ದ.

ಈ ಮೂರ್ಖ ಪ್ರವರ್ತನೆ ಬೇಂಬಿಗೆ ಸ್ವಲ್ಪವೂ ಹಿಡಿಸಲಿಲ್ಲ. ಒಂದು ಸಲ ಹಾಗೆಂದು ಕೇಳಿಯೂ ಬಿಟ್ಟ.

"ಅಲ್ಲ ಕಣೋ. ಪ್ರಮಾದ ಇರುತ್ತೆ ಅನ್ನೋದಾದರೂ ನೆನಪಿರೊಲ್ಲ ವಲ್ಲಾ ನಿನಗೆ ಮೂರ್ಖನಂತಾಡುತ್ತಿ, ಇದೇನೂ ಒಳ್ಳೆಯದಲ್ಲಪ್ಪಾ ..."

"ಹುಶ್ ನನಗಂತಹ ಪ್ರಮಾದಗಳೂ, ಅಪಾಯಗಳೂ ಬರೊಲ್ಲ ಬಿಡು .." ನಿರ್ಲಕ್ಷ್ಯದಿಂದ ಹೇಳಿದ ಗೋಬೋ.

ಮಧ್ಯದಲ್ಲಿ ಏಣಿ ಚಿಕ್ಕಮ್ಮ ಮಾತನಾಡಿದಳು.

"ನೋಡಪ್ಪಾ, ಬೇಂಬಿ, ನಮ್ಮ ಗೋಬೋಗೂ ಆ ಮನುಷ್ಯನಿಗೂ ತುಂಬಾ ಸ್ನೇಹ ಅನ್ನೋವಿಷಯ ಮರೀತಿದೀಯಲ್ಲಾ ನೀನು ? ನಮ್ಮಂತಹ

ಮಾಮೂಲು ಜಿಂಕೆಗಳು ಭಯ ಪಡುವಂತೆ ಮಾತು–ಮಾತಿಗೆ ಗೋಬೋ ಭಯಪಡಬೇಕಾದ ಅವಶ್ಯಕತೆಯೇನಿದೆ?"

ಬೇಂಬಿ ಆ ಮಾತಿಗೆ ಉತ್ತರ ಕೊಡಲಾರದೆ ಸುಮ್ಮನಾದ.

ಒಂದು ದಿನ ಗೋಬೋ ವಿಚಿತ್ರವಾಗಿ ಮಾತನಾಡಿದ.

"ಈ ಕಾಡಿನಲ್ಲಿರೋ ನಿಮಗೆಲ್ಲಾ ಬಹು ವಿಚಿತ್ರವಾದ ಅಭ್ಯಾಸಗಳು. ಯಾವಾಗಂದರೆ ಆವಾಗ, ಯಾವ ಹುಲ್ಲು ಸಿಕ್ಕಿದರೆ ಅದನ್ನು ಕಡಿದು ತಿನ್ನುತ್ತೀರಿ, ನನಗದೆಲ್ಲಾ ಸರಿ ಬರೋಲ್ಲ."

"ಮತ್ತೇನು ಮಾಡಬೇಕಂತಿ?" ಬೇಂಬಿ ಅರ್ಥವಾಗದೆ ಕೇಳಿದ.

"ನನ್ನ ಮಟ್ಟಿಗೆ ನನಗೆ ಕೆಲವು ನಿಯಮಗಳಿವೆ. ನಾನು ಯಾವಾಗಂದರೆ ಆಗ ತಿನ್ನೊಲ್ಲ. ಅದಕ್ಕೊಂದು ವೇಳೆ ಅಂತಿರುತ್ತೆ. ಆ ಸಮಯದಲ್ಲಿ ನನಗೆ ಯಾರಾದರೂ ಊಟ ತಂದುಕೊಡಬೇಕು, ಬಾ ಎಂದು ಆಹ್ವಾನಿಸಬೇಕು, ಆಗ ನಾನು ಊಟ ಮಾಡೋದು. ಈ ಪದ್ಧತಿ ನನಗೀಗ ಅಭ್ಯಾಸವಾಗಿದೆ..."

ಬೇಂಬಿ ಸಹಾನುಭೂತಿಯಿಂದ ಅವನ ಕಡೆ ನೋಡಿದ. ಏನ ಚಿಕ್ಕಮ್ಮ, ಫಲೀನಾ ಮುಗ್ಧರಾಗಿ ಅವನ ಮಾತುಗಳನ್ನು ಕೇಳುತ್ತಿದ್ದರು.

"ನನ್ನ ಅಭಿಪ್ರಾಯ ಏನೊಂದರೆ, ನೀನು ಈ ಚಳಿಗಾಲಕ್ಕೆ ಹೊಂದಿಕೊಳ್ಳೋದು ತುಂಬಾ ಕಷ್ಟವಾಗುತ್ತೆ ಕಣೋ ಗೋಬೋ. ಆಗ ಇಲ್ಲಿ ಹಸಿರುಹುಲ್ಲು, ಆಲೂಗಡ್ಡೆ, ಧಾನ್ಯ ಇವು ಯಾವುದೂ ಸಿಗೋಲ್ಲ" ಎಂದಳು ಫಲೀನಾ.

"ಹಾದಲ್ಲವೇ! ನನಗೆ ಆ ವಿಷಯಗಳೇ ನೆನಪಿಲ್ಲ. ಚಳಿಗಾಲ ಹೇಗಿರುತ್ತೆ ಅನ್ನೋದೇ ಮರೆತು ಬಿಟ್ಟಿದ್ದೇನೆ. ಬಹುಶಃ ತುಂಬಾ ಕಷ್ಟವಾಗಬಹುದಲ್ಲವೇ?" ಎಂದ ಗೋಬೋ ಖಿನ್ನನಾಗಿ.

"ಹಾಂ, ಆದರೆ ಅಷ್ಟು ಹೆದರಿಕೊಳ್ಳಬೇಕಾದ ಅವಶ್ಯಕತೆಯೇನಿಲ್ಲ. ಮೊದಲ ಸಲವಾದರೆ ಕಷ್ಟ. ಹಾಗಂತ ಹೆದರಿ ಕಂಗಾಲಾಗುವಂತಹ ಪರಿಸ್ಥಿತಿ ಏನಿರೊಲ್ಲ" ಎಂದ ಬೇಂಬಿ.

"ನನಗೆ ಕಷ್ಟ ಅನಿಸಿತೋ. ಒಂದು ಕ್ಷಣ ಇಲ್ಲಿರೊಲ್ಲ. ಆತನ ಬಳಿಗೆ ಹೊರಟು ಹೋಗುತ್ತೇನೆ. ಅವಸ್ಥೆ ಪಡಬೇಕಾದ ಕರ್ಮ ನನಗೇನಂತೆ! ನಾನೀ ಕಷ್ಟಗಳಲ್ಲಿ ಸಿಲುಕಿಕೊಳ್ಳಲಾರೆ."

ಬೇಂಬಿ ಅವನ ಮಾತಿಗೆ ಉತ್ತರ ಕೊಡಲಿಲ್ಲ. ಸುಮ್ಮನೆ ಅಲ್ಲಿಂದ ಹೊರಟು ಹೋದ.

ಮರೀನಾಳೊಡನೆ ತಿರುಗಾಡುತ್ತಿರುವಾಗ ಗೋಬೋ ಬೇಂಬಿಯನ್ನು ಕುರಿತು ಹೇಳಿದ. ಅವನು ನನ್ನನ್ನು ಸ್ವಲ್ಪವೂ ಅರ್ಥ ಮಾಡಿಕೊಂಡೇ ಇಲ್ಲ. ನಾನಿನ್ನೂ ಆ ಚಿಕ್ಕಂದಿನ ಗೋಬೋನೇ ಅಂದುಕೋತಿದಾನೆ. ಹುಚ್ಚು ಹುಡುಗ. ನಾನು ಸಾಮಾನ್ಯ ಎಲ್ಲಾ ಜಿಂಕೆಗಳ ತರಹಾ ಅಲ್ಲವೆಂದೂ ಇತರ ರಾರಿಗೂ ಇಲ್ಲದ ಪ್ರತ್ಯೇಕಸ್ಥಾನ ನನಗಿದೆಯೆಂದೂ ಅವನಿಗೆ ನೆನಪೇ ಇರೋಲ್ಲ ಸದಾ ಅಪಾಯ, ಅಪಾಯ ಅಂತ ಒದ್ದಾಡುತ್ತಾನೆ ಸುಮ್ಮನೆ ನನ್ನ ಮೇಲಿನ ಪ್ರೀತಿಯಿಂದಾನೇ ಅದೆಲ್ಲಾ ಹೇಳ್ತಾನೆ ಅಂತ ನಂಗೊತ್ತು. ಅದರಲ್ಲಿ ಸಂದೇಹವೇಇಲ್ಲ. ಆದರೆ ಅದು ತನ್ನಂತಹ ಮಾಮೂಲು ಜಿಂಕೆಗಳಿಗೇ ಹೊರತು ನನಗಲ್ಲವೆಂದು ಅರ್ಥಮಾಡಿಕೊಳ್ಳುವುದೇ ಇಲ್ಲ. ಏನು ಮಾಡೋದು?"

ಗೋಬೋ ಹೇಳಿದ್ದಕ್ಕೆಲ್ಲಾ ಮರೀನಾ ತಲೆದೂಗುತ್ತಿದ್ದಳು. ಅವಳಿಗೆ ಗೋಬೋ ಎಂದರೆ ಇಷ್ಟ. ಅವನಿಗೆ ಮರೀನಾಳೆಂದರೆ ಮುದ್ದು, ಆನಂದವಾಗಿದ್ದ ಜೋಡಿ ಅವರದು.

"ನಿನ್ನ ಹಾಗೆ ನನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳುವವರೂ ಇದಾರೆ. ಆದರೆ ನಿನ್ನಷ್ಟು ಚೆನ್ನಾಗಿ ಅರ್ಥಮಾಡಿಕೊಳ್ಳುವವರೇ ಇಲ್ಲ. ಮನುಷ್ಯನ ಹಿರಿಮೆಯನ್ನೂ ಅವನ ಒಳ್ಳೆಯತನವನ್ನೂ ಕುರಿತು ಎಷ್ಟೋ ಬಾರಿ ಹೇಳಿದೀನಿ. ಆದರೇನು? ಇವರಿಗದರ ನೆನಪೇ ಇರದು" ಎಂದು ನೊಂದುಕೊಂಡ ಗೋಬೋ.

"ನನಗೆ ಮೊದಲಿನಿಂದ ಮನುಷ್ಯನ ವಿಷಯದಲ್ಲಿ ಒಳ್ಳೆ ಅಭಿಪ್ರಾಯ ಇದ್ದೇ ಇದೆ. ಹೋದ ವರ್ಷದ ಚಳಿಗಾಲದಲ್ಲಿ ನೀನು ಮಾಯವಾಗುವುದಕ್ಕೆ ಮುನ್ನ ನಾನು ಹೇಳಿದ್ದು ನೆನಪಿಲ್ಲವೆ? ಮನುಷ್ಯ ನಮ್ಮ ಬಳಿಗೆ ಬಂದು ನಮ್ಮೊಂದಿಗೆ ಹಾಯಾಗಿ ಆಡಿಕೊಳ್ಳುವ ಸಮಯ ಎಂದೋ ಒಂದು ದಿನ ಬಂದೇ ಬರುತ್ತದೆ ಅಂತ ನಾನು ಹೇಳಲಿಲ್ಲವೇ?" ಎಂದಳು ಮರೀನಾ ಹಳೆಯ ದಿನಗಳನ್ನು ನೆನಪಿಸಿಕೊಳ್ಳುತ್ತಾ,

"ನನಗೆ ನೆನಪಿಲ್ಲ" ಎಂದ ಗೋಬೋ.

"ನಾನು ಹೇಳಿದ್ದೆ."

ಮತ್ತೆ ಕೆಲವು ವಾರಗಳು ಕಳೆದುವು.

ಒಂದು ದಿನ ಬೆಳಗಿನ ಜಾವ. ಮೈದಾನದ ಹತ್ತಿರವಿದ್ದ ಬಾದಾಮಿ ಗಿಡಗಳ–ಬಳಿ ಗೋಬೋ ಮರೀನಾರಿಬ್ಬರೂ, ಬೇಂಬಿ ಫಲೀನಾರಿಗೆ ತಣ್ಣಗಿನ ಪ್ರಭಾತದ ಹಿತವಾದ ಗಾಳಿಯಲ್ಲಿ ತಿರುಗಾಡುತ್ತಾ ಎದುರಾದರು. ಹಳೆಯ ಬಸರಿ ಮರವನ್ನು ದಾಟಿ ಕಾಲುದಾರಿಯಲ್ಲಿ ನಡೆಯುತ್ತಾ ವಿಶ್ರಾಂತಿಗಾಗಿ ಒಳ್ಳೆಯ ಸ್ಥಳಕ್ಕಾಗಿ ಹುಡುಕುತ್ತಿದ್ದರು. ಆಗ ಹಠಾತ್ತನೆ ಗೋಬೋ ಮರೀನಾ ಎದುರಾದರು. ಅವರು ಮೈದಾನದ ಕಡೆ ಹೊರಟಿದ್ದರು.

"ನಮ್ಮ ಜತೆಗೇ ಬಾರಯ್ಯ ಗೋಬೋ. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಸೂರ್ಯ ಉದಯಿಸುತ್ತಾನೆ. ಆ ಸಮಯದಲ್ಲಿ ಮೈದಾನದಲ್ಲಿ ನಮ್ಮವರು ಯಾರೂ ಇರೋದಿಲ್ಲ." ಎಂದ ಬೇಂಬಿ.

ಗೋಬೋ ನಕ್ಕ.

"ಹಾಗೇನು? ನಿನಗೆಷ್ಟೋ ಸಲ ಹೇಳಿದೀನಿ ಮಿಕ್ಕ ಜಿಂಕೆಗಳ ಪದ್ಧತಿ ನನ್ನದಲ್ಲ ಅಂತ."

ಅವನು ಮುಂದಕ್ಕೆ ನಡೆದ. ಮರೀನಾ ಅವನನ್ನು ಅನುಸರಿಸಿದಳು.

"ಸರಿ, ಅವನಿಷ್ಟದಂತೆ ಮಾಡಲಿ, ನಾವು ಹೋಗೋಣ ಬಾ" ಎಂದ ಬೇಂಬಿ ಫಲೀನಾಳೊಂದಿಗೆ.

ಇನ್ನೂ ಎರಡು ಹೆಜ್ಜೆ ಇಡುವಷ್ಟರಲ್ಲಿಯೇ ಮೈದಾನದ ಆಚೆಕಡೆ ಯಿಂದ ಕಿವಿತೂತು ಬೀಳುವಂತೆ ಮೈನಾಳ ಕೂಗು ಕೇಳಿಸಿತು. ಅದು ಅಪಾಯದ ಸೂಚನೆ.

ಬೇಂಬಿ ತಟ್ಟನೆ ಹಿಂದಿರುಗಿ ಗೋಬೋನ ಬಳಿಗೋಡಿದ. ಅವರಿಬ್ಬ ರನ್ನೂ ಬಸರಿ ಮರದ ಬಳಿ ತಡೆದ.

"ಕೇಳಿಸಿತೇ?" ಎಂದ ಬೇಂಬಿ.

ಗೋಬೋಗೆ ಅರ್ಥವಾಗಲಿಲ್ಲ.

"ಏನು ಕೇಳಿಸೋದು?"

ಮತ್ತೆ ಮೈನಾ ಕೂಗಿತು.

"ಅರೆ, ಮೈನಾ ಕೂಗಿಕೊಳ್ತಾ ಇದ್ದರೆ ಕೇಳಿಸಲೇ ಇಲ್ಲವೇನು?

"ಹುಸ್ ಮೈನಾ ಕೂಗಿಕೊಂಡರೆ ನನಗೇನಂತೆ?"

"ಅದು ಅಪಾಯದ ಸೂಚನೆ. ನಮಗೆ ಅಪಾಯ ಕಾದಿದೆ ಅಂತ. ಅರ್ಥವಾಯಿತೆ?"

ಅಷ್ಟರಲ್ಲಿ ಗೀಜಗನೂ ಕೂಗಿದ.

ಅದರ ಹಿಂದೆ ಮತ್ತೊಂದೂ ಕೂಗಿತು.

ಇಷ್ಟರಲ್ಲಿ ಮತ್ತೆ ಮೈನಾ ಕೂಗಿತು.

ಮೇಲಿನಿಂದ ಹಾರಿಹೋಗುತ್ತಾ ಕಾಗೆಯೂ ಕೂಗಿತು.

ಕೊನೆಗೆ ಫಲೀನಾ ಸಹ ತಮ್ಮನನ್ನು ಬೇಡಿಕೊಂಡಳು. ಹೋಗಬೇಡ ಕಣೋ ಗೋಬೋ. ಅಪಾಯ, ನನ್ನ ಮಾತು ಕೇಳು. ನೀನು ಜಾಣಮರಿ ಅಲ್ಲವೆ? ಬಾಪ್ಪಾ ಒಟ್ಟಾಗಿ ಇಲ್ಲಿಂದ ಹೊರಟು ಹೋಗೋಣ."

ಗೋಬೋ ಪಕಪಕನೆ ನಕ್ಕುಬಿಟ್ಟ.

"ಸದಾ ಅಪಾಯ—ಅಪಾಯ ಅಂತ ಹೆದರಿಸ್ತೀರ. ನಿಮ್ಮ ಅಪಾಯಕ್ಕೂ ನನಗೂ ಏನು ಸಂಬಂಧ ಅಂತ?"

ಅಷ್ಟರಲ್ಲಿ ಫಲೀನಾಳಿಗೊಂದು ಆಲೋಚನೆ ಹೊಳೆಯಿತು.

"ಹಾಗಾದರೆ ಒಂದು ಕೆಲಸ ಮಾಡೋಣ. ನೀನಿಲ್ಲೇ ನಿಂತಿರು. ನಮ್ಮಲ್ಲಿ ಒಬ್ಬರು ಹೋಗಿ ನೋಡಿ ಬರುತ್ತೇವೆ. ಅಲ್ಲಿ ಏನಾಗ್ತಿದೆ ಅಂತ."

ಫಲೀನಾ ಹಾಗೆ ಹೇಳಿದ ಕೂಡಲೇ ಮರೀನಾ ಚಕಚಕನೆ ಮುಂದೆ ಸಾಗಿದಳು ನೋಡಿ ಬರಲು. ಮಿಕ್ಕ ಮೂವರೂ ಅವಳನ್ನು ನೋಡುತ್ತಾ ನಿಂತರೆ. ಬೇಂಬಿ–ಫಲೀನಾ ಉಸಿರು ಬಿಗಿಹಿಡಿದು ನೋಡುತ್ತಿದ್ದರು. ಗೋಬೋ ಉಕ್ಕಿಬರುವ ನಗು ತಡೆ ತಡೆದುಕೊಳ್ಳುತ್ತಿದ್ದ.

ಮರೀನಾ ಮೆಲ್ಲನೆ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ತಡೆತಡೆದು ಮೈದಾನದ ಬಳಿಗೆ ನಡೆದಳು. ತಲೆ ಮೇಲಕ್ಕೆತ್ತಿ ನಾಲ್ಕೂ ಕಡೆ ವಾಸನೆ ನೋಡಿದಳು.

ತಟ್ಟನೆ ಹಿಂತಿರುಗಿ ಮಿಂಚಿನಂತೆ ಒಂದೇ ನೆಗೆತದಲ್ಲಿ ಗಿಡಗಳ ಗುಂಪಿನಲ್ಲಿ ಬಂದು ಬಿದ್ದಳು ಏದುಸಿರು ಬಿಡುತ್ತಾ ಬಂದ ಮರಿನಾಳ ಕಂಠದಿಂದ ಮಾತೇ ಹೊರಡಲಿಲ್ಲ. ಭಯದಿಂದ ಕಂಗಾಲಾಗಿದ್ದಳವಳು.

"ಮನುಷ್ಯ ಇದ್ದಾನಲ್ಲ....ಮೈದಾನದ ಆಚೆ ಮ...ನು ಷ್ಯ..."

"ಓಡಿ ಹೋಗೋಣ ಬಾ, ಇನ್ನು ನಿಧಾನ ಮಾಡುವುದು ಬೇಡ" ಎಂದ ಬೇಂಬಿ.

"ಗೋಬೋ, ಬಾರಣ್ಣಾ ಹೋಗೋಣ" ಎಂದಳು ಫಲೀನಾ.

ಮರೀನಾ ಸಹ ಬೇಡಿಕೊಂಡಳು. "ಗೋಬೋ ಇಲ್ಲಿಂದ ದೂರ ತುಂಬಾ ದೂರ ಹೊರಟು ಹೋಗೋಣ, ಬಾ. ಬರಲಾರೆಯಾ?"

ಆದರೆ ಗೋಬೋ ಕದಲಲಿಲ್ಲ. ಮೇಲಾಗಿ ಅವರನ್ನು ಅಪಹಾಸ್ಯ ಮಾಡಿದ.

"ಓಡಿ, ಓಡಿಹೋಗಿ ನಿಮ್ಮನ್ನು ಹಿಡಿದಿಟ್ಟವರಾರು ? ಆದರೆ ನಾನಂತೂ ಮಾತ್ರ ಹಾಗೆಲ್ಲಾ ಬರೋನಲ್ಲ. ಮೈದಾನಕ್ಕೆ ಹೋಗ್ತೀನಿ ಹೋಗಿ ಆ ಮನುಷ್ಯನ್ನ ನೋಡ್ತೀನಿ. ನೋಡಿ ಮಾತನಾಡಿಸುತ್ತೀನಿ."

ಹಾಗೆ ಹೇಳ–ಹೇಳುತ್ತಲೇ ಗೋಬೋ ಮುಂದಕ್ಕೆ ನಡೆದ. ಮಿಕ್ಕ ಮೂವರಿಗೂ ಭಯದಿಂದ ಗಂಟಲು ಒಣಗಿ ಹೋಗಿತ್ತು. ಸ್ತಬ್ಧರಾಗಿ

ಅವನು ಹೋದ ಕಡೆಗೇ ನೋಡತೊಡಗಿದರು.

ಗೋಬೋಗೆ ಹೆದರಿಕೆಯೆಂಬ ಮಾತೇ ಇಲ್ಲ. ಸಂದೇಹದ ಸುಳಿವೇ ಇಲ್ಲ. ಒಂದಿಷ್ಟೂ ಹಿಂಜರಿಯಲಿಲ್ಲ. ಮುಂದಡಿಯಿಟ್ಟ. ಮೈದಾನವನ್ನು ಪ್ರವೇಶಿಸಿದ. ಮತ್ತೂ ಮುಂದಕ್ಕೆ ನಡೆದು ನಿಂತ. ಮನುಷ್ಯ ಎಲ್ಲಿದ್ದಾನೆ ಎಂದು ನೋಡುವವನಂತೆ ಸುತ್ತಲೂ ನೋಡಿದ. ಮನುಷ್ಯ ಕಾಣಸಿರಬೇಕು. ಸಂತೋಷದಿಂದ ತಲೆ ಅಲ್ಲಾಡಿಸಿದ. ಬಹುಶಃ ಅದು ಮಾತನಾಡಿಸುವ ರೀತಿಯಿರಬಹುದು... ಅಷ್ಟರಲ್ಲಿ ಎದೆಯೊಡೆಯುವಂತಹ ಗರ್ಜನೆ ಕೇಳಿಸಿತು. ಗೋಬೋ ಅಷ್ಟೆತ್ತರ ಹಾರಿದ. ಎರಡು ನೆಗೆತಗಳಲ್ಲಿ ಗಿಡಗಳ ಗುಂಪಿನಲ್ಲಿ ಬಂದು ಸೇರಿದ. ನಡುಗುತ್ತಿದ್ದ ಹೆಜ್ಜೆಗಳಿಂದ ತನ್ನ ಬಂಧುಗಳ ಬಳಿ ಬಂದ. ಅವರಿಗಂತೂ ಭಯದಿಂದ ಬಾಯಲ್ಲಿ ಮಾತೇ ಹೊರಡದಂತಾಗಿತ್ತು. ಗೋಬೋ ಆಯಾಸ ಪಡುತ್ತಿದ್ದುದೊಂದೇ ಗೊತ್ತಾಗಿದ್ದು. ಅವನನ್ನು ಮಧ್ಯದಲ್ಲಿರಿಸಿಕೊಂಡು ಮೂವರೂ ತಳ್ಳಿಕೊಂಡು ಹೋದರು. ಹಳೆಯ ಬಸರಿ ಮರದ ಬಳಿ ಗೋಬೋ ಕೆಳಗೆ ಬಿದ್ದುಬಿಟ್ಟ.

ಮೂರು ಜನವೂ ಅಲ್ಲಿಯೇ ನಿಂತರು ಮರೀನಾ–ಗೋಬೋನ ಪಕ್ಕದಲ್ಲಿಯೇ ನಿಂತಿದ್ದಳು. ಫಲೀನಾ. ಬೇಂಬಿ ಸ್ವಲ್ಪ ದೂರದಲ್ಲಿ ನಿಂತಿದ್ದರು. ಗೋಬೋ ಪಕ್ಕಕ್ಕೆ ಒರಗಿದ. ತಲೆಯನ್ನು ಮಾತ್ರ ಸ್ವಲ್ಪ ಮೇಲಕ್ಕೆತ್ತಿ ಅತಿ ಪ್ರಯಾಸದಿಂದ "ಮರೀನಾ, ಆತ ನನ್ನನ್ನು ಗುರ್ತು ಹಿಡಿಯಲೇ ಇಲ್ಲ" ಎಂದ.

ಮೈದಾನದ ಮತ್ತೊಂದು ಅಂಚಿನಲ್ಲಿ ಢಮ, ಢಮ ಶಬ್ದಗಳು ಕಿವಿಗಡಚಿಕ್ಕುವಂತೆ ಕೇಳಿಬರಲಾರಂಭಿಸಿತು.

ಮರೀನಾ ಗೋಬೋ ಬಳಿ ಬಾಗಿ ಹೇಳಿದಳು.

"ಗೋಬೋ, ಅಗೋ ಅವನು ಬಂದೇ ಬಿಟ್ಟ...ಏಳು...ಬೇಗ ಏಳು ಓಡಿ ಹೋಗೋಣ."

ಗೋಬೋ ತಲೆ ಮೇಲಕ್ಕೆತ್ತಲು ಪ್ರಯತ್ನಿಸಿದ ಮಾತ್ರ.

ಮೈದಾನದ ಅಂಚಿನಲ್ಲಿ ಎಲೆಗಳೂ ಕೊಂಬೆಗಳೂ ಗಲಗಲನೆ ಸದ್ದು ಮಾಡಿದುವು. ಮನುಷ್ಯ ತುಂಬಾ ಸಮೀಪಕ್ಕೆ ಬಂದಿದ್ದ.

ಬೇಂಬಿ–ಫಲೀನಾ ಈಗಾಗಲೇ ಆ ಸ್ಥಳವನ್ನು ಬಿಟ್ಟು ಹೊರಟು ಹೋಗಿದ್ದರು. ಮೆಲ್ಲ–ಮೆಲ್ಲನೆ ನಿಶ್ಶಬ್ದವಾಗಿ ಹಿಂದು–ಹಿಂದಕ್ಕೆ ನಡೆಯುತ್ತಾ ಕಾಡಿನಲ್ಲಿ ಬೆರೆತು ಹೋದಳು ಫಲೀನಾ. ಅಲ್ಲಿಂದ ಸದ್ದು ಮಾಡದೆ ಲಾಘವದಿಂದ ಧುಮುಕುತ್ತಾ ಬೇಂಬಿ ಫಲೀನಾರನ್ನು ಸೇರಿಕೊಂಡಳು.

ದಾರಿಯಲ್ಲಿ ಒಮ್ಮೆ ಮಾತ್ರ ಹಿಂತಿರುಗಿ ನೋಡಿದಳು.

ಕೆಳಗೆ ಬಿದ್ದಿದ್ದ ಗೋಬೋನ ಬಳಿ ಆ ಮನುಷ್ಯ ಬಾಗಿ ತನ್ನ ಕೈಯಿಂದ ಅವನನ್ನು ಮುಟ್ಟುತ್ತಿದ್ದುದ್ದು ಕಾಣಿಸಿತು. ಆ ಕೂಡಲೇ ಗೋಬೋನ ಆರಚಾಟ ಹೃದಯವಿದಾರಕವಾಗಿ ಕೇಳಿಸಿತು.

ಬೇಂಬಿ ಒಬ್ಬೊಂಟಿಗನಾಗಿ ಹೊಳೆಯ ಪಕ್ಕದಲ್ಲಿ ನಡೆದು ಹೋಗುತ್ತಿದ್ದ. ಬಿದಿರ ಪೊದೆಗಳ ಮಧ್ಯದಿಂದ ಹೊಳೆ ಅಂಕು–ಡೊಂಕಾಗಿ ಹರಿದು ಹೋಗುತ್ತಿತ್ತು. ಬೇಂಬಿಗೀಗ ಒಂಟಿಯಾಗಿರುವುದೆಂದರೆ ಇಷ್ಟ. ಅದಕ್ಕಾಗಿಯೇ ಆಗಾಗ ಈ ನದೀತೀರಕ್ಕೆ ಬರಲಾರಂಭಿಸಿದ್ದ.

ಈ ಪ್ರದೇಶದಲ್ಲಿ ಪ್ರಾಣಿಗಳು ಓಡಾಡಿ ಏರ್ಪಟ್ಟ ದಾರಿಗಳಿರಲಿಲ್ಲ. ಆದಕಾರಣ ತನ್ನವರಾರಾದರೂ ಕಾಣಿಸುತ್ತಾರೆಂಬ ಹೆದರಿಕೆಯಿರಲಿಲ್ಲ.

ಈ ಮಧ್ಯೆ ಬೇಂಬಿ ತುಂಬಾ ಬದಲಾಯಿಸಿದ್ದ. ಸದಾ ಆಲೋಚನಾ ಮಗ್ನನಾಗಿರುತ್ತಿದ್ದ. ಮುಖದಲ್ಲಿ ಚಿಂತೆ ಮನೆ ಮಾಡಿತ್ತು. ಬದುಕು ನಿರಾಶಾಮಯವಾಗಿ ಕಾಣುತ್ತಿತ್ತು. ತಾನೇಕೆ ಹೀಗಾದನೆಂದು ಅವನಿಗೇ ತಿಳಿಯದಾಗಿತ್ತು. ತಿಳಿದುಕೊಳ್ಳಬೇಕೆಂದು ಅವನು ಪ್ರಯತ್ನಿಸಲೂ ಇಲ್ಲ. ಎಂತಹದೋ ಅಸ್ಪಷ್ಟವಾದ ಆಲೋಚನೆಗಳು ಅವನ ಮನಸ್ಸನ್ನು ಆವರಿಸುತ್ತಿದ್ದುವು. ಹೆಚ್ಚಾಗಿ ಆಲೋಚಿಸಿದರೆ ದಣಿವುಂಟಾಗುತ್ತಿತ್ತು. ಆಗ ಸುಮ್ಮನಾಗುತ್ತಿದ್ದ.

ಹೊಳೆಯ ದಡದಲ್ಲಿ ಬಹಳ ಹೊತ್ತು ಹರಿಯುತ್ತಿದ್ದ ನೀರನ್ನು ನೋಡುತ್ತಾ ನಿಂತಿದ್ದ. ನೀರಿನ ಮೇಲಿನಿಂದ ಬೀಸಿಬರುವ ತಂಗಾಳಿ, ತನಗೆ ತಿಳಿಯದ ಹೊಸ ಸುವಾಸನೆಯಿಂದ ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡುತ್ತಿತ್ತು.

ಹೊಳೆಯಲ್ಲಿ ಸ್ವಲ್ಪ ಆಳ. ಅಗಲವಿದ್ದ ಪ್ರದೇಶದಲ್ಲಿ ಬಾತುಗಳು

ಈಜಾಡುತ್ತಿದ್ದುವು. ಒಂದು–ಎರಡಲ್ಲ, ನೂರು–ಸಾವಿರ ಬಾತುಗಳು! ಅದೊಂದು ಬಾತುಗಳದೇ ರಾಜ್ಯವೆಂಬಂತಿತ್ತು. ಅವು–ಪ್ರೀತಿ ವಾತ್ಸಲ್ಯಗಳಿಂದ ಮಾತನಾಡಿಕೊಳ್ಳುದ್ದುವು. ಕ್ವಾಕ್–ಕ್ವಾಕ್ ಎಂದು ಕೂಗುತ್ತಿದ್ದುವು. ಅವುಗಳನ್ನು ನೋಡುತ್ತಾ ನಿಂತರೆ ಬೇಂಬಿಗೆ ಹೊತ್ತು ಹೋಗಿದ್ದೇ ಗೊತ್ತಾಗುತ್ತಿರಲಿಲ್ಲ.

ತಾಯಿ ಬಾತುಗಳು, ಮರಿಬಾತುಗಳನ್ನು ಕರೆದುಕೊಂಡು ದಡದ ಪಕ್ಕದಲ್ಲಿಯೇ ಈಜುತ್ತಾ ಹೋಗುತ್ತಿದ್ದುವು. ಅವುಗಳಿಗೆ ಬೇಸರವೆಂಬುದೇ ಇರಲಿಲ್ಲ, ಸದಾ ಹೊಸ ಹೊಸ ವಿಷಯಗಳನ್ನು ಮಕ್ಕಳಿಗೆ ಕಲಿಸುತ್ತಲೇ ಇದ್ದುವು.

ಆಕಸ್ಮಾತ್ತಾಗಿ ತಾಯಿ ಬಾತುಗಳು ಅಪಾಯ ಸೂಚಕವಾಗಿ ಕೂಗುತ್ತಿದ್ದವು. ಆ ಕೂಗು ಕೇಳಿದೊಡನೆಯೇ ಮರಿಬಾತುಗಳೆಲ್ಲಾ ಒಂದುಕ್ಷಣ ಸದ್ದು ಮಾಡದೆ, ಸರಸರನೆ ಹೋಗಿ ಮೂಲೆ ಮೂಲೆಗಳಲ್ಲಿ ಅಡಗಿಕೊಳ್ಳುತ್ತಿದ್ದುವು.

ಹಾರಲು ಕೈಲಾಗದ ಮರಿಬಾತುಗಳು ಸರ್ರನೆ ಜೊಂಡು ಪೊದೆಗಳಲ್ಲಿ ತೂರಿ ಈಜುತ್ತಾ ಮುಂದೆ ಹೋಗುವುದನ್ನು ಬೇಂಬಿ ಗಮನಿಸಿದ. ಜೊಂಡು ಹುಲ್ಲು ಅಲುಗಾಡಿ ತಾವಿರುವ ಸ್ಥಳ ಇನ್ನೊಬ್ಬರಿಗೆ ತಿಳಿಯದಂತೆ ಎಷ್ಟೋ ಲಾಘವದಿಂದ ಬಾಣಗಳಂತೆ ತೂರಿ ಹೋಗುವುದನ್ನು ನೋಡಿ ಬೇಂಬಿ ಆಶ್ಚರ್ಯಪಟ್ಟ. ಅಷ್ಟರಲ್ಲಿ ತಾಯಿ ಮೆಲುದನಿಯಲ್ಲಿ ಕೂಗುತ್ತಿತ್ತು. ಮಕ್ಕಳೆಲ್ಲ ಚಕಚಕನೆ ಅಡಗಿದ ಸ್ಥಳಗಳಿಂದ ಹೊರಬಂದು ಒಂದುಗೂಡುತ್ತಿದ್ದುವು. ಏನೂ ನಡೆಯದಂತೆ ಪ್ರಶಾಂತವಾಗಿ ಈಜಾಡುತ್ತಿದ್ದುವು. ಇದೆಲ್ಲಾ ಗಾರಡಿಯಂತೆ ಕಾಣಿಸಿತು ಬೇಂಬಿಗೆ ಅಚ್ಚರಿಪಟ್ಟ.

ಒಂದುಸಲ ತಾಯಿಬಾತೊಂದನ್ನು ಕರೆದು ಕೇಳಿದ.

"ಇದಕ್ಕೆ ಮುಂಚೆ ನೀವು ಅಪಾಯ ಸೂಚಕವಾಗಿ ಕೂಗಿದಿರಿ. ನಾನು ಎಷ್ಟು ಹುಷಾರಾಗಿ ಗಮನಿಸಿದರೂ ನನಗೇನೂ ಅಂತಹ ಸೂಚನೆ ಕಾಣಲಿಲ್ಲ. ಮತ್ತೆ ತಾವು ಹಾಗೇಕೆ ಕೂಗಿದಿರಿ ಎಂದು ಕೇಳಬಹುದೇ?"

"ಏನೂ ಇಲ್ಲ" ಎಂದಿತು ಬಾತು.

ಮತ್ತೊಂದು ಸಲ ಮರಿಬಾತೊಂದು ಅಪಾಯ ಸೂಚಕವಾಗಿ ತಾಯಿಯನ್ನು ಅನುಕರಿಸುತ್ತಾ ಕೂಗಿತು. ಹಾಗೆ ಕೂಗುತ್ತಲೇ ಜೊಂಡುಹುಲ್ಲಿನ ಪೊದೆಯಲ್ಲಿ ತೂರಿ ಬೇಂಬಿ ನಿಂತ ದಡದ ಬಳಿಗೆ ಬಂದಿತು.

"ಏನಾಯಿತು. ನನಗೇನೂ ಕಾಣಿಸಲಿಲ್ಲವಲ್ಲಾ?" ಎಂದ ಬೇಂಬಿ–ಬಾತಿನ ಮರಿಯೊಂದಿಗೆ.

"ಅಂ...ಏ...ನಿಲ್ಲ" ಎಂದಿತು ಮರಿಬಾತು.

ಒಂದು ನಿಮಿಷದ ನಂತರ ಆ ಬಾತಿನಮರಿ ತನ್ನ ಪುಠಾಣಿ ಬಾಲದ ಗರಿಗಳನ್ನು ಜಾಡಿಸಿ, ರೆಕ್ಕೆಗಳ ಅಂಚುಗಳನ್ನು ಅದರ ಮೇಲೆ ಅನಿಸಿ ಮತ್ತೆ ನೀರಿನೊಳಕ್ಕಿಳಿಯಿತು.

ಬಾತುಗಳ ಬುದ್ಧಿ ಮತ್ತೆಯ ಬಗ್ಗೆ ಎಷ್ಟೋ ಸದಭಿಪ್ರಾಯ ಹೊಂದಿದ್ದ ಬೇಂಬಿಗೆ ಆ ಬಾತುಮರಿಯ ಮಾತುಗಳಲ್ಲಿ ನಂಬಿಕೆ ಬರಲಿಲ್ಲ. ಅವು ಅಭ್ಯಾಸ ಮಾಡುತ್ತಿರಬಹುದು. ಇಲ್ಲವೇ ತನಗಿಂತ ಅವುಗಳ ಕಣ್ಣು–ಕಿವಿ ತೀಕ್ಷ್ಣವಿರಬಹುದು, ಎಂದುಕೊಂಡ. ಹೀಗೆ ದಡದಲ್ಲಿ ನಿಂತು ಅವುಗಳನ್ನು ನೋಡುತ್ತಿದ್ದಂತೆ, ಈ ನಡುವೆ ಬದುಕಿನಲ್ಲಿ ನಡೆದ ಚಿಂತಾಜನಕವಾದ ಸಂಘಟನೆಗಳಿಂದ ವ್ಯಾಕುಲಗೊಂಡ ಅವನ ಮನಸ್ಸಿಗೆ ಸ್ವಲ್ಪ ನೆಮ್ಮದಿ ದೊರಕಿದಂತೆನಿಸುತ್ತಿತ್ತು.

ಬಾತುಗಳೊಂದಿಗೆ ಮಾತನಾಡುತ್ತಾ ಕುಳ್ಳಿರುವುದೆಂದರೆ ಬೇಂಬಿಗೆ ತುಂಬಾ ಇಷ್ಟ. ಅವು ಮಿಕ್ಕ ಜೀವಿಗಳಂತೆ ಅಧಿಕ ಪ್ರಸಂಗ ಮಾಡುವುದಿಲ್ಲ. ಗಾಳಿಯನ್ನು ಕುರಿತು, ನೀರನ್ನು ಕುರಿತು ಸಿಹಿಯಾದ, ಮೃದುವಾದ ಹುಲ್ಲು ಸಿಗುವ ಬಹುದೂರದ ಪ್ರದೇಶಗಳನ್ನು ಕುರಿತು ಹೇಳುತ್ತಿತ್ತು.

ದೂರದಲ್ಲಿ ಆಚೆದಡದಲ್ಲಿ ಬಣ್ಣ ಬಣ್ಣಗಳಿಂದ ಹೊಳೆಯುತ್ತಿದ್ದ ಹೊಸ ಪಕ್ಷಿಯೊಂದು ಹಾರುತ್ತಿರುವುದು ಕಾಣಿಸಿತವನಿಗೆ. ತನ್ನಲ್ಲಿ ತಾನೇ 'ಪುರ್‌ರ್‌ರ್‌ರ್!' ಎಂದು ಮುಲುದನಿಯಲ್ಲಿ ಕೂಗುತ್ತಿತ್ತು. ಹಾರು ಹಾರುತ್ತ ತಟ್ಟನೆ

ನಿಂತುಬಿಡುತ್ತಿತ್ತು. ರೆಕ್ಕೆಗಳನ್ನು ಪಟಪಟನೆ ಆಡಿಸುತ್ತಿದ್ದರೂ ಒಂದೇ ಕಡೆ ನಿಂತಿರುತ್ತಿತ್ತು. ಹಠಾತ್ತಾಗಿ ರೆಕ್ಕೆಗಳನ್ನು ಮುದುರಿ ಮೂಗೂ ಕೆಳಕ್ಕಿಳಿಸಿ ಬಣ್ಣಬಣ್ಣದ ಕಲ್ಲಿನಂತೆ ನೀರಿನಲ್ಲಿ ಬಿದ್ದುಬಿಡುತ್ತಿತ್ತು. ಮತ್ತೆ ಸರ್ರನೆ ಮೇಲೆದ್ದು ರೆಕ್ಕೆಗಳನ್ನು ಒದರಿ ಹಾರಿಹೋಗುತ್ತಿತ್ತು.

ಬೇಂಬಿ ಅಷ್ಟು ಸುಂದರವಾದ ಹಕ್ಕಿಯನ್ನು ಇದುವರೆವಿಗೂ ನೋಡಿಯೇ ಇರಲಿಲ್ಲ. ಅದರ ಸೌಂದರ್ಯ, ಅಂಗವಿನ್ಯಾಸ ಅವನನ್ನು ಮುಗ್ಧನನ್ನಾಗಿಸಿತ್ತು. ಏನಾದರೂಮಾಡಿ ಅದರೊಂದಿಗೆ ಪರಿಚಯ ಬೆಳೆಸಿಕೊಳ್ಳಬೇಕೆಂದು ಎಷ್ಟೋಸಲ ಜೋರಾಗಿ ಕೂಗಿ ಕರೆದಿದ್ದ. ಆದರೂ ಪ್ರಯೋಜನವಾಗಿರಲಿಲ್ಲ.

"ನೀವು ಕೂಗೋದು ದಂಡ. ಅವನು ನಿಮಗೆ ಉತ್ತರ ಕೊಟ್ಟಾನೆಯೇ?" ಎಂಬ ನೀರಕಾಗೆಯ ಕಂಠ ಕೇಳಿಸಿತು.

ಬೇಂಬಿ ಸುತ್ತಲೂ ನೋಡಿದ ಯಾರೂ ಕಾಣಲಿಲ್ಲ.

"ಎಲ್ಲಿದೀರಿ ನೀವು?"

"ಇಲ್ಲಿ" ಎಂದು ಪಕ್ಕದಲ್ಲಿದ್ದ ಬಿದಿರಮೆಳೆಯೊಳಗಿನಿಂದ ಮಾತು ಕೇಳಿಸಿತು. "ಆ ಜಾಲಗಾರ ಹಕ್ಕಿಗೆ ಎಷ್ಟು ಅತಿಶಯ ಅಂತೀರಿ? ತಾನೇ ತುಂಬಾ ಸುಂದರವಾಗಿದೀನೀಂತ ಹೆಮ್ಮೆಯೋ ಎಂಥದೋ ಕಾಣೆ. ಯಾರೊಂದಿಗೂ ಮಾತೇ ಆಡೊಲ್ಲ. ತಾವು ಕಷ್ಟಪಟ್ಟು ಕೂಗೋದು ದಂಡ."

"ಆದರೆ ಆ ಹಕ್ಕಿ ತುಂಬಾ ಸುಂದರವಾಗಿರೋದಂತೂ ನಿಜ."

"ಬರೀ ಅಂದ ಚಂದ ಇದ್ದರೆ ಸಾಕೇ ?" ಎಂದಿತು ನೀರ ಕಾಗೆ ಬಿದಿರುಮೆಳೆಯ ಮತ್ತೊಂದು ಕಡೆಯಿಂದ ಕಾಣಿಸಿಕೊಳ್ಳುತ್ತಾ.

"ಏಕೆ ಹಂತೀರಿ ?"

"ಮತ್ತೇನನ್ನಲಿ ? ಅದಕ್ಕೇನಾದರೂ ಒಂದಿಷ್ಟು ಆಟ ಪಾಠ, ನಗೋದು ಕಲಿಯೋದು ಗೊತ್ತಿದೆ ಅಂತೀರಾ, ಊಹೂಂ, ಪ್ರಪಂಚವಲ್ಲಾ ಹಾಳಾದರೂ ಸರಿ, ಅದಕ್ಕೇನೂ ಬೇಕಿಲ್ಲ. ಇನ್ನೊಬ್ಬರ ಒಳಿತೂ ಕೆಡಕೂ ಕುರಿತ

ಚಿಂತೆಯೇ ಇಲ್ಲ. ಬೇರೊಬ್ಬರು ಕೇಳಿದರೂ ಉತ್ತರ ಕೊಡೋ ಗೋಜಿಲ್ಲ. ಹತ್ತಿರದಲ್ಲಿಯೇ ಅಪಾಯ ಇರುತ್ತೇನ್ನಿ. ತನಗೆ ತಿಳಿದರೂ ಮಿಕ್ಕವರಿಗೆ ತಿಳಿಸಬೇಕೆಂಬ ಪ್ರಜ್ಞೆಯೇ ಇಲ್ಲ. ಹೇಳಿದರೆ ಏನು ಸವೆದು ಹೋಗುತ್ತೆ ಅಂತೀನಿ! ತಲೇಲಿ ಮಣ್ಣು ತುಂಬಿಕೊಂಡಿದೆ ಅನ್ನಿಸತ್ತೆ. ಅದು ಇದುವರೆ ವಿಗೂ ಯಾರೊಂದಿಗಾದರೂ ಮಾತನಾಡಿದ್ದನ್ನೇ ನೋಡಿಲ್ಲ ನಾನು..."

"ಹುಚ್ಚು ಹಕ್ಕಿ, ಪಾಪ!" ಎಂದ ಬೇಂಬಿ.

ನೀರ ಕಾಗೆ ಈ ಸಲ ತಾವರೆಯ ಬಳಿಸಾರಿ ಹೇಳತೊಡಗಿತು.

"ತನ್ನ ಬಣ್ಣಗಳನ್ನು ಸಹ ಪೂರ್ತಿಯಾಗಿ ಯಾರಿಗೂ ತೋರಿಸೊಲ್ಲ. ಯಾರಾದರೂ ಕಿತ್ತುಕೋತಾರೇನು?"

ನೀರಕಾಗೆ ಬೇಂಬಿಯ ಎದುರಿಗೆ ಬಂತು. ಉದ್ದನೆಯ ಕೊರಳನ್ನು ಮತ್ತಷ್ಟು ಉದ್ದಮಾಡಿತು. ಕಪ್ಪಾದರೇನು? ಅದು ಮಿರಮಿರನೆ ಮಿರು ಗುವ ಕಪ್ಪುಬಣ್ಣ. ಸುಂದರವಾಗಿ, ನಾಜೂಕಾಗಿತ್ತು. ಮತ್ತೆ ಅಷ್ಟರಲ್ಲಿಯೇ ಸರ್‍ರನೆ ನೀರಿನಲ್ಲಿ ಮುಳುಗಿ ತೊರೆಯ ಮತ್ತೊಂದು ದಡದಲ್ಲಿ ತೇಲಿತು.

"ಅಬ್ಬ ತುಂಬಾ ಹೊತ್ತು ಒಂದು ಕಡೆ ನಿಲ್ಲೋದು ಅಂದರೆ ನನಗಾ ಗೊಲ್ಲಪ್ಪ. ಬೇಜಾರು ಸುಮ್ಮನೆ" ಎಂದು ಬುಡುಂಗನೆ ನೀರಿನಲ್ಲಿ ಮುಳುಗಿ ಮತ್ತೊಂದು ಕಡೆ ಮೇಲೆದ್ದಿತು.

"ತುಂಬಾ ದಿನ ಬದುಕ ಬೇಕೆಂದಿದ್ದರೆ, ಹಾಯಾಗಿ ಜೀವಿಸಬೇಕೊಂತಿ ದ್ದರೆ ಓಡಾಡ್ತಾ ಇರಬೇಕಪ್ಪ"

ಇಷ್ಟರಲ್ಲಿ ಹತ್ತಿರ ಇದ್ದ ಗರಿಕೆಹುಲ್ಲು ಅಲುಗಾಡಿತು. ಬೇಂಬಿಯ ಕಿವಿ ನೆಟ್ಟಗಾಯಿತು. ಹುಷಾರಾಗಿ ನೋಡಿದ. ತೊರೆಯ ದಡದಲ್ಲಿದ್ದ ಹುಲ್ಲಿ ನಲ್ಲಿ ಬೂದಿ ಬಣ್ಣದ ಜೀವಿಯೊಂದು ಫಳಕ್ಕನೆ ಹೊಳೆದು ಮಾಯವಾಯಿತು. ಘಾಟುವಾಸನೆಯಿಂದಾಗಿ ಅದು ನರಿ ಎಂದು ಅರ್ಥವಾಯಿತು ಬೇಂಬಿಗೆ. ಕೂಗೋಣ ಎಂದು ಬಾಯಿ ತೆರೆಯುವಷ್ಟರಲ್ಲಿ ಗರಿಕೆ ಹುಲ್ಲಿನಲ್ಲಿ ಹೆಜ್ಜೆಯ ಸದ್ದಾಯಿತು. ಒಂದು ಬಾತು ನೋವಿನಿಂದ ಚೀರಿದ ಸದ್ದು....ರೆಕ್ಕೆಗಳ ಪಟ

ಪಟ...ನರಿಯ ಬಾಯಲ್ಲಿ ಸಿಕ್ಕಿ ಚೀರಾಡುತ್ತಿದ್ದ ಬಾತು ಹುಲ್ಲಿನ ಮಧ್ಯ ದಿಂದೊಮ್ಮೆ ಕಾಣಿಸಿ ಮತ್ತೆ ಹುಲ್ಲಿನಲ್ಲಿ ಅಡಗಿ ಹೋಯಿತು...ಮರುಕ್ಷಣದಲ್ಲಿ ಬಾತನ್ನು ಬಾಯಲ್ಲಿ ಕಚ್ಚಿಕೊಂಡು ಬೇಂಬಿಯ ಕಡೆಗೊಂದು ಓರೆನೋಟ ಬೀರಿ, ನರಿ ಸಂತೋಷದಿಂದ ಗಿಡಗಳ ಗುಂಪಿನಲ್ಲಿ ಮರೆಯಾಯಿತು.

ಬೇಂಬಿ ನಿರ್ವಿಣ್ಣನಾಗಿ ನಿಂತುಬಿಟ್ಟ. ಎರಡು ಮುದಿ ಬಾತುಗಳು 'ಕ್ವಾಕ್' ಎಂದು ಗಟ್ಟಿಯಾಗಿ ಕೂಗುತ್ತಾ ಮೇಲಕ್ಕೆ ಹಾರಿದುವು. ನೀರ ಕಾಗೆ ಅಪಾಯವನ್ನು ಸೂಚಿಸುತ್ತಾ ಗಂಟಲು ಹರಿಯುವಂತೆ ಕೂಗಿತು. ಆ ಕೂಗು ಆ ಸುತ್ತು-ಮುತ್ತಲ ಪ್ರದೇಶದಲ್ಲೆಲ್ಲಾ ಪ್ರತಿಧ್ವನಿಸಿತು......

ಹೊಳೆಯ ದಡದ ಪೊದೆಗಳ ಮೇಲಿಂದ ಗುಬ್ಬಚ್ಚಿಗಳು ಗಾಬರಿಯಿಂದ ಕೂಗಿದುವು. ಬಿದಿರಪೊದೆಗಳಲ್ಲಿ ಬಾತುಮರಿಗಳು ಅಮ್ಮಾ ಎಂದು ಕೂಗಿ ದುವು. ಹೊಳೆಯ ಮೇಲಿಂದ ತನ್ನ ಬಣ್ಣ ಬಣ್ಣದ ರೆಕ್ಕೆಗಳನ್ನು ಆಡಿ ಸುತ್ತಾ ಜಾಲಗಾರ ಹಕ್ಕಿ ವಿಲಾಸದಿಂದ ಹಾರಿತು.

"ನಮ್ಮ ಅಮ್ಮನನ್ನು ನೋಡಿದಿರಾ?" ಬಾತು ಮರಿಗಳು ಅಳುಮುಖ ದಿಂದ ಕೇಳಿದುವು.

"ಪ್ಹಿ ರ್ ರ್ ರ್ ರ್ ! ಚೆನ್ನಾಯಿತು, ನಿಮ್ಮ ಅಮ್ಮನೊಂದಿಗೆ ನನ ಗೇನು ಕೆಲಸ?" ಎಂದು ಹಾರಿಹೋಯಿತು. ಜಾಲಗಾರ ಹಕ್ಕಿ.

ಬೇಂಬಿ ಮುಂದಕ್ಕೆ ಸಾಗಿದ, ತುಂಬೆಯ ಹೊದರನ್ನು ದಾಟಿದ. ತೇಗದ ಮರಗಳು ಹಿಂದಾದುವು. ಸೀಮೆ ಹುಣಸೆಗಿಡಗಳನ್ನೂ ದಾಟಿ ಬಂದ ಅವನು ಮುದಿನಾಯಕನಿಗಾಗಿ ಹುಡುಕಾಡುತ್ತಿದ್ದ. ಗೋಬೋ ಸತ್ತು ಹೋದ ನಂತರ ಆತನನ್ನು ಮತ್ತೆ ನೋಡಿಯೇ ಇರಲಿಲ್ಲ. ಕೊನೆಗೆ ದೂರ ದಲ್ಲಿ ನಾಯಕ ಕಾಣಿಸಿದ. ಒಂದೇ ಉಸಿರಿನಲ್ಲಿ ಓಡುತ್ತಾ ಆತನ ಬಳಿಗೆ ಹೋದ.

ಇಬ್ಬರೂ ಮೌನವಾಗಿ ಸ್ವಲ್ಪ ಹೊತ್ತು ಪಕ್ಕ ಪಕ್ಕದಲ್ಲಿಯೇ ನಡೆದರು. ಸ್ವಲ್ಪ ಹೊತ್ತಾದ ಮೇಲೆ ಮುದಿನಾಯಕ ಪ್ರಶ್ನಿಸಿದ.

"ನೀವೆಲ್ಲಾ ಆಗಾಗ ಅವನನ್ನು ನೆನಪಿಸಿಕೊಳ್ಳುತ್ತೀರಿ ಅಂತ ಕಾಣುತ್ತೆ, ಅಲ್ಲವೇ?"

"ಅವನು" ಅಂದರೆ ಯಾರೆಂದು ಬೇಂಬಿಗೆ ಅರ್ಥವಾಯಿತು–ಗೋಬೋ.

"ಗೊತ್ತಿಲ್ಲಾರಿ....ನಾನು ಈ ನಡುವೆ ಒಬ್ಬಂಟಿಗನಾಗಿಯೇ ತಿರುಗಾಡುತ್ತಿದೇನೆ ನನ್ನ ಮಟ್ಟಿಗೆ ಆಗಾಗ ಗೋಬೋನ ನೆನಪಾಗುತ್ತಲೇ ಇರುತ್ತದೆ ನನಗೆ..."

"ಅಂದರೆ ನೀನೀಗ ಒಬ್ಬಂಟಿಗನೇನು?"

"ಹುಂ" ಎಂದೆಂದು ಬೇಂಬಿ ನಾಯಕನ ಮುಖ ನೋಡಿದ, ಆತ ಮಾತನಾಡಲಿಲ್ಲ. ಇಬ್ಬರೂ ಮುಂದಕ್ಕೆ ನಡೆದರು. ತಟ್ಟನೆ ನಾಯಕ ನಿಂತುಬಿಟ್ಟ.

"ನಿನಗೇನಾದರೂ ಕೇಳಿಸುತ್ತಿದೆಯೇ?"

ಬೇಂಬಿ ಕಿವಿಗೊಟ್ಟು ಕೇಳಿದ. ಅವನಿಗೇನೂ ಕೇಳಿಸಲಿಲ್ಲ.

"ನಡೆ ಹೋಗೋಣ," ಎಂದು ನಾಯಕ ಸರಸರನೆ ಮುಂದಕ್ಕೆ ಹೆಜ್ಜೆ ಹಾಕಿದ. ಬೇಂಬಿ ಆತನ ಹಿಂದೆಯೇ ಓಡಿದ.

"ಈಗಲೂ ಏನೂ ಕೇಳಿಸುತ್ತಿಲ್ಲವೇ?"

ಈ ಸಲ ಬೇಂಬಿಗೆ ಅಸ್ಪಷ್ಟವಾದ ಸದ್ದು ಕೇಳಿಬಂತು. ಎಲ್ಲಿಯೋ ಯಾರೋ ನೆಗೆ ನಗೆದು ಧುಮುಕುತ್ತಿದ್ದಂತೆ ಕೊಂಬೆಗಳನ್ನು ಬಗ್ಗಿಸುತ್ತಿದ್ದಂತೆ ಸದ್ದು....ಅಷ್ಟರಲ್ಲಿ ದಬ್ ಎಂದು ಕೆಳಗೆ ಬಿದ್ದ ಸದ್ದು......

ಬೇಂಬಿ ತಕ್ಷಣ ಹಿಂದಕ್ಕೆ ಓಡಿಹೋಗಲು ಸನ್ನದ್ಧನಾದ. ನಾಯಕ ಅವನನ್ನು ತಡೆದು 'ನಡೆ ಮುಂದಕ್ಕೆ ಹೋಗೋಣ' ಎಂದು ಆಜ್ಞಾಪಿಸಿದ ಸದ್ದು ಬರುತ್ತಿದ್ದ ಕಡೆಗೆ, ಆತ ವೇಗದಿಂದ ಓಡುತ್ತಿದ್ದ ತಾನೂ ಆತನ ಹಿಂದೆಯೇ ಓಡತೊಡಗಿದ ಬೇಂಬಿ.

"ಅಲ್ಲಿ ಅಪಾಯವೇನೂ ಇಲ್ಲಾಂತೀರಾ?" ಎಂದು ಕೇಳಿದ ಬೇಂಬಿ.

"ಇಲ್ಲದೇನು, ಬೇಕಾದಷ್ಟಿದೆ."

ಇಬ್ಬರೂ ಬೇಗ ಬೇಗ ಒಂದು ಎಳಚಿಗಿಡದ ಬಳಿಬಂದರು. ಯಾರೋ ಹಿಡಿದುಕೊಂಡು ಕೆಳಕ್ಕೆ ಎಳೆದು ಮತ್ತೆ ಬಿಡುತ್ತಿರುವಂತೆ ಅದರ ಕೊಂಬೆಗಳು ಕೆಳಕ್ಕೂ ಮೇಲಕ್ಕೂ ತೂಗಾಡುತ್ತಿದ್ದುವು. ಇನ್ನೂ ಹತ್ತಿರ ಬಂದಾಗ ಗಿಡಗಳನ್ನು ಸವರಿ ಮಾಡಿದ ಸಣ್ಣ ದಾರಿ ಕಾಣಿಸಿತು. ಅಲ್ಲಿ ನೆಲದ ಮೇಲೆ ಹೊರಳಾಡುತ್ತಾ ತನ್ನ ಸ್ನೇಹಿತ ಮೊಲ ಕಾಣಿಸಿದ. ಅವನು ಒಮ್ಮೆ ಅತ್ತ ಕಡೆ. ಒಮ್ಮೆ ಇತ್ತ ಕಡೆಗೆ ಓಡುತ್ತಿದ್ದ. ಅಷ್ಟರಲ್ಲಿ ನೆಟ್ಟಗೆ ನಿಲ್ಲುತ್ತಿದ್ದ, ಮತ್ತೆ ಓಡುವ ಪ್ರಯತ್ನ....ಅವನು ಚಲಿಸಿದಂತೆಲ್ಲಾ ಎಳಚಿ ಗಿಡದ ಕೊಂಬೆಗಳೂ ಅಲುಗಾಡುತ್ತಿದ್ದುವು.

ಬೇಂಬಿಗೆ ಒಂದು ಸಣ್ಣ ದಾರ ಕಾಣಿಸಿತು. ಅದರ ಒಂದು ಕೊನೆ ಎಳಚಿ ಗಿಡದ ಕೊಂಬೆಗೆ ಕಟ್ಟಲ್ಪಟ್ಟಿತ್ತು. ಮತ್ತೊಂದು ಕೊನೆ ಮೊಲದ ಕಂಠಕ್ಕೆ ಸಿಕ್ಕಿಹಾಕಿಕೊಂಡಿತ್ತು.

ಯಾರೋ ಬಂದ ಸದ್ದು ಕೇಳಿ ಮೊಲ ಒಂದು ಸಲ ಹಾರಿ, ಕೆಳಗೆ ಬಿದ್ದ. ಮತ್ತೆ ನೆಗೆದ. ಓಡಿಹೋಗಬೇಕೆಂಬ ದೃಢ ಪ್ರಯತ್ನ. ಆದರೆ ಅದೇನೂ ಸಾಧ್ಯವಾಗಲಿಲ್ಲ. ನಿರಾಶೆಯಿಂದಲೂ, ದಣಿವಿನಿಂದಲೂ ಕುಸಿದು ಬಿದ್ದ.

"ಗಾಬರಿ ಬೇಡ. ನಾನೇ....ಹೆದರ ಬೇಡ" ಎಂದ ನಾಯಕ ಹತ್ತಿರ ಬಂದು.

ದಯಾಪೂರ್ಣವಾದ, ಪ್ರೇಮಮಯವಾದ ಆ ಕಂಠ ಕೇಳಿ ಬೇಂಬಿ ವಿಚಲಿತನಾದ.

"ಭಯಪಡಬೇಡ ಮತ್ತು ಅಲುಗಾಡಬೇಡ ಸ್ವಲ್ಪವೂ ಚಲಿಸಬಾರದು ತಿಳಿಯಿತೇ?" ಎಂದ ಮತ್ತೆ ನಾಯಕ.

ಮೊಲ ಆತ ಹೇಳಿದಂತೆ ಕೇಳಿದ. ಕದಲದೆ ಮಲಗಿದ. ಅದರ ಎದೆ ವೇಗವಾಗಿ ಏರಿಳಿಯುತ್ತಿತ್ತು. ಉಸಿರು ಭಾರವಾಗಿತ್ತು.

ನಾಯಕ ಬಾಯಿಂದ ಎಳಚಿಕೊಂಬೆಯನ್ನು ಕೆಳಕ್ಕೆ ಬಾಗಿಸಿದ. ಕಾಲಿನಿಂದ ಅದನ್ನು ಒತ್ತಿ ಹಿಡಿದ. ಕೊಂಬೆಯ ಸಂದಿಯಲ್ಲಿ ತನ್ನ ಕೊಂಬನ್ನು

ತೂರಿಸಿ ಒಂದೇ ಪೆಟ್ಟಿಗೆ ಅದನ್ನು ಮುರಿದು ಬಿಟ್ಟ. ಅದಾದ ನಂತರ ಮೊಲ ವನ್ನು ಎಚ್ಚರಿಸಿದ.

"ಎಷ್ಟು ನೋವಾದರೂ ಸರಿ. ಅಲುಗಾಡಬೇಡ"

ನಾಯಕ ತನ್ನ ಕಲೆಯನ್ನು ಒಂದು ಪಕ್ಕಕ್ಕೆ ವಾಗಿಸಿ ತನ್ನ ಕೊಂಬಿನ ಕೊನೆಯನ್ನು ಮೊಲದ ಕಂಠದ ಬಳಿ, ಮೆತ್ತನೆಯ ಕೂದಲಿನ ಮಧ್ಯೆ ಚುಚ್ಚಿ ಗಂಟಿಗಾಗಿ ಹುಡುಕಾಡತೊಡಗಿದ. ಮೊಲ ಒಂದು ಕ್ಷಣ ಗಿಲಗಿಲನೆ ಒದ್ದಾ ಡಿತು. ನಾಯಕ ಕೂಡಲೇ ತನ್ನ ಪ್ರಯತ್ನ ಕೈಬಿಟ್ಟ.

"ಕದಲಬೇಡ. ಕದಲಿದರೆ ಸಾಯುತ್ತೀಕಣಯ್ಯಾ"

ನಾಯಕ ಮತ್ತೆ ತನ್ನ ಕೆಲಸ ಪ್ರಾರಂಭಿಸಿದ ಮೊಲ ಕದಲದೆ ಮಲ ಗಿತು. ಅವರಿಬ್ಬರನ್ನೂ ಆಶ್ಚರ್ಯದಿಂದ ನೋಡುತ್ತಾ ನಿಂತ ಬೇಂಬಿ.

ನಾಯಕನ ಕೊಂಬು ಮೊಲದ ಕಂಠದ ಬಳಿ ಕೂದಲ ಸಮೂಹದಲ್ಲಿ ಕೂರಿ ಕೊನೆಗೆ ಗಂಟಿಗೆ ಸಿಕ್ಕಿಕೊಂಡಿತು. ಆತ ತಲೆಯನ್ನು ಹುಷಾರಾಗಿ ಕದ ಲಿಸುತ್ತಾ ಕೊಂಬನ್ನು ಗಂಟಿನ ಒಳಕ್ಕೆ ತೂರಿಸಿದ. ಅದು ಸ್ವಲ್ಪ ಸಡಿಲ ವಾಯಿತು.

ಮೊಲ ನೋವನ್ನು ಸಹಿಸಲಾರದೆ ಗಟ್ಟಿಯಾಗಿ ಕೂಗಿತು.

"ಬಾಯಿ ಮುಚ್ಚು" ಎಂದ ನಾಯಕ ಗದರಿಸುತ್ತಾ.

ಅಳುತ್ತಿದ್ದ ಮೊಲವನ್ನು ನೋಡುತ್ತಿದ್ದರೆ ನಾಯಕ ಅದನ್ನು ಕೊಂದು ಬಿಡುತ್ತಾನೇನೋ ಅನ್ನಿಸುವಂತಿತ್ತು.

"ಸಾಕು ಮಾಡಯ್ಯಾ ನಿನ್ನ ಅಳೂನ" ನಾಯಕನ ಕಂಠದಲ್ಲಿ ಮಾಮೂ ಲಾಗಿ ಕೇಳಿಬರುವ ಕಾಠಿಣ್ಯ ಸ್ವಲ್ಪವೂ ಇರಲಿಲ್ಲ.

"ಯಾವುದಾದರೂ ನರಿ, ಗಿರಿ, ಬರಬೇಕೊಂತಿದೆಯೇನು ನಿನಗೆ ಕೂಗಬೇಡಾಂದರೆ ..." ಎನ್ನುತ್ತಾ ನಾಯಕ ಜಾಗರೂಕತೆಯಿಂದ ತನ್ನ ಕೆಲಸ ಮುಂದುವರಿಸಿದ, ಹಠಾತ್ತಾಗಿ ಗಂಟು ಬಿಚ್ಚಿಕೊಂಡಿತು. ಕಂಠಕ್ಕೆ ಹಾಕಿದ್ದ ಉರುಳಿನಿಂದ ಪಾರಾದೆನೆಂದಾಗಲೀ, ತನಗೆ ಸ್ವೇಚ್ಛೆ ಲಭಿಸಿತೆಂದಾಗಲೀ

ಮೊಲಕ್ಕೆ ತಿಳಿಯಲೇ ಇಲ್ಲ. ಮೆಲ್ಲಗೆ ಎರಡು ಹೆಜ್ಜೆ ಇಟ್ಟ, ಭಯಪಡುತ್ತ ಮೆಲ್ಲನೆ ನೆಗೆದ, ನಂತರ ಧೈರ್ಯವಾಗಿ ನೆಗೆದ. ಅಷ್ಟೆ! ತನ್ನ ಶಕ್ತಿಯ ನೆಲ್ಲಾ ಉಪಯೋಗಿಸಿ ಮಿಂಚಿನಂತೆ ಓಟಕಿತ್ತ.

ಬೇಂಬಿಗೆ ಕೋಪಬಂತು.

"ಕೊನೆಗೆ ಒಂದಿಷ್ಟು ಕೃತಜ್ಞತೆ ಹೇಳಬೇಕೂಂತಲೂ ತೋಚ ಲಿಲ್ಲವೇ?...." ಎಂದ.

"ಹೋಗಲಿ ಬಿಡು, ಅವನ ಬುದ್ಧಿ ಅವನ ಸ್ವಾಧೀನದಲ್ಲಿಲ್ಲ ಈಗ, ಅವನು ಸರಿಹೋಗಲು ಸ್ವಲ್ಪ ಸಮಯಬೇಕು" ಎಂದ ನಾಯಕ.

ಉರುಳು ನೆಲದ ಮೇಲೆ ಬಿದ್ದಿತ್ತು. ನೋಡೋದಕ್ಕೆ ಅದರಲ್ಲಿ ವಿಶೇಷ ವೇನೂ ಕಾಣಲಿಲ್ಲ. ಅಪಾಯವಿದೆ ಅಂತಲೂ ಅನ್ನಿಸಲಿಲ್ಲ. ಬೇಂಬಿ ಮೆಲ್ಲನೆ ಅದನ್ನು ಕಾಲಿನಗೊರಸಿನಿಂದ ಮುಟ್ಟಿದ. ಸಣ್ಣದಾಗಿ ಸದ್ದು ಕೇಳಿ ಸಿತು. ಭಯದಿಂದ ಕಾಲನ್ನು ಹಿಂದಕ್ಕೆ ತೆಗೆದುಕೊಂಡ. ತನಗೆ ಮಾಮೂ ಲಾಗಿ ಪರಿಚಯವಿದ್ದ ಸದ್ದಲ್ಲ ಅದು.

"ಮನುಷ್ಯನೇ?" ಎಂದ ಬೇಂಬಿ ಮೆಲುದನಿಯಲ್ಲಿ.

ಮುದಿನಾಯಕ ಹೌದೆಂದು ತಲೆದೂಗಿದ.
ಅವರಿಬ್ಬರೂ ನಿಧಾನವಾಗಿ ಅಲ್ಲಿಂದ ಹೊರಟು ಹೋದರು.

"ಒಂದು ವಿಷಯ ನೆನಪಿಡು, ಗಿಡಗಳನ್ನು ಸವರಿದ ಕಾಲುದಾರಿಯಲ್ಲಿ ನಡೆಯಬೇಕಾಗಿ ಬಂದಲ್ಲಿ ಮೊದಲೇ ಹುಷಾರಾಗಿ ಕೊಂಬೆಗಳನ್ನು ಗಮನಿಸು. ಕೊಂಬುಗಳಿಂದ ಮೇಲಕ್ಕೂ, ಕೆಳಕ್ಕೂ ಜಗ್ಗಿ ನೋಡು. ಈಗ ಕೇಳಿಸಿದಂತಹ ವಿಚಿತ್ರವಾದ ಸದ್ದು ಕೇಳಿಸಿದಲ್ಲಿ ಹಿಂದಿರುಗಬೇಕು. ತಲೆಯಮೇಲೆ ಕಿರೀಟ ವಿಲ್ಲದಿದ್ದಲ್ಲಿ ಮತ್ತಷ್ಟು ಹುಷಾರಾಗಿರಬೇಕು. ಅಂತಹ ಸಮಯದಲ್ಲಿ ಕಾಲು ದಾರಿಗಳಲ್ಲಿ ಓಡಾಡಲೇಬಾರದು."

ದೀರ್ಘಾಲೋಚನೆಯಲ್ಲಿ ಮುಳುಗಿದ ಬೇಂಬಿ ಮೌನ ವಹಿಸಿದ.

"ಅವನಿಲ್ಲಿ ಇಲ್ಲವೇ ಇಲ್ಲವಲ್ಲಾ !" ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದ ಬೇಂಬಿ.

"ಹೌದು, ಸಧ್ಯಕ್ಕೆ ಅಡವಿಯಲ್ಲಿಲ್ಲ" ಎಂದ ನಾಯಕ.

"ಇಲ್ಲ, ಆದರೆ ಇದಾನೆ" ಎಂದ ಬೇಂಬಿ.

ನಾಯಕ ತೀಕ್ಷ್ಣವಾಗಿ ಬೇಂಬಿಯ ಕಡೆ ನೋಡಿದ.

"ನಿಮ್ಮ ಗೋಬೋ ಸಹ ಹೀಗೇ ಅಂದನಲ್ಲವೇ ? ಅವ್ನಾಯಕ, ಅವನು ಮಾಡಲಾರದ್ದು ಏನೂ ಇಲ್ಲವಂತೆ ದಯಾಸಮುದ್ರನಂತೆ. ನೋಡಿದೆಯಲ್ಲಾ ಅವನು ದಯಾಸಮುದ್ರ ಅನ್ನೋದು ಎಷ್ಟು ನಿಜವೋ ಇದು ಅಷ್ಟೇ ನಿಜ" ನಾಯಕನ ಕಣ್ಣಲ್ಲಿ ಕ್ರೋಧ ಉಕ್ಕಿತು.

"ಮತ್ತೆ ಗೋಬೋನ ವಿಷಯದಲ್ಲಿ ಅವನು ದಯೆಯಿಂದಲೇ ನಡೆದುಕೊಂಡನಲ್ಲವೇ?"

"ನೀನು ಕೂಡಾ ಹಾಗೆಯೇ ಅಂದುಕೊಂಡಿದೀಯಾ ಬೇಂಬಿ?

ಬೇಂಬಿಯನ್ನು ನಾಯಕ ಹೆಸರು ಹಿಡಿದು ಕರೆದದ್ದು ಅದೇ ಮೊದಲ ಸಲ.

ಬೇಂಬಿ ಆಲೋಚಿಸ ತೊಡಗಿದ

"ಉಹೂಂ, ಗೊತ್ತಿಲ್ಲ ನನಗೇನೂ ಅರ್ಥವಾಗುತ್ತಿಲ್ಲ?" ಎಂದ

ನಾಯಕ ನಿಧಾನವಾಗಿ ಹೇಳಿದ.

"ಬದುಕನ್ನು ಅರ್ಥಮಾಡಿಕೋ. ಹುಷಾರಾಗಿರು" ಎಂದವನೇ ಅಲ್ಲಿಂದ ಹೊರಟು ಹೋದ.

ಆ ದಿನ ಬೇಂಬಿ ದೊಡ್ಡದೊಂದು ಪ್ರಮಾದದಲ್ಲಿ ಸಿಲುಕಿಕೊಂಡ.

ಬೆಳ್ಳಬೆಳಗಾಗುತ್ತಿತ್ತು. ಕಾಡಿನ ತುಂಬಾ ದಟ್ಟವಾದ ಮಂಜು ಕವಿದಿತ್ತು. ಕಾಡೆಲ್ಲಾ ನಿಶ್ಶಬ್ದವಾಗಿತ್ತು. ತಣ್ಣನೆಯ ಗಾಳಿ ಅಲೆ–ಅಲೆಯಾಗಿ ಬೀಸಿಬರುತ್ತಿತ್ತು. ಕಾಗೆ, ಮೈನಾಳನು ಇನ್ನೂ ನಿದ್ರೆಯಿಂದ ಎದ್ದಿರಲಿಲ್ಲ. ಗೀಜಗಗಳು ಬೆಚ್ಚಗೆ ನಿದ್ದೆ ಮಾಡುತ್ತಿದ್ದುವು.

ಆ ದಿನ ರಾತ್ರಿ ಬೇಂಬಿಗೆ ಫಲೀನಾ ದಾರಿಯಲ್ಲಿ ಸಿಕ್ಕಿದಳು.

ಅವಳು ನಾಚುತ್ತಾ ವ್ಯಾಕುಲದಿಂದ ಬೇಂಬಿಯ ಕಡೆ ನೋಡಿದಳು.

"ನಾನು ಒಬ್ಬಂಟಿಗಳಾಗಿ ಬಿಟ್ಟೆ" ಎಂದಳು ಮೆಲ್ಲನೆ.

"ನಾನೂ ಅಷ್ಟೆ" ಎಂದ ಬೇಂಬಿ ಚಿಂತೆಯಿಂದ.

"ಈ ನಡುವೆ ನೀನು ನನ್ನೊಂದಿಗೆ ಓಡಾಡುವುದೇ ಇಲ್ಲ" ಎಂದು ಉತ್ತರಕ್ಕಾಗಿ ಎದುರು ನೋಡಿದಳು ಫಲೀನಾ. ಅವಳ ನೋಟದಲ್ಲಿ ಹಿಂದಿನ ಉಲ್ಲಾಸ, ಸಂತೋಷಗಳಿರಲಿಲ್ಲ. ಅವಳ ಸ್ವಭಾವ ತುಂಬಾ ಬದಲಾಯಿಸಿತ್ತು. ನಿಧಾನಸ್ಥಳಾಗಿದ್ದಳು ಈಗ ಹಿರಿತನ ಬಂದಂತನಿಸು ತ್ತಿತ್ತು. ಅವಳನ್ನು ಸಮಾಧಾನ ಪಡಿಸಬೇಕೆಂದೂ, ಏನಾದರೂ ಒಳ್ಳೆಯ ಮಾತುಗಳನ್ನು ಹೇಳಬೇಕೆಂದೂ, ಅನ್ನಿಸಿತು ಬೇಂಬಿಗೆ. ಆದರೆ ಏನೂ ಹೇಳಲಾರದಾದ.

"ಹಾಗಾದರೆ ನನ್ನ ಮೇಲೆ ನಿನಗೆ ಪ್ರೀತಿಯಿಲ್ಲಾಂತಲೇ?"

"ನನಗೆ ಗೊತ್ತಿಲ್ಲ" ಎಂದ ಬೇಂಬಿ, ಶೂನ್ಯವನ್ನು ನಿಟ್ಟಿಸುತ್ತಾ.

ಫಲೀನಾ ಮತ್ತೆ ಮಾತನಾಡಲಿಲ್ಲ. ನಿಧಾನವಾಗಿ ನಡೆಯುತ್ತಾ ತನ್ನ ಪಾಡಿಗೆ ತಾನು ಹೊರಟು ಹೋದಳು.

ಮೈದಾನದ ಅಂಚಿನಲ್ಲಿದ್ದ ಹಳೆಯ ಬಸರಿ ಮರದ ಕೆಳಗೆ ನಿಂತಿದ್ದ ಬೇಂಬಿ, ಪರಿಶುಭ್ರವಾದ ತಣ್ಣನೆಯ ಗಾಳಿಯನ್ನು ಸೇವಿಸಿದ. ಬೆಳಗಿನ ಜಾವ ಬೀಳುವ ಮಂಜಿನಲ್ಲಿ ನೆನೆದು. ಗಿಡಗಳ ಮಧ್ಯದಿಂದ, ಹುಲ್ಲಿನ ಮೇಲಿಂದ ತೇಲಿ ಬರುತ್ತಿದ್ದ ಆ ಗಾಳಿ ಅವನಿಗೆಷ್ಟೋ ಹಿತವಾಗಿತ್ತು. ಮನಸ್ಸು ಹಗುರವಾಗಿತ್ತು. ಈ ನಡುವೆ ಎಂದೂ ಇಲ್ಲದ ಉತ್ಸಾಹ ತುಂಬಿ ಬಂತು. ಉಲ್ಲಾಸದಿಂದ ಮಂಜಿನಿಂದ ತುಂಬಿದ್ದ ಮೈದಾನದೊಳಕ್ಕೆ ಹೆಜ್ಜೆಯಿಟ್ಟ.

ಹಠಾತ್ತಾಗಿ ಗುಡುಗಿದ ಶಬ್ದ.

ಬೇಂಬಿ ಕಂಪಿಸಿದ. ಅವನ ಕಾಲುಗಳು ಕುಸಿದುಬಿದ್ದವು. ವಿಪರೀತ

ವಾದ ಭಯದಿಂದ ನೆಗೆದು ಹಿಂದಕ್ಕೆ ಧುಮುಕಿ ಗಿಡಗಳ ಸಾಲಿನಲ್ಲಿ ತೂರಿ ಹೋದ. ಏನಾಯಿತೆಂದು ಅವನಿಗರ್ಥವಾಗಲಿಲ್ಲ. ಯಾವ ಆಲೋಚನೆಯೂ ತಲೆಯಲ್ಲಿ ಸ್ಥಿರವಾಗಿ ನಿಲ್ಲುವಂತಿರಲಿಲ್ಲ. ಒಂದೇ ಆಲೋಚನೆ. ಒಂದೇ ಗುರಿ ಓಡಬೇಕು, ಓಡಬೇಕು ಅಷ್ಟೆ. ಹೆದರಿಕೆ ಎದೆಯನ್ನು ಒತ್ತುತ್ತಿತ್ತು. ಉಸಿರು ಬಿಡುವುದೇ ಕಷ್ಟವಾಗಿತ್ತು. ಅಷ್ಟರಲ್ಲಿ ಬಲ ತೊಡೆಯಲ್ಲಿ ಸಹಿಸಲಾರದ ನೋವು. ಸೂಜಿಗಳಿಂದ ಚುಚ್ಚಿದಂತಹ ನೋವು. ಅವನಿಗೆ ತಿಳಿಯದಂತೆಯೇ ಓಡುವುದನ್ನು ಬಿಟ್ಟು ನಡೆಯತೊಡಗಿದ್ದ. ಕೆಲವೇ ನಿಮಿಷಗಳಲ್ಲಿ ಅದೂ ಸಾಧ್ಯವಾಗದಂತಾಗಿ, ಹಿಂದಿನ ಕಾಲುಗಳು ಭಾರವಾದಂತೆನಿಸಿ ನೆಲದ ಮೇಲೆ ಕುಸಿದು ಬಿದ್ದುಬಿಟ್ಟ.

ಏನನ್ನೂ ಆಲೋಚಿಸದೆ, ಅತ್ತಿತ್ತ ಅಲುಗಾಡದೆ ಹಾಯಾಗಿ ಮಲಗಿ ಬಿಡಬೇಕೆನ್ನುವ ಆಲೋಚನೆ ಅವನ ನರ–ನರಗಳಲ್ಲೂ ವ್ಯಾಪಿಸಿತು.

"ಏಳು ಬೇಂಬಿ. ಎದ್ದೇಳು."

ಯಾರೋ ಭುಜದ ಮೇಲೆ ತಟ್ಟುತ್ತಿದ್ದಂತೆನಿಸಿತು. ಭಾರವಾಗಿ ಎಳೆದುಕೊಂಡು ಹೋಗುತ್ತಿದ್ದ ಕಣ್ಣರೆಪ್ಪೆಗಳನ್ನು ಬಲವಂತದಿಂದ ತೆರೆಯಲು ಪ್ರಯತ್ನಿಸಿದ. ಅವನ ಮುಂದೆ ಮುದಿನಾಯಕ ನಿಂತಿದ್ದ.

"ಬೇಂಬಿ ಏಳಬೇಕು ಮತ್ತೆ."

ನಾಯಕನ ಅಧಿಕಾರಯುತವಾದ ಕಂಠದಲ್ಲಿ ಮಾರ್ದವ ಮಿಳಿತವಾಗಿ ಧ್ವನಿಸಿತು. ಶರೀರವನ್ನು ಕತ್ತರಿಸುತ್ತಿದ್ದಂತಹ ನೋವಿಗೆ ಸ್ವಲ್ಪ ಉಪಶಮನ ವಾದಂತೆನಿಸಿತು.

"ಏಳಬೇಕು! ಹುಂ, ಏಳು" ಗಂಭೀರವಾದ ನಾಯಕನ ಕಂಠದಲ್ಲಿ ಮೊದಲ ಬಾರಿಗೆ ಕಂಪನ ಕೇಳಿಸಿತು.

"ಏಳು ಮಗೂ... ನಾವೀಗ ಓಡಿಹೋಗಬೇಕಪ್ಪಾ ..."

'ಮಗೂ' ಎಂಬ ಮಾತು ಅಪ್ರಯತ್ನವಾಗಿಯೇ ನಾಯಕನ ಹೃದಯ ಸೀಳಿಕೊಂಡು ಹೊರಬಿದ್ದಿತ್ತು. ಬೇಂಬಿ ತಟ್ಟನೆ ಎದ್ದು ನಿಂತ.

"ಹಾಂ..ಹಾಗೇ," ನಾಯಕ ತಲೆದೂಗಿದ. ಭಾರವಾಗಿ ನಿಟ್ಟುಸಿರುಬಿಟ್ಟ.

"ಬಾ ನನ್ನೊಂದಿಗೆ. ಇನ್ನು ಮೇಲೆ ನನ್ನ ಜತೆಯಲ್ಲಿಯೇ ಇರುವಿಯಂತೆ."

ಬೇಂಬಿ ಆತನೊಂದಿಗೆ ಮುಂದಕ್ಕೆ ಹೆಜ್ಜೆಯಿಡಲು ಪ್ರಯತ್ನಿಸಿದ. ಆದರೆ ನೆಲದಮೇಲೆ ಕಣ್ಣುಮುಚ್ಚಿಕೊಂಡು ಮಲಗಿ ಎಲ್ಲವನ್ನೂ ಮರೆತು, ಎಷ್ಟು ದಿನವಾದರೂ ಹಾಗೆಯೇ ಇದ್ದು ಬಿಡಬೇಕೆಂಬ ಬಯಕೆ ತೀವ್ರವಾಗಿತ್ತು ಅವನಲ್ಲಿ.

ಬೇಂಬಿಯ ಮನಃಸ್ಥಿತಿಯನ್ನು ನಾಯಕ ಗ್ರಹಿಸಿದ.

"ಈಗ ಎಷ್ಟು ನೋವನ್ನಾದರೂ ಸಹಿಸಿಕೊಳ್ಳಬೇಕು. ವಿಶ್ರಾಂತಿಗೆ ಇದು ಸಮಯವಲ್ಲ. ಆದರ ಆಲೋಚನೆಯೇ ಸಲ್ಲ. ತಪ್ಪಿಸಿಕೊಂಡು ಹೋಗುವ ಯೋಚನೆಯ ಹೊರತು ಮತ್ತೊಂದು ಆಲೋಚನೆಯನ್ನೇ ಮನಸ್ಸಿನಲ್ಲಿ ತರಬೇಡ, ಅರ್ಥವಾಯಿತೆ? ಓಡಬೇಕು. ಇಲ್ಲದಿದ್ದರೆ ಪ್ರಾಣಾ ಪಾಯ ಕಣಪ್ಪಾ. ಅವನು ಬಂದೇ ಬಿಡುತ್ತಾನೆ. ಅವನಿಗೆ ದಯಾದಾಕ್ಷಿಣ್ಯ ಗಳೇನೂ ಇಲ್ಲ. ನಿನ್ನನ್ನು ಕೊಂದೇ ಬಿಡುತ್ತಾನೆ. ಹುಂ ಹೆಜ್ಜೆ ಎತ್ತಿ ಹಾಕು...ಹಾಗೇ...ಹಾಗೇ ಕಣಪ್ಪಾ, ನಡೆ, ಇನ್ನು ಹೋಗೋಣ."

ಬೇಂಬಿಗೆ ಏನನ್ನೂ ಆಲೋಚಿಸುವ ಶಕ್ತಿಯೇ ಇರಲಿಲ್ಲ. ಒಂದೊಂದು ಹೆಜ್ಜೆ ಇರಿಸಿದಾಗಲೂ ಶೂಲದಿಂದ ಇರಿದಂತಹ ಅನುಭವ. ಮೈಯೆಲ್ಲಾ ಹುಣ್ಣು ಹುಣ್ಣಾದಂತೆನಿಸುತ್ತಿತ್ತು.

ನಾಯಕ ನೇರವಾಗಿ ನಡೆಯದೆ ದೊಡ್ಡ ದೊಡ್ಡ ಸೊನ್ನೆಗಳನ್ನು ಸುತ್ತುತ್ತಿದ್ದ. ಈ ನಡಿಗೆಗೆ ಇನ್ನೂ ಕೊನೆಯೆಂಬುದೇ ಇಲ್ಲವೇನೋ ಅನ್ನಿಸ ತೊಡಗಿತ್ತು ಬೇಂಬಿಗೆ. ಇಷ್ಟು ಹೊತ್ತು ನಡೆದರೂ ಮತ್ತೆ ಬಸರಿಮರದ ಬಳಿಗೇ ಬಂದಂತೆ ಅಷ್ಟು ನೋವಿನಲ್ಲೂ ಗ್ರಹಿಸಿದ ಬೇಂಬಿ.

ನಾಯಕ ನಿಂತು ನೆಲದ ವಾಸನೆ ನೋಡಿ ನಿಧಾನವಾಗಿ ಹೇಳಿದ, "ಹತ್ತಿರ ದಲ್ಲಿಯೇ ಎಲ್ಲೋ ಅವನೂ, ಅವನ ನಾಯಿ ಇದ್ದಾರೆ. ನಾವು ಬೇಗ ಹೋಗ ಬೇಕು."

ಇಬ್ಬರೂ ಮತ್ತೆ ಓಡತೊಡಗಿದರು. ಒಂದು ಕಡೆ ನಾಯಕ ತಟ್ಟನೆ ನಿಂತುಬಿಟ್ಟ. "ಇಗೋ ನೋಡು, ಇಲ್ಲಿಯೇ ನೀನು ಬಿದ್ದು ಬಿಟ್ಟಿದ್ದು,

ಗಮನಿಸಿದೆಯಾ?" ಎಂದ. ಹುಲ್ಲೆಲ್ಲಾ ನಲುಗಿತ್ತು ಅಲ್ಲಿ, ರಕ್ತ ಸುರಿದಿತ್ತು, ಕಪ್ಪನೆಯ ರಕ್ತ ಗಡ್ಡೆಕಟ್ಟಿ ಹುಲ್ಲಿನ ಮೇಲೆಲ್ಲಾ ಮೆತ್ತಿಕೊಂಡಿತ್ತು.

ನಾಯಕನ ಮೂಗಿನ ಹೊಳ್ಳೆಗಳು ಅಗಲವಾದವು.
ವಾಸನೆ ಗೊತ್ತಾಗುತ್ತಿದೆಯೇ ಬೇಂಬಿ, ಅವರು ಈಗತಾನೇ ಇಲ್ಲಿಗೆ ಬಂದು ಹೋಗಿದ್ದಾರೆ, ಅವನೂ ಅವನ ನಾಯಿ. ಬಾ. ಹೋಗೋಣಂತೆ."

ಇಬ್ಬರೂ ಮುಂದಕ್ಕೆ ಸಾಗಿದರು.

ನೆಲದ ಮೇಲಿನ ರಕ್ತದ ತೊಟ್ಟುಗಳು ಬೇಂಬಿಗೆ ಕಾಣಿಸಿದುವು.

"ನಾವು ಇದೇ ದಾರಿಯಲ್ಲಿ ಇದಕ್ಕೆ ಮುಂಚೆ ನಡೆದುಬಂದವು" ಎಂದು ಹೇಳಬೇಕೆನಿಸಿತು. ಆದರೆ ಮಾತನಾಡಲು ಅವನಿಂದಾಗಲಿಲ್ಲ.

"ಅವರನ್ನು ದಾರಿ ತಪ್ಪಿಸಿದೆವು. ಇನ್ನು ನಡೆ, ಹೋಗೋಣ" ಎಂದ ನಾಯಕ ತೃಪ್ತಿಯಿಂದ ನಿಟ್ಟುಸಿರುಬಿಡುತ್ತಾ.

ಸ್ವಲ್ಪಹೊತ್ತು ಬೇಂಬಿಯನ್ನು ಹಿಂದಿನ ದಾರಿಯಲ್ಲಿಯೇ ಕರೆದು ಕೊಂಡುಹೋಗಿ, ಮತ್ತೆ ದೊಡ್ಡದಾಗಿ ವಲಯಾಕಾರದಲ್ಲಿ ಸುತ್ತಲಾರಂಬಿಸಿದ ನಾಯಕ.

ಬೇಂಬಿ ನಾಯಕನ ಹಿಂದೆ ಅರ್ಧಜಾಗ್ರತಾವಸ್ಥೆಯಲ್ಲಿ ನಡೆಯುತ್ತಿದ್ದ ಆಗಲೇ ಎರಡನೆಯಸಲ ಹಳೆಯ ಬಸರಿ ಮರವನ್ನು ಮತ್ತೊಂದು ದಿಕ್ಕಿನಿಂದ ಸಮೀಪಿಸಿದರು. ಬೇಂಬಿ ಬಿದ್ದುಹೋದ ಸ್ಥಳವನ್ನು ಎರಡನೆಯಸಲ ದಾಟಿ ದರು. ನಾಯಕ ಮತ್ತೊಂದು ದಿಕ್ಕಿನಿಂದ ಮತ್ತೊಂದು ಸಲ ವಲಯಾಕಾರ ದಲ್ಲಿ ಸುತ್ತಲಾರಂಭಿಸಿದ.

"ಇಗೋ ಇದನ್ನು ತಿನ್ನು"

ನಾಯಕ ನಿಂತು ಬೇಂಬಿಗೆ ಯಾವುದೋ ಗಿಡದ ಎಲೆಗಳನ್ನು ತೋರಿ ಸಿದ. ದಟ್ಟ ಹಸಿರು ಬಣ್ಣದ ನೂಗು ತುಂಬಿದ ಜಿಡ್ಡು ಜಿಡ್ಡಾಗಿದ್ದ ಸಣ್ಣ ಎಲೆಗಳ ಗುಬರು ಅದು. ನಾಯಕ ಹೇಳಿದಂತೆ ಮಾಡಿದ ಬೇಂಬಿ, ಆ ಎಲೆ ಗಳು ಕಹಿಯಾಗಿದ್ದು ವಾಂತಿ ಬರುವಂತೆನ್ನಿಸಿತು.

ಸ್ವಲ್ಪ ದೂರ ನಡೆದ ನಂತರ ನಾಯಕ ಕೇಳಿದ.

"ಈಗ ಹೇಗಿದೆ"

"ಸ್ವಲ್ಪ ವಾಸಿ"

ಹಠಾತ್ತಾಗಿ ಬೇಂಬಿಯ ಬಾಯಿಂದ ಮಾತು ಹೊರಟಿತ್ತು. ಎಳೆದು ಕೊಂಡು ಹೋಗುತ್ತಿದ್ದ ಕಣ್ಣುಗಳು ತೆರೆದುಕೊಂಡವು. ಮನಸ್ಸು ಸ್ವಲ್ಪ ಹಗುರಾದಂತೆ ಬಳಲಿಕೆ ಸ್ವಲ್ಪ ಕಡಿಮೆಯಾದಂತೆ ಅನ್ನಿಸಿತು.

"ಇನ್ನು ಮುಂದಕ್ಕೆ ನಡೆಯಬೇಕು" ನಾಯಕ ಆಜ್ಞಾಪಿಸಿದ.

ಬೇಂಬಿ ಮುಂದೆ ನಡೆಯುತ್ತಿದ್ದರೆ ಅವನ ಹಿಂದೆಯೇ ನಾಯಕ ನಡೆ ಯುತ್ತಾ ಹೀಗೆ ಇಬ್ಬರೂ ತುಂಬಾ ದೂರವನ್ನು ಕ್ರಮಿಸಿದರು.

"ಹಮ್ಮಯ್ಯ ಇಷ್ಟುಹೊತ್ತಿಗೆ " ಎಂದ ನಾಯಕ ಸಂತೋಷದಿಂದ.

ಬೇಂಬಿ ಹಿಂದಿರುಗಿ ನೋಡಿದ.

"ಗಾಯದೊಳಗಿಂದ ರಕ್ತ ಸ್ರವಿಸುವುದು ನಿಂತಿದೆ. ಇನ್ನು ಹುಲ್ಲಿನ ಮೇಲೆ ರಕ್ತ ಬೀಳುವುದಿಲ್ಲ. ಅವನಿಗೂ ಅವನ ನಾಯಿಗೂ ಇನ್ನು ನಿನ್ನ ಪತ್ತೆ ಸಿಗೊಲ್ಲ ಬಿಡು," ಎಂದು ವಿವರಿಸಿದ ನಾಯಕ.

ಆತ ಬಳಲಿದಂತೆ ಕಾಣಿಸುತ್ತಿದ್ದ. ಆದರೆ ಕಂಠದಲ್ಲಿ ಧೈರ್ಯ ದೀಪ್ತಿ ವಂತವಾಗಿತ್ತು.

"ಬಾ ಹೋಗೋಣ. ನಿನಗಿನ್ನು ವಿಶ್ರಾಂತಿ ಅವಶ್ಯಕ"

ಸ್ವಲ್ಪ ಹೊತ್ತಿಗೆಲ್ಲಾ ಇಬ್ಬರೂ ದೊಡ್ಡ ತೊರೆಯ ಬಳಿಗೆ ಬಂದರು. ನಾಯಕ ಅದರಲ್ಲಿಳಿದು ನಾಲ್ಕೈದು ನೆಗೆತಗಳಲ್ಲಿ ಎತ್ತರವಾಗಿದ್ದ ಆಚೆಯ ದಡ ಹತ್ತಿಬಿಟ್ಟ.

ಬೇಂಬಿ ನಾಯಕನನ್ನು ಅನುಸರಿಸಿದ ಆದರೆ ಎಷ್ಟು ಪ್ರಯತ್ನಿಸಿದರೂ ದಡ ಹತ್ತಲಾರದೆ ಹೋದ. ಮತ್ತೆ ನೋವು ಷುರುವಾಗಿತ್ತು. ಕಾಲು ಜಾರಿ ಬಿದ್ದು ಬಿಟ್ಟ, ಮತ್ತೆ ಎದ್ದು ಹತ್ತಲು ಪ್ರಯತ್ನಿಸಿದ. ಸ್ವಲ್ಪದೂರ ಹತ್ತಿ ಜಾರಿ ಹಿಂದಕ್ಕೆ ಬಿದ್ದು ಬಿಟ್ಟ.

ದಡದ ಮೇಲಿನಿಂದ ನಾಯಕ ಪ್ರೋತ್ಸಾಹ ಕೊಡುತ್ತಿದ್ದ." "ಈಗ ನಾನು ನಿನಗೇನೂ ಸಹಾಯ ಮಾಡುವಂತಿಲ್ಲ ಮಗೂ. ನೀನು ಮೇಲಕ್ಕೆ ಹತ್ತಲೇ ಬೇಕು. ಬೇರೆ ದಾರಿಯೇ ಇಲ್ಲ...ಕೇಳ್ತಿದೀಯಾ...ಇನ್ನೊಮ್ಮೆ ಪ್ರಯತ್ನಿಸು, ಮೇಲಕ್ಕೆ ಹತ್ತಿ ಬಾ..."

ಸಹಿಸಲಾರದ ನೋವನ್ನು ಅತಿ ಕಷ್ಟದಿಂದ ತಡೆದುಕೊಳ್ಳುತ್ತಾ ಬಲ ವನ್ನೆಲ್ಲಾ ಕೇಂದ್ರೀಕರಿಸಿ ಬೇಂಬಿ ದಡ ಹತ್ತಿದ. ಇನ್ನು ಒಂದಿಷ್ಟೂ ಪ್ರಾಣ ಉಳಿದಿಲ್ಲವೆನಿಸತೊಡಗಿತು ನೋವು ಎದೆಯನ್ನು ಸೀಳುತ್ತಿರುವಂತೆನಿಸುತ್ತಿತ್ತು.

"ಗಾಯದಿಂದ ಮತ್ತೆ ರಕ್ತ ಬಿಸರುತ್ತಿದೆ. ಆದರೆ ಮುಂಚಿನಷ್ಟಲ್ಲ. ಬಿಡು. ಹೀಗಾಗುತ್ತೇಂತ ನನಗೆ ಗೊತ್ತು. ಆದರೂ....ಇದು ತಪ್ಪಿದಲ್ಲ. ಈಗಿನ್ನು ನಾವು ಭಯಪಡಬೇಕಾದ ಅವಶ್ಯಕತೆ ಎಳ್ಳಷ್ಟೂ ಇಲ್ಲ..." ನಾಯಕ ಬೇಂಬಿಯನ್ನು ಸಂತೈಸಿದ.

ಆಕಾಶದಷ್ಟೆತ್ತರ ಬೆಳೆದ ಬೇಲದ ತೋಪಿನೊಳಗಿನಿಂದ ನಿಧಾನವಾಗಿ ನಡೆಯಲಾರಂಭಿಸಿದರು. ನೆಲ ಗಟ್ಟಿಯಾಗಿ ನುಣುಪಾಗಿದ್ದುದರಿಂದ ಜಾರು ವಂತಾಗುತ್ತಿತ್ತು. ನಡೆಯುವುದೇ ಕಷ್ಟವಾಗಿತ್ತು.

ನೆಲದ ಮೇಲೆ ಕುಸಿದು ಬಿದ್ದು, ಏನನ್ನೂ ಆಲೋಚಿಸದೆ ಕಣ್ಣು ಮುಚ್ಚಿಕೊಂಡು ಬಿದ್ದುಕೊಳ್ಳ ಬೇಕೆಂಬ ಬಯಕೆ ಬೇಂಬಿಯಲ್ಲಿ ಮತ್ತೆ ತಲೆ ಯೆತ್ತಿತ್ತು. ಮೈಯೆಲ್ಲಾ ಕೆಂಡದಂತಹ ಜ್ವರ ಬಂದಂತೆ ಯಾತನೆ ಕೊಡು ತ್ತಿತ್ತು. ತಲೆ ಸೀಳಿಹೋಗುತ್ತಿದೆಯೆನ್ನುವ ತೀವ್ರವಾದ ಅನಿಸಿಕೆ. ಕಣ್ಣಿನ ಮುಂದೆ ಕಪ್ಪಗಿನ ತೆರೆಯೊಂದು ಅಡ್ಡ ಬಂದಂತಾಗಿ ದೃಷ್ಟಿ ಮಂದವಾಯಿತು. ವಿಶ್ರಾಂತಿ...ವಿಶ್ರಾಂತಿ ಅದರ ಹೊರತು ಬೇರೆ ಆಲೋಚನೆಯೇ ಇರಲಿಲ್ಲ. ತನ್ನ ಬದುಕು ಒಂದು ಕ್ಷಣದಲ್ಲಿ ಯಾವ ರೀತಿ ಬದಲಾಯಿಸಿ ಹೋಯಿತಲ್ಲಾ ಎಂದು ಆಶ್ಚರ್ಯವುಂಟಾಯಿತು.

"ನಾನು ಎಂದಾದರೂ ಆರೋಗ್ಯವಾಗಿ ಬಲಿಷ್ಠನಾಗಿ ಇದ್ದುದುಂಟೇ?" ಎಂಬ ಅನುಮಾನವುಂಟಾಯಿತು.

ಹೌದು, ಈ ದಿನ ಬೆಳಿಗ್ಗೆ ತಾನೇ ತಾನು ಹೀಗಾಗಿದ್ದು. ಎಷ್ಟೋ

ಹೊತ್ತಾಗಿಲ್ಲ ... ಆದರೆ ಎಂದೋ ನಡೆದಂತೆ ಎಷ್ಟೋ ಕಾಲ ಕಳೆದು ಹೋದಂತಹ ಅನುಭವ ..

ಹಾಗೆಯೇ ಕಾಲುಗಳನ್ನು ಎಳೆದು ಹಾಕುತ್ತಾ ನಡೆದರು. ಸೀಮೆ ಹುಣಿಸೆ ಗಿಡಗಳನ್ನು ದಾಟಿದರು ಇನ್ನೂ ಮುಂದೆ ಹೋದರು. ಅಲ್ಲಿ ದೊಡ್ಡದಾದ ನೇರಿಳೆ ಮರ. ದಾರಿಗಡ್ಡವಾಗಿ ಅದರ ಮುರಿದ ಕೊಂಬೆಗಳು...

"ಬಂದು ಬಿಟ್ಟೆವೇ ಕಣಪ್ಪಾ" ಎಂದ ನಾಯಕ ಕೆಕ್ಕುಲತೆಯಿಂದ.

ನೋವಿನಿಂದ ನರಳುತ್ತಾ, ಕಣ್ಣುಮುಚ್ಚಿಕೊಂಡೇ ಬಳಲಿದ ಕಾಲುಗಳ ನ್ನೆಳೆಯುತ್ತಾ ನಾಯಕನ ಕಂಠ ಕೇಳಿಸಿದತ್ತ ಹೆಜ್ಜೆಹಾಕಿದ ಬೇಂಬಿ. ಮರು ಕ್ಷಣವೇ ಉರುಳಿ ಹಳ್ಳದಲ್ಲಿ ಬಿದ್ದು ಬಿಟ್ಟ.

"ಹಾಂ ಹಾಗೇ" ಎಂದ ನಾಯಕ ಸಂತೃಪ್ತಿಯಿಂದ" ಸ್ವಲ್ಪ ಪಕ್ಕಕ್ಕೆ ಸರಿ ಸಾಕು, ಇನ್ನು ನಿದ್ದೆಮಾಡು" ಎಂದ.

ಬೇಂಬಿ, ಬಿದ್ದ ಹಳ್ಳ ಮುರಿದ ನೇರಿಳೆ ಮರದ ಕೆಳಗೆ ಇತ್ತು. ಆಳವಾಗಿ ವಿಶಾಲವಾಗಿ ಗುಹೆಯಂತಿತ್ತು ಅದು. ಎಳಚಿ ಪೊದೆಗಳು, ಸೀಮೆ ಹುಲ್ಲೂ ಇವೆಲ್ಲಾ ಸುತ್ತಲೂ ಬೆಳೆದು ಹಳ್ಳವನ್ನು ಮರೆ ಮಾಡಿದ್ದುವು. ಬೆಳಕು ಬೀಳದ ಆ ನೆರಳಿನಲ್ಲಿ ಹಾಯಾಗಿ ಮಲಗಿದ ಬೇಂಬಿ.

"ಮಲಗು ಕಂದಾ, ನಿಶ್ಚಿಂತೆಯಾಗಿ ಮಲಗು. ಇಲ್ಲಿ ನಿನಗಾವ ಹೆದರಿ ಕೆಯೂ ಇಲ್ಲ" ಎಂಬ ನಾಯಕನ ಕಂಠ ಜೋಗುಳದಂತಿತ್ತು ಬೇಂಬಿಗೆ.

ದಿನಗಳುರುಳಿದುವು.

ಬೇಂಬಿ ಬೆಚ್ಚನೆಯ ಭೂದೇವಿಯ ಮಡಿಲಿನಲ್ಲಿ ಮಲಗಿದ್ದ, ಮೊದಲಲ್ಲಿ ಅವನಿಗೆ ನೋವು ದಿನದಿನಕ್ಕೆ ಹೆಚ್ಚಾಗುತ್ತಿದೆಯೇನೋ ಅನ್ನಿಸುತ್ತಿತ್ತು. ಶರೀರದಲ್ಲೆಲ್ಲಾ ಸೂಜಿಗಳಿಂದ ಚುಚ್ಚಿದಂತಹ ಅನುಭವ...ನಿಧಾನವಾಗಿ ಜ್ವರ ಇಳಿಯಿತು. ನೋವು ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಾ ಬಂತು. ಸೊಂಟ ದಲ್ಲಿ ಮಾತ್ರ ನೋವು ನಿಂತಿತ್ತು. ಬರಬರುತ್ತಾ ಅದೂ ಕಡಿಮೆಯಾಯಿತು.

ಮೊದಲಲ್ಲಿ ಅತಿ ಪ್ರಯತ್ನದಿಂದ ಎದ್ದು ನಿಲ್ಲಲು ಪ್ರಯತ್ನಿಸಿದ ಬೇಂಬಿ

ಅವನ ಕಾಲುಗಳು ಬಲಹೀನವಾಗಿದ್ದುವು. ಹಾಗೆಯೇ ಒಂದೆರಡು ಹೆಜ್ಜೆಗಳ ನ್ನಿಡಲು ಪ್ರಯತ್ನಿಸಿದ. ನಂತರ ಆಗಾಗ ಆ ಹಳ್ಳದಿಂದ ಹೊರಬಂದು ತನ್ನ ಆಹಾರವನ್ನು ತಾನೇ ಸಂಪಾದಿಸಿಕೊಳ್ಳಲು ತೊಡಗಿದ.

ಹಿಂದೆಂದೂ ವಾಸನೆ ಸಹ ನೋಡಿರದ ಹುಲ್ಲನ್ನು ಈಗ ತಿನ್ನುತ್ತಿದ್ದ. ಕೊನೆಗೆ ಚಳಿಗಾಲದಲ್ಲಿ ಏನೂ ಸಿಗದಿದ್ದಾಗ ಸಹ ಅವನು ಈ ಹುಲ್ಲನ್ನು ಮೂಸುತ್ತಿರಲಿಲ್ಲ. ಈಗ ಅದಕ್ಕೊಂದು ಪ್ರತ್ಯೇಕವಾದ ರುಚಿಯುದೆಯೆಂದು ಅನ್ನಿಸತೊಡಗಿತು ಅವನಿಗೆ ಅದರ ವಾಸನೆ ಈಗ ಅವನಿಗೆ ಇಷ್ಟವಾಗ ತೊಡ ಗಿತು. ಇದುವರೆವಿಗೂ ತಿನ್ನುತ್ತಿದ್ದ ಸಿಹಿಯಾದ, ಮೃದುವಾದ ಹುಲ್ಲಿಗಿಂತ ಇದು ಸ್ವಲ್ಪ ಘಾಟುವಾಸನೆಯಿಂದ ಕೂಡಿತ್ತು, ನಾಲಿಗೆಯಲ್ಲಿ ನೀರೂರು ತ್ತಿತ್ತು. ಈಗ ಅವನಿದ್ದ ಪರಿಸ್ಥಿತಿಯಲ್ಲಿ ಅದು ತುಂಬಾ ರುಚಿ ಎನಿಸ ತೊಡ ಗಿತ್ತು. ಅದನ್ನು ತಿನ್ನುವುದರಿಂದಾಗಿ ತನಗೆ ಬಲ ಬರುತ್ತಿದೆ ಎನಿಸತೊಡ ಗಿತ್ತು. ಕೆಲವಿಧವಾದ ಹುಲ್ಲು ಈಗ್ಲೂ ಬಾಯಿಗೆ ರುಚಿಕೊಡುತ್ತಿರಲಿಲ್ಲ. ಆದರೆ ಅದರಿಂದ ಪ್ರಯೋಜನವಿದೆಯೆಂಬ ವಿಷಯ ತಿಳಿದಿತ್ತಾದುದರಿಂದ ಬಲವಂತದಿಂದ ಅದನ್ನು ತಿನ್ನುವುದನ್ನು ಅಭ್ಯಾಸಮಾಡಿಕೊಂಡ.

ಗಾಯಗಳು ಬೇಗ ಬೇಗ ವಾಸಿಯಾಗತೊಡಗಿದುವು. ಬೇಂಬಿ ಸ್ವಲ್ಪ ಹೆಚ್ಚುಕಡಿಮೆ ಪೂರ್ಣಾರೋಗ್ಯವಂತನಾದ. ಆದರೂ ಇನ್ನೂ ಆ ಹಳ್ಳವನ್ನು ಬಿಟ್ಟು ದೂರ ಹೋಗುವಷ್ಟು ಧೈರ್ಯ ಬಂದಿರಲ್ಲಿಲ್ಲ. ರಾತ್ರಿ ಹೊತ್ತು ಮಾತ್ರ ಸ್ವಲ್ಪವೇಳೆ ಹೊರಗೆ ತಿರುಗಾಡುತ್ತಿದ್ದ. ಹಗಲೆಲ್ಲಾ ಅಪಾಯ ರಹಿತವಾದ ಆ ಹಳ್ಳದಲ್ಲಿ ಹಾಯಾಗಿ ಮೈಮರೆತು ನಿದ್ರಿಸುತ್ತಿದ್ದ.

ನೋವು ಪೂರ್ತಿಯಾಗಿ ಕಡಿಮೆಯಾದಮೇಲೆ ನಿಧಾನವಾಗಿ ಆಲೋಚಿ ಸಿದಾಗ ತನಗುಂಟಾದ ಪ್ರಮಾದದ ಅರಿವಾಗಿ ಭಯದಿಂದ ಕಂಪಿಸಿದ.

ದೈಹಿಕವಾಗಿ ಅವನ ಆರೋಗ್ಯ ಸುಧಾರಿಸಿತ್ತು. ಆದರೆ ಮಾನಸಿಕ ದೃಢತೆ ಇನ್ನೂ ಸಾಧಿಸಿರಲಿಲ್ಲ. ಹಿಂದಿನ ಧೈರ್ಯ ಆತ್ಮವಿಶ್ವಾಸ ಬಂದಿರ ಲಿಲ್ಲ. ಆ ಕಾರಣದಿಂದಾಗಿಯೇ ಹಿಂದಿನಂತೆ ಹೊರಗಿನ ಪ್ರಪಂಚದಲ್ಲಿ ಕಾಲಿಟ್ಟು ಓಡಾಡಬೇಕೆನಿಸಿರಲಿಲ್ಲ.

ದಿನಗಳೂ ವಾರಗಳೂ ಕಳೆಯುತ್ತಿದ್ದುವು. ಆ ಹಳ್ಳದಲ್ಲಿ ಮುರಿದ ನೇರಳೆಯ ಕೆಳಗೆ ದಟ್ಟವಾದ ಎಲೆಗಳ ಸೂರಿನಡಿಯಲ್ಲಿ ಮಲಗಿ ಗತಜೀವನವನ್ನು ಕುರಿತು ಜ್ಞಾಪಿಸಿಕೊಳ್ಳುತ್ತಿದ್ದ. ಭಯ, ನಾಚಿಕೆ ಆಶ್ಚರ್ಯಗಳು ಅವನನ್ನು ಮುತ್ತಿಕೊಳ್ಳುತ್ತಿದ್ದುವು. ನಾಯಕನ ಬಗ್ಗೆ ಕೃತಜ್ಞತಾ ಭಾವನೆಯಿಂದ ಅವನ ಮನಸ್ಸು ತುಂಬಿ ಬಂದಿತು. ಸಾವಿನಂಚಿನಿಂದ ಬದುಕಿ ಬಂದುದಕ್ಕೆ ಎಷ್ಟೋ ಸಂತೋಷವಾಗಿತ್ತು. ಹೀಗೇ ನಾನಾವಿಧವಾದ ಭಾವನೆಗಳ ತಾಕಲಾಟಕ್ಕೆ ಸಿಕ್ಕಿ ತೊಳಲಿದ, ಬೇಂಬಿ.

ಮೊದ ಮೊದಲು ನಾಯಕ ರಾತ್ರಿ ಹಗಲೂ ಬೇಂಬಿಯ ಬಳಿಯೇ ಕುಳಿತಿರುತ್ತಿದ್ದ. ಕೆಲವು ದಿನಗಳ ನಂತರ ಆಗಾಗ ಬೇಂಬಿಯೊಬ್ಬನನ್ನೇ ಬಿಟ್ಟು ತಾನು ಸ್ವಲ್ಪ ಹೊತ್ತು ಹೊರಗೆ ಹೋಗಿ ಬರುತ್ತಿದ್ದ. ಒಂಟಿಯಾಗಿ ಮಲಗಿ ಆಲೋಚಿಸುವುದು ಬೇಂಬಿಗೆ ಒಳಿತನ್ನುಂಟುಮಾಡುತ್ತದೆಯೆಂದು ನಾಯಕನ ಉದ್ದೇಶ, ಹೊರಕ್ಕೆ ಹೋದರೂ ಆ ಹಳ್ಳದ ಸುತ್ತಮುತ್ತಲೂ ಓಡಾಡಿ ಬರುತ್ತಿದ್ದ.

ಒಂದು ದಿನ ಸಾಯಂಕಾಲ ಗುಡುಗು ಮಿಂಚಿನೊಂದಿಗೆ ಭೋರೆಂದು ಮಳೆ ಸುರಿಯಿತು. ವಾತಾವರಣದಲ್ಲಿದ್ದ ಧೂಳೆಲ್ಲಾ ಅಡಗಿ ಪರಿಶುಭ್ರಗೊಂಡಿತು. ಗಿಡಗಳ ಕೊಂಬೆಗಳ ಮೇಲೆ ಗುಬ್ಬಚ್ಚಿಗಳೂ ಗೀಜಗಗಳೂ ಕಿಚ ಕಿಚ ಎಂದುವು. ಪೊದೆ, ಪೊದರುಗಳಲ್ಲಿ ಕಾಡುಕೋಳಿಗಳು ಓಡಾಡಲು ಪ್ರಾರಂಭಿಸಿದುವು. ಮರಕುಟುಕ ಸಂತೋಷದಿಂದ 'ಹ ಹ್ಹ ಹ್ಹಾ' ಎನ್ನುತ್ತಿತ್ತು. ಪಾರಿವಾಳಗಳು ಕುವಕುವನೆ ಸದ್ದು ಮಾಡಿದುವು.

ಬೇಂಬಿ ಹಳ್ಳದಿಂದ ಹೊರಬಂದ ಹೊರಗಿನ ವಾತಾವರಣ ಆಹ್ಲಾದಕರವಾಗಿತ್ತು. ಹತ್ತಿರದಲ್ಲಿಯೇ ಮುದಿನಾಯಕ ಇವನಿಗಾಗಿ ಇದಿರು ನೋಡುತ್ತಿದ್ದ. ಇಬ್ಬರೂ ಮೌನವಾಗಿ ಪಕ್ಕ ಪಕ್ಕದಲ್ಲಿ ನಡೆಯುತ್ತಾ ಮುಂದೆ ಮುಂದೆ ಸಾಗಿದರು.

ಶಿಶಿರ ಋತುವಿನ ಒಂದು ರಾತ್ರಿ ಕದಂಬವೃಕ್ಷದ ಹಣ್ಣೆಲೆಗಳ ಮಧ್ಯೆ ಕುಳಿತು ಗೂಬೆ ಭಯಂಕರವಾಗಿ ಕೂಗಿತು. ಸ್ವಲ್ಪ ಹೊತ್ತು ಸುಮ್ಮನಿದ್ದು

ಮತ್ತೆ ಕೂಗಿತು.

ದೂರದಿಂದಲೇ ಗೂಬೆಯ ಇರುವಿಕೆಯನ್ನು ಕಂಡುಹಿಡಿದ ಬೇಂಬಿ ಸುಮ್ಮನಿದ್ದ. ಅದು ಗಿಡದ ಕೆಳಗಿನ ಕೊಂಬೆಯ ಮೇಲಕ್ಕೆ ಇಳಿದು ಬಂದು ಇನ್ನೂ ಗಟ್ಟಿಯಾಗಿ ಕೂಗಿತು. ಸ್ವಲ್ಪ ಹೊತ್ತು ಎದುರು ನೋಡಿತು. ಈ ಸಲ ಸಹ ಬೇಂಬಿ ಬೆದರಲಿಲ್ಲ. ಇನ್ನು ಸುಮ್ಮನಿರಲಾಗಲಿಲ್ಲ ಗೂಬೆಗೆ.

"ನೀವು ಹೆದರಲಿಲ್ಲವೇನು?" ಎಂದು ಕೇಳಿತು.

"ಕೊಂಚಮಟ್ಟಿಗೆ...." ಎಂದ ಬೇಂಬಿ ಮೆಲ್ಲನೆ.

ಗೂಬೆ ಅಸಂತೃಪ್ತಿಯಿಂದ ತನ್ನಲ್ಲಿ ತಾನೇ ಗೊಣಗಿಕೊಂಡಿತು.

"ಇಷ್ಟು ಜೋರಾಗಿ ಕೂಗ್ತಿದೀನಿ. 'ಕೊಂಚಮಟ್ಟಿಗೆ' ಅಂತೀರಲ್ಲಾ. ಇದಕ್ಕೆ ಮುಂಚೆ ನನ್ನ ಕೂಗು ಕೇಳಿದರೆ ಹೆದರಿ ಕಂಗಾಲಾಗುತ್ತಿದ್ದರಿ ನೀವು. ಈಗ ಅಂತಹ ಭಯ ಏಕಿಲ್ಲ ಅಂತೀನಿ?"

ಗೂಬೆಗೆ ವಯಸ್ಸಾಗುತ್ತಿದ್ದಂತೆ ತನ್ನನ್ನು ತಾನು ಹೊಗಳಿಕೊಳ್ಳುವ ಅಭ್ಯಾಸವೂ ಹೆಚ್ಚಾಗಿತ್ತು.

"ಕೊಂಚಮಟ್ಟಿಗೆ ಅಂತೆ ಕೊಂಚಮಟ್ಟಿಗೆ..." ಎಂದು ಸಿಡಿಮಿಡಿ ಗುಟ್ಟಿತು.

"ಇದಕ್ಕೆ ಮುಂಚೆ ಸಹ ನಿಮ್ಮ ಕೂಗನ್ನು ಕೇಳಿ ನಾನೆಂದೂ ಭಯ ಪಡಲಿಲ್ಲ. ನಿಮಗೆ ಸಂತೋಷವಾಗಲಿ ಎಂದು ಹೆದರಿದಂತೆ ನಟಿಸುತ್ತಿದ್ದೆ" ಎಂದು ನಿಜ ಹೇಳಿ ಬಿಡಬೇಕೆನಿಸಿತು, ಬೇಂಬಿಗೆ ಆ ಮಾತು ತುದಿನಾಲಗೆಯ ವರೆಗೂ ಬಂದಿತು ಸಹ. ಆದರೆ ಅದನ್ನು ಮನಸ್ಸಿನಲ್ಲಿಯೇ ಅಡಗಿಸಿಕೊಂಡ ಅದರ ಕೋಪ, ಮೂತಿ ಕಿರುವಿಸುವಿಕೆಯನ್ನು ನೋಡುತ್ತಿದ್ದಂತೆ ಮುದಿ ಗೂಬೆಯ ಬಗ್ಗೆ ಅವನಿಗೆ ಕರುಣೆಯುಂಟಾಯಿತು.

ಆದ್ದರಿಂದ ಬೇಂಬಿ ಗೂಬೆಯೊಂದಿಗೆ,

"ನಿಜ ಹೇಳಬೇಕೂಂದರೆ ಸರಿಯಾಗಿ ನೀವು ಕೂಗಿದ ಸಮಯದಲ್ಲಿ ನಾನು ನಿಮ್ಮನ್ನು ಕುರಿತೇ ಆಲೋಚಿಸ್ತಾ ಇದ್ದೆ" ಎಂದ.

ಗೂಬೆಗೆ ಆನಂದವಾಯಿತು.

"ನನ್ನನ್ನು ಕುರಿತೇ ? ಏನೆಂದು ಯೋಚಿಸುತ್ತಾ ಇದ್ದಿರಿ?"

"ಹಾಂ ನಿಮ್ಮನ್ನು ಕುರಿತೇ ? ಸರಿಯಾಗಿ ನೀವು ಕೂಗಿದಾಗಲೇ, ಇಲ್ಲಿದ್ದರೆ ನಿಮ್ಮ ಕೂಗು ಕೇಳಿದ ತಕ್ಷಣ ಹೆದರಿ–ಬೆದರಿ ಕಂಗಾಲಾಗುತ್ತಿರಲಿಲ್ಲವೇ ?"

"ನಿಜಾ ಹೇಳ್ತಿದ್ದೀರಾ?"

"ಹೌದು" ಎಂದರೆ ಬೇಂಬಿಗಾದ ನಷ್ಟವೇನಿಲ್ಲ ಮುದಿಗೂಬೆ ಸಂತೋಷಪಡಲಿ ಎನ್ನಿಸಿತವನಿಗೆ.

"ಮತ್ತೆ ! ಏನಂದುಕೊಂಡಿರಿ, ಹಠಾತ್ತಾಗಿ ನಿಮ್ಮ ಕೂಗು ಕೇಳಿದರೆ ಸಾಕು, ನನ್ನ ಕಾಲುಗಳು ಮುದುಡಿಕೊಳ್ಳುತ್ತಿದ್ದುವು."

ಗೂಬೆ ರೆಕ್ಕೆಗಳನ್ನು ಒದರಿ ಗುಂಡಾಗಿ ಚೆಂಡಿನಂತೆ ಉಬ್ಬಿತು. ತುಂಬಾ ಸಂತೋಷವಾಯಿತು ಅದಕ್ಕೆ.

"ನೀವು ತುಂಬಾ ಒಳ್ಳೆಯವರು. ನನ್ನನ್ನು ಕುರಿತು ನಿಮಗಿಷ್ಟು ಒಳ್ಳೆಯ ಅಭಿಪ್ರಾಯ ಇದೆ ಅಂದರೆ ನಿಜವಾಗಿಯೂ ನೀವು ತುಂಬಾ ಒಳ್ಳೆಯವರೇ. ಅಂದಹಾಗೆ ನಾವು ಭೇಟಿಯಾಗಿ ತುಂಬಾ ದಿನಗಳಾದುವಲ್ಲವೇ?"

"ಅಹುದು, ಬಹಳ ದಿನವಾಯಿತು"

"ಏಕೆ ? ನೀವೀಗ ಆ ಹಳೆಯ ದಾರಿಗಳಲ್ಲಿ ಓಡಾಡುತ್ತಿಲ್ಲ.

"ಊಹೂಂ. ಇನ್ನು ಆ ದಾರಿಯಲ್ಲಿ ಓಡಾಡೋಲ್ಲ ನಾನು."

"ಒಳ್ಳೆಯದಾಯಿತು ಬಿಡಿ, ನಾನೂ ಅಷ್ಟೆ. ಬಾವಿಯಲ್ಲಿನ ಕಪ್ಪೆಯಂತೆ ಒಂದೇ ಕಡೆ ಏಕಿರಬೇಕು ಹೇಳಿ, ಈ ವಿಶಾಲ ಪ್ರಪಂಚವನ್ನು ನಾಲ್ಕು ಕಡೆ ನೋಡೋಣ ಅಂದುಕೊತಾ ಇದೀನಿ."

ಒಂದು ಹುಡುಗು ಗೂಬೆ ತನ್ನನ್ನು ತನ್ನ ಗೂಡಿನಿಂದ ಓಡಿಸಿತೆಂಬ ವಿಷಯವನ್ನು ಅದು ಬೇಂಬಿಗೆ ಹೇಳದೆ ಮರೆಮಾಚಿತ್ತು.

"ಸದಾ ಒಂದೇ ಕಡೆ ಕುಳಿತು ಕೊಳ್ಳಬಾರದು" ಎಂದು ಉತ್ತರಕ್ಕಾಗಿ ಕಾದು ನೋಡಿತು ಗೂಬೆ.

ಆದರೆ ಅಷ್ಟು ಹೊತ್ತಿಗಾಗಲೇ ಬೇಂಬಿ ಅಲ್ಲಿಂದ ಹೊರಟು ಹೋಗಿದ್ದ. ಒಂದಿಷ್ಟೂ ಸದ್ದಾಗದಂತೆ ಹಠಾತ್ತಾಗಿ ಕಣ್ಮರೆಯಾಗುವ ಜಾಣ್ಮೆಯನ್ನು ಮುದಿನಾಯಕನಿಂದ ಮೈಗೂಡಿಸಿಕೊಂಡಿದ್ದ ಬೇಂಬಿ

"ಆಹಾ ಎಷ್ಟು ಗರ್ವ ಇವನಿಗೆ" ಅಂದುಕೊಂಡಿತು, ಗೂಬೆ ಅಲ್ಲಿಲ್ಲದ ಬೇಂಬಿಯನ್ನು ಕುರಿತು. ರೆಕ್ಕೆ ಒದರಿ ಎದೆಯ ಬಿಳಿಯ ಪುಕ್ಕಗಳನ್ನು ಮೂಗಿನಿಂದ ಸವರಿಕೊಳ್ಳುತ್ತಾ ತತ್ವ ಚಿಂತನೆಯಲ್ಲಿ ಮುಳುಗಿತು.

"ಈ ದೊಡ್ಡವರ ಜೊತೆ ಸ್ನೇಹ ಮಾಡುವುದೇ ಕಷ್ಟ. ತಮಗೆ ಬೇಕಾದಾಗ ಎಲ್ಲಿಲ್ಲದ ಪ್ರೀತಿ ತೋರಿಸ್ತಾರೆ. ತಮ್ಮ ಕೆಲಸವಾದ ಮೇಲೆ ನಮ್ಮನ್ನು ಕಂಡರೆ ತಾತ್ಸಾರ, ಕುರುಡು ಕವಡೆಯಷ್ಟು ಬೆಲೆ ಸಹ ಕೊಡೊಲ್ಲ. ಕಾಣ್ತಾನೇ ಇದೆಯಲ್ಲಾ..."

ಮಾತು ಪೂರ್ತಿಯಾಗುವ ಮೊದಲೇ ಗೂಬೆ ರಪ್ಪೆಂದು ನೆಲದ ಮೇಲೆ ಬಿತ್ತು. ಅಲ್ಲಿ ಎಲೆಗಳ ಮಧ್ಯದಲ್ಲೊಂದು ಇಲಿ ಕಾಣಿಸಿತು. ಕೆಳಗೆ ಬೀಳುತ್ತಲೇ ಉಗುರಿನಿಂದ ಒತ್ತಿ ಹಿಡಿಯಿತು. ಒಂದಿಷ್ಟೂ ದಯಾ–ದಾಕ್ಷಿಣ್ಯಗಳಿಲ್ಲದೆ ಚೂಪಾಗಿದ್ದ ತನ್ನ ಮೂಗಿನಿಂದ ಆ ಇಲಿಯನ್ನು ಚುಚ್ಚಿ–ಚುಚ್ಚಿ ಸಾಯಿಸಿತು. ಅಷ್ಟಾಗಿ ಹಸಿವಿಲ್ಲದಿದ್ದರೂ ಗಬುಕ್– ಗಬುಕ್ ಎಂದು ಇಷ್ಟಿಷ್ಟು ಮಾಂಸದ ಮುದ್ದೆಗಳನ್ನು ನುಂಗಿ ಊಟ ಮುಗಿಸಿತು.

"ಅಲ್ಲಾ, ಈ ಬೇಂಬಿಗಾನಿಗೂ, ನನಗೂ ಏನು ಸಂಬಂಧ? ಇವನಲ್ಲದಿದ್ದರೆ ಇವನ ತಾತ ಮತ್ತೊಬ್ಬ ! ಈ ಹಾಳು ಜಿಂಕೆ ಜಾತೀನೇ ಅಂಥಾದ್ದು...."

ಗೂಬೆ ಕಿವಿ ತೂತಾಗುವಂತೆ ಕಿರುಚುತ್ತಾ ಅಲ್ಲಿಂದ ಹಾರಿ ಹೋಯ್ತು. ಗಿಡದ ಪೊಟರೆಯೊಂದರಲ್ಲಿ ನಿದ್ದೆ ಮಾಡುತ್ತಿದ್ದ ಜೋಡಿ ಗುಬ್ಬಚ್ಚಿಗಳು ಆ ಕೂಗಿಗೆ ಬೆದರಿ, ಎಚ್ಚೆತ್ತು, ಗಾಬರಿಯಿಂದ ಎದ್ದು ರೆಕ್ಕೆ ಬಡಿಯುತ್ತಾ ಅಲ್ಲಿಂದ ಹಾರಿ ಹೋದುವು. ಕೆಲವು ದಿನ ವರಸೆಯಾಗಿ ಶಿಶಿರ ಋತುಪವನಗಳು ಎಡೆ ಬಿಡದೆ ಬೀಸಿದುವು. ಗಿಡಗಳಲ್ಲಿ ಒಂದೇ ಒಂದು ಎಲೆಯನ್ನೂ ಬಿಡದೆ, ಎಲ್ಲವನ್ನೂ ಹಾರಿಸಿಕೊಂಡು ಹೋಯಿತು. ಕಾಡಿನ ಒಂದು

ಮೂಲೆಯಿಂದ ಮತ್ತೊಂದು ಮೂಲೆಯವರೆಗೂ ಬೋಳು-ಬೋಳಾಗಿ ಕಾಣುತ್ತಿತ್ತು.

ಒಂದು ಬೆಳಗಿನ ಜಾವ ಬೇಂಬಿ ಇಳಿಜಾರಾಗಿದ್ದ ಕಡೆ ಹೊರಟ. ಮುದಿ ನಾಯಕ, ಬೇಂಬಿ ಇಬ್ಬರೂ ಬಹಳ ದಿನ ವಿಶ್ರಾಂತಿ ತೆಗೆದುಕೊಂಡ ಪ್ರದೇಶ ಅದು. ಹಾಗೆ ಹೋಗುತ್ತಿದ್ದಾಗ ಯಾರದೋ ಕೀರಲು ಕಂಠ ಕೇಳಿಸಿದಂತಾಗಿ, ಅಲ್ಲಿಯೇ ನಿಂತ.

ಮಿಂಚಿನಂತೆ ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಮೇಲಿನ ಕೊಂಬೆಯಿಂದ ಕೆಳಕೊಂಬೆಗೆ, ಅಲ್ಲಿಂದ ನೆಲದ ಮೇಲಕ್ಕೆ ಧುಮುಕಿ ಬೇಂಬಿಯ ಮುಂದೆ ನಿಂತಿತು ಅಳಿಲು.

"ನೀವೇ ಹೌದೋ ಅಲ್ಲವೋ ಅಂತ ನೋಡ್ತಿದೀನಿ ನೀವೆ ಹಾಗಾದರೆ. ದೂರದಿಂದ ನೋಡಿದೆ, ಒಂದು ಸಲ ಮಿಂಚಿನ ಹಾಗೆ ಥಳುಕ್ ಅಂದ ಹಾಗಾಯಿತು. ನೀವೇ ಅಂತ ಗೊತ್ತಾಗಿ ಹೋಯ್ತು. ಆದರೆ ನೀವು ಬರ್ತಿದೀರಿ ಅಂತ ನಂಬೋಕೇ ಆಗಲಿಲ್ಲ, ನೋಡಿ" ಎಂದಿತು ಅಳಿಲು. ತನ್ನ ಓಟಕ್ಕಿಂತ ವೇಗವಾಗಿ ಮಾತನಾಡುತ್ತಾ,

"ತಾವು ಇಲ್ಲಿಗೆ ಯಾವಾಗ ದಯಮಾಡಿದಿರಿ?" ಎಂದ ಬೇಂಬಿ. ಉಲ್ಲಾಸದಿಂದ, ಹುರುಪಿನಿಂದ ಮಾತನಾಡುತ್ತಿದ್ದ ಅಳಿಲಿನ ಮುಖ ಸಪ್ಪಗಾಯಿತು. ಚಿಂತೆಯಿಂದ ಹೇಳಿತು.

"ಹಳೆಯ ಬಸರಿ ಮರ ಇನ್ನಿಲ್ಲ. ನಮ್ಮ ಮರ, ನಮ್ಮ ಮನೆ, ನಮ್ಮ ಸರ್ವಸ್ವವೂ ಹೋಯ್ತು ನಮ್ಮ ಮರಗಳನ್ನು ನಾಶಮಾಡಿ ಬಿಟ್ಟ!" ಎಂದಿತು ಅಳಿಲು, ಅವಳ ಕಣ್ಣನಲ್ಲಿ ನೀರಾಡಿತು.

ಹಳೆಯ ಬಸರಿಮರ! ಬೇಂಬಿಗೂ ಪ್ರೀತಿ ಪಾತ್ರವಾದದ್ದೇ. ಅವನಿಗೂ ತುಂಬಾ ದುಃಖವಾಯಿತು. ಅಳಿಲು ಅಂದಿನ ವಿಶೇಷಗಳನ್ನೆಲ್ಲಾ ಹೇಳುತ್ತಾ ಬಂತು.

"ಆಕಸ್ಮಾತ್ತಾಗಿ ನಡೆದು ಹೋಯಿತು ಅದೆಲ್ಲಾ. ಅದರ ಮೇಲೆ ಮರಿಗಳೊಡನೆ ವಾಸಿಸುತ್ತಿದ್ದ ನಾವೆಲ್ಲಾ ಪ್ರಾಣ ಉಳಿದರೆ ಸಾಕೆಂದು ದಿಕ್ಕಾ

ಪಾಲಾಗಿ ಓಡಿದವು. ಅವನು ಥಳ–ಥಳನೆ ಹೊಳೆಯುತ್ತಿದ್ದ ಒಂದು ದೊಡ್ಡ ಹಲ್ಲಿನಿಂದ ಬಸರಿಮರವನ್ನು ಕಡಿದುಬಿಟ್ಟ. ನಾವು ದೂರದಿಂದ ನೋಡುತ್ತಿದ್ದೆವು. ಪಾಪ! ಬಸರಿಮರ ತುಂಬಾ ಗೋಳಾಡಿತು. ಎಷ್ಟು ದೊಡ್ಡ ಗಾಯಗಳು ಅಂತೀರಿ! ಸುಸ್ತಾಗಿ ಬಿಡ್ತು ಅದಕ್ಕೆ. ಆದರೇನಂತೆ ಅವನ ಹಲ್ಲಿಗೆ ದಯಾದಾಕ್ಷಿಣ್ಯ ಅನ್ನೋದೇನಾದರೂ ಇದ್ದರೆ ತಾನೇ? ಕಚ್ಚಿದ್ದೇ–ಕಚ್ಚಿದ್ದು. ಕೊನೆಗೆ ಪಾಪ, ಬಸರಿ ಮರ ಥಳ ಥಳ ಎಂದು ಕಿರುಚುತ್ತಾ ಮೈದಾನದಲ್ಲಿ ಕುಸಿದು ಬಿತ್ತು. ನಾವೆಲ್ಲಾ ದೂರದಿಂದ ನೋಡುತ್ತಲೇ ಇದ್ದೆವು.

"ನಮಗೂ ದುಃಖ ಉಕ್ಕಿ ಬಂದು ಬಿಕ್ಕಿ–ಬಿಕ್ಕಿ ಅತ್ತೆವು."

ಬೇಂಬಿ ಮೌನವಾಗಿ ಕೇಳಿದ.

ಅಳಿಲು ನಿಟ್ಟುಸಿರು ಬಿಟ್ಟಿತು.

"ಅವನ ಕೈಲಾಗದ್ದೇನೂ ಇಲ್ಲ ಅನ್ನೋ ಮಾತು ನಿಜ. ಎಲ್ಲವನ್ನೂ ತನಗಿಷ್ಟ ಬಂದಂತೆ ಮಾಡಬಲ್ಲ ಸಮರ್ಥ ಅವನು."

ಬೇಂಬಿ ಉತ್ತರ ಕೊಡುತ್ತಾನೇನೋ ಎಂದು ಕಣ್ಣು ಅಗಲವಾಗಿ ಬಿಟ್ಟು ನೋಡುತ್ತಿತ್ತು ಅಳಿಲು. ಆದರೆ ಬೇಂಬಿ ಒಂದು ಮಾತನ್ನೂ ಆಡದೆ ಮೌನವಾಗಿದ್ದು ಬಿಟ್ಟ.

"ಅದೋ. ಹಾಗಾಯಿತು ನೋಡಿ, ನಮ್ಮ ಮರದ ಅವಸ್ಥೆ. ಎಲ್ಲರೂ ತಲಾ ಒಂದೊಂದು ಮೂಲೆಗೆ ವಲಸೆ ಹೋದರು. ನಾನೀಕಡೆ ಬಂದುಬಿಟ್ಟೆ. ಮತ್ತೆ ಬೇಕು ಅಂದರೆ ಮಾತ್ರ ಅಂತಹ ಮರ ಸಿಕ್ಕೀತೇ?"

"ಹಳೆಯ ಬಸರಿಮರ! ಯಾವ ಕಾಲದ್ದು! ಎಷ್ಟು ನೆನಪುಗಳು, ಎಷ್ಟು ಚರಿತ್ರೆ ಅದಕ್ಕೆ! ಎಂದು ತನ್ನಲ್ಲಿ ತಾನೇ ಗೊಣಗಿಕೊಂಡ ಬೇಂಬಿ.

"ಹಮ್ಮಯ್ಯ. ಇಷ್ಟು ಹೊತ್ತಿಗೆ ಒಂದು ಮಾತು ಬಂತು ನಿಮ್ಮ ಬಾಯಲ್ಲಿ. ಅಂದರೆ ನೀವು ಬೇಂಬಿನೇ ಅಂತಾಯಿತು" ಎಂದು ಸಂತೋಷದಿಂದ ಅತ್ತಿಂದಿತ್ತ ಸರಸರನೆ ಏರಿ, ಇಳಿಯಿತು ಅಳಿಲು.

"ಎಲ್ಲರೂ ಅಂದುಕೋತಾ ಇರೋದೇನೂಂದ್ರೆ, ತಾವು ಇನ್ನಿಲ್ಲ ಅಂತ. ಆಗಾಗ ತಾವು ಬದುಕಿಯೇ ಇದೀರಿ ಅನ್ನೊ ಮಾತೂ ಕೇಳಿಸ್ತಾ ಇತ್ತು. ಯಾರೋ ಎಲ್ಲಿಯೋ ನಿಮ್ಮನ್ನು ನೋಡಿದಿವಿ ಅನ್ನೋರು. ಅದೆಲ್ಲಾ ಬರೀ ಪುಕಾರೋ, ನಿಜಾನೋ ಹೇಗೆ ಗೊತ್ತಾಗುತ್ತೆ! ಎಷ್ಟು ದಿನಗಳಾದರೂ ನೀವು ನಿಮ್ಮವರ ಬಳಿಗೆ ಬರಲೇ ಇಲ್ಲವಲ್ಲಾ, ಅದಕ್ಕೇ ಹಾಗಂದುಕೋತಾರ, ಅದೂ ಸರೀನೇ."

ಬೇಂಬಿ ಏನಾದರೂ ಮಾತನಾಡುತಾನೇನೋ ಎಂದು ಬಹಳ ಹೊತ್ತು ಎದುರು ನೋಡಿತು ಅಖಿಲಮ್ಮ, ಆದರೆ ಅವನೇನೂ ಮಾತನಾಡಲಿಲ್ಲ. ಫಲೀನಾಳನ್ನು ಕುರಿತು, ಏಣ ಚಿಕ್ಕಮ್ಮ. ರೋನೋ–ಕಾರೋ ಎಲ್ಲರನ್ನೂ ಕುರಿತು ತಿಳಿದುಕೊಳ್ಳಬೇಕೆನಿಸಿತಾದರೂ ಅವನೇನೂ ಕೇಳಲಿಲ್ಲ.

ಅಖಿಲು ಸ್ವಲ್ಪ ಹೊತ್ತು ಅವನ ಕಡೆ ನೋಡುತ್ತಾ ಸುಮ್ಮನೆ ಕುಳಿತು ಬಿಟ್ಟಿತು. ಅನಂತರ ಮತ್ತೆ ತಾನೇ ಮಾತನಾಡಿತು.

ಆಹಾ, ನಿಮ್ಮ ಕಿರೀಟ ಎಷ್ಟು ಸೊಗಸಾಗಿದೆ ಎಷ್ಟು ವರ್ಣಿಸಿದರೂ ಸಾಲದು. ಇಂತಹ ಸುಂದರವಾದ ಕಿರೀಟ ಮುಂದಿನಾಯಕರಿಗೆ ಹೊರತು ಬೇರಾರಿಗೂ ಇಲ್ಲವೇ ಇಲ್ಲ."

ಇದಕ್ಕೆ ಮುಂಚಿನ ದಿನಗಳಲ್ಲಾಗಿದ್ದರೆ ಇಂತಹ ಹೊಗಳಿಕೆ ಬೇಂಬಿಗೆ ತುಂಬಾ ಮುದಕೊಡುತ್ತಿತ್ತು ಆದರೆ ಈಗ "ಓಹೋ. ಹಾಗೇನು ? ಇರ ಬಹುದು" ಎಂದು ಮಾತ್ರ ಕೇಳಿ ಸುಮ್ಮನಾದ.

ಅಖಿಲಮ್ಮ ತನ್ನ ಬಿಳಿಯ ಎದೆಯ ಮೇಲೆ ಕೈಗಳಿಂದ ಒತ್ತಿಕೊಂಡಿತು.

"ಅರೆ, ನಿಮ್ಮ ಕೂದಲು ಕೊಂಚ–ಕೊಂಚ ನೆರೆಯುತ್ತಿದೆಯಲ್ಲಾ!"

ಬೇಂಬಿ ಇದಕ್ಕೂ ಉತ್ತರ ಕೊಡಲಿಲ್ಲ. ಮೌನವಾಗಿ ಮುಂದಕ್ಕೆ ಸಾಗಿ ಹೋದ. ಅಖಿಲಮ್ಮ ಅಲ್ಲಿಯೇ ಕುಳಿತು ಹೊರಟು ಹೋಗುತ್ತಿದ್ದ ಬೇಂಬಿಯನ್ನುದ್ದೇಶಿಸಿ ಕೀರಲು ಕಂಠದಲ್ಲಿ ಗಟ್ಟಿಯಾಗಿ ಕೂಗಿ ಹೇಳಿತು.

"ಇನ್ನು ಬರಲೆ ? ಈ ದಿನ ನಿಮ್ಮನ್ನು ನೋಡಿದ್ದರಿಂದ ಹಬ್ಬ ಮಾಡಿ ಕೊಂಡಷ್ಟು ಸಂತೋಷವಾಗಿದೆ ನನಗೆ. ನಮಗಿಬ್ಬರಿಗೂ ತಿಳಿದವರು ಯಾರಾ

ದರೂ ಸಿಕ್ಕಿದರೆ ನಿಮ್ಮನ್ನು ನೋಡಿದೆ ಅಂತಲೂ, ನೀವು ಚೆನ್ನಾಗಿದೀರಿ ಅಂತಲೂ ಹೇಳ್ತೀನಿ. ಅವರಿಗೆಲ್ಲಾ ತುಂಬಾ ಸಂತೋಷ ಆಗುತ್ತೆ."

ಆ ಮಾತುಗಳೆಲ್ಲಾ ಬೇಂಬಿಗೆ ಕೇಳಿಸಿದುವು. ಏನನ್ನೋ ಕೇಳಬೇಕೆಂಬ ಬಯಕೆ ಅವನ ಮನಸ್ಸಿನಲ್ಲಿ ಹುಟ್ಟಿದ್ದು ಕಾಣಿಸಿತು. ಆದರೆ ಅವನನ್ನೇನೂ ಕೇಳಲಿಲ್ಲ. ಬಾಲ್ಯದಲ್ಲಿಯೇ ಏಕಾಂಗಿಯಾಗಿರುವುದು ಹೆಚ್ಚಿನ ಗೌರವ ಎಂಬ ವಿಷಯವನ್ನು ತಿಳಿದುಕೊಂಡಿದ್ದ ಎಂದೋ ಒಂದುದಿನ ಅಮ್ಮನನ್ನು ಬಿಟ್ಟಿರ ಲಾರದೆ ಕಾಡಿನಲ್ಲಿ ಓಡಾಡುತ್ತಾ ಆಕೆಯನ್ನು ಕೂಗಿ ಕರೆದಾಗ, ಮುದಿನಾಯಕ ಕಾಣಿಸಿಕೊಂಡು ಹೇಳಿದ ಮಾತುಗಳು ಇಂದಿಗೂ ಕಿವಿಯಲ್ಲಿ ಗುಂಯ್ಗುಡು ತ್ತಿತ್ತು.

"ಅಮ್ಮನಿಲ್ಲದೆ ಒಬ್ಬನೇ ಇರಲಾರೆಯಾ? ನಾಚಿಕೆ ಆಗೋಲ್ಲವೇನು?"

ಆ ಮಾತುಗಳನ್ನು ನೆನಪಿಸಿಕೊಳುತ್ತಾ ಬೇಂಬಿ ಮುಂದಕ್ಕೆ ಹೆಜ್ಜೆ ಹಾಕಿದ.

ಕೆಳಗೆ ಬಿದ್ದ ಮಂಜಿನಿಂದಾಗಿ ನೆಲವೆಲ್ಲ ಅರಳೆ ಹರಡಿದಂತೆ ಕಾಣಿಸು ತ್ತಿತ್ತು. ಆಗಾಗ ಅಲ್ಲೊಂದು ಇಲ್ಲೊಂದು ಕಾಗೆ ಕಾಣಿಸುತ್ತಿತ್ತು. ಮೈನಾ ಕಳವಳದಿಂದ ಕಿರಿಚುತ್ತಿತ್ತು. ಗುಬ್ಬಚ್ಚಿಗಳು ಭೀತಿಯಿಂದ ಕಿಚಕಿಚ ಎನ್ನು ತ್ತಿದ್ದುವು.

ಉದಯ ಸಂಧ್ಯೆಯಲ್ಲಿ ಕಾಡಿನ ಪ್ರಶಾಂತ ವಾತಾವರಣವನ್ನು ಭಗ್ನ ಗೊಳಿಸುತ್ತಾ ನಾಯಿಯ ಕಿರುಚಾಟ ಕೇಳಿಸಿತು. ಅತಿ ಭಯಂಕರವಾಗಿ, ಹುಚ್ಚು ಹಿಡಿಸುವಂತೆ ಕೂಗುತ್ತಿತ್ತು ಅದು. ಕ್ರೌರ್ಯಕ್ಕೆ ಹೆಸರಾದ ಕೂಗದು. ಆ ಕೂಗನ್ನು ಗಾಳಿಯ ತೆರೆಯೊಂದು ಗಿಡಗಳ ಮೂಲಕ ಹೊತ್ತು ತಂದಿತ್ತು ಮುರಿದ ನೇರಳೆ ಮರದ ಕೆಳಗಿನ ಗುಂಡಿಯಲ್ಲಿ ಬೇಂಬಿ ಮಲಗಿದ್ದ. ತಲೆಯೆತ್ತಿ ಪಕ್ಕದಲ್ಲಿದ್ದ ಮುದಿನಾಯಕನ ಕಡೆ ನೋಡಿದ.

"ನಮಗೇನೂ ಹೆದರಿಕೆಯಿಲ್ಲಬಿಡು" ಎಂದ ಆತ.

ಅವರು ವಾಸವಾಗಿದ್ದ ಆ ಗುಂಡಿಯನ್ನು ನೇರಳೆಯ ಕೊಂಬೆಗಳು ದಟ್ಟವಾಗಿ ಮುಚ್ಚಿದ್ದುವು, ಚಳಿಗಾಳಿ ಒಳಕ್ಕೆ ಹೋಗದಂತೆ ಮೇಲೆ ಮಂಜು

ಗಡ್ಡೆಗಳು ಗುಡ್ಡೆ ಗುಡ್ಡೆಯಾಗಿ ಬಿದ್ದಿದ್ದುವು, ಎಲೆಗೆಳೆಲ್ಲಾ ಉದುರಿಹೋಗಿದ್ದರೂ ಎಳಚಿಯ ಕೊಂಬೆಗಳೂ. ಸೀಮೆಹುಲ್ಲಸೆಯ ಬೊಡ್ಡೆಗಳೂ ಬೇರೆಯವರ ಕಣ್ಣಿಗೆ ಬೀಳದಂತೆ ಅವರನ್ನು ಕಾಪಾಡುತ್ತಿದ್ದುವು.

ನಾಯಿಯ ಕೂಗು ಹತ್ತಿರವಾಗುತ್ತಿತ್ತು. ಅದರ ಕೂಗಿನಿಂದಲೇ ಅದೊಂದು ಪುಟ್ಟ ನಾಯಿ ಎಂದು ಮುದಿನಾಯಕನಿಗೆ ಅರ್ಥವಾಗಿತ್ತು.

ಸ್ವಲ್ಪ ಹೊತ್ತಿನ ಅನಂತರ ನಾಯಿಯ ಕೂಗಿನೊಂದಿಗೆ ಮತ್ತೊಂದು ಕಂಠ ಕೇಳಲಾರಂಭಿಸಿತು—ಕ್ಷೀಣವಾಗಿ, ಭೀತಿಯಿಂದ, ನರಳುತ್ತಿರುವಂತೆ ಒಂದುಕ್ಷಣ ಬಿಟ್ಟು ಒಂದುಸಲ ಕೇಳಿಬರುತ್ತಿತ್ತು.

ಬೇಂಬಿ ಕೊಂಚ ಬೆದರಿದ. ಆದರೆ ಮುದಿನಾಯಕ ಮತ್ತೆ ಹೇಳಿದ,

"ಅದರಿಂದ ನಮಗೇನೂ ಹೆದರಿಕೆಯಿಲ್ಲ."

ಅವರು ಸ್ವಲ್ಪ ಮೇಲಕ್ಕೆ ಜರುಗಿದರು, ಕೊಂಬೆಗಳ ಸಂದಿನಿಂದ ಹೊರಗೆ ನಡೆಯುತ್ತಿದ್ದುದೆಲ್ಲಾ ಕಾಣಿಸುತ್ತಿತ್ತು.

ಮೇಲೆ ಬಿದ್ದಿದ್ದ ಮಂಜು ಜಲಜಲನೆ ಜಾರಿತು. ಈಗ ಹೊರಗೆ ನಡೆಯುತ್ತಿದ್ದುದೆಲ್ಲಾ ಮತ್ತಷ್ಟು ಸ್ಪಷ್ಟವಾಗಿ ಕಾಣತೊಡಗಿತು.

ಬೋರೆ ಗಿಡಗಳ ಪಕ್ಕದಿಂದ, ತುಂಬೆಯ ಪೊದೆಗಳನ್ನು ದಾಟಿ ಓಟ ಕೀಳುತ್ತಿದ್ದ ಮುದಿನರಿ, ಕಾಲುಜಾರಿ, ಹಿಡಿತ ತಪ್ಪಿ ಕೆಳಗೆ ಬಿದ್ದು ಮತ್ತೆ ಎದ್ದು ಓಡಲಾರಂಭಿಸಿತು. ಅದನ್ನು ಅಟ್ಟಿಸಿಕೊಂಡು ಗಿಡ್ಡ ಕಾಲಿನ ಜೂಲು ನಾಯಿ ಓಡುತ್ತಿತ್ತು.

ನರಿಯ ಮುಂದಿನ ಕಾಲೊಂದು ಮುರಿದಿತ್ತು. ಆ ಕಾಲನ್ನು ಮೇಲಕ್ಕೆತ್ತಿ ಕುಂಟುತ್ತಲೇ ಓಡುತ್ತಿತ್ತು ಅದು. ಅದರ ಎದೆಯಬಳಿ ತಗುಲಿದ ಗಾಯದಿಂದಾಗಿ ರಕ್ತ ಸುರಿಯುತ್ತಿತ್ತು. ಭೀತಿ, ಕಳವಳ, ಬಳಲಿಕೆಗಳಿಂದ ಅದಕ್ಕೆ ಹುಚ್ಚು ಹಿಡಿದಂತಾಗಿತ್ತು. ಹಠಾತ್ತಾಗಿ ನರಿ ಸರ್ರನೆ ಹಿಂತಿರುಗಿ ಗುರ್ರೆಂದಿತು. ಹಲ್ಲು ಕಿಸಿದು ಹೆದರಿಸಿತು. ನರಿ ತಿರುಗಿ ಬಿದ್ದುದನ್ನು ಕಂಡು ನಾಯಿ ಬೆದರಿ ಹಿಂದಡಿಯಿಟ್ಟಿತು. ನರಿ ಇನ್ನು ಮುಂದಕ್ಕೆ ಓಡಲು

ಶಕ್ತಿಯೇ ಇಲ್ಲದಂತಾಗಿ ಕುಸಿದು ಕುಳಿತು ಬಿಟ್ಟಿತು. ದೊಡ್ಡದಾಗಿ ಬಾಯಿ ತೆರೆದು ಮುಖವನ್ನು ವಿಕೃತಗೊಳಿಸಿ ಗುರ್‌ಗುರ್ರೆಂದು ಹೆದರಿಸಲಾರಂಭಿಸಿತು. ಅದಕ್ಕೆ ಉತ್ತರವೋ ಎಂಬಂತೆ ಅರಣ್ಯವೆಲ್ಲಾ ಪ್ರತಿಧ್ವನಿಸುವಂತೆ ನಾಯಿ ಕೂಗತೊಡಗಿತು.

"ಬೌ....ಬೌ...ಇಗೋ ಇಲ್ಲಿ ಇಲ್ಲಿದೆ..."

ದೂರದಲ್ಲಿರುವ ವ್ಯಕ್ತಿಯನ್ನುದ್ದೇಶಿಸಿ ಕೂಗುತ್ತಿತ್ತು ನಾಯಿ.

ನಾಯಿ ಮನುಷ್ಯನನ್ನು ಕೂಗುತ್ತಿದೆಯೆಂದು ಬೇಂಬಿಗೂ ಮುದಿ ನಾಯಕನಿಗೂ ಅರ್ಥವಾಯಿತು. ಇನ್ನೂ ಅದರ ಮೈಮೇಲಿನ ಗಾಯಗ ಳಿಂದ ರಕ್ತ ಸುರಿಯುತ್ತಲೇ ಇತ್ತು. ಬರುಬರುತ್ತಾ ಅದರ ಶಕ್ತಿ ಕ್ಷೀಣಿಸು ತ್ತಿತ್ತು. ಮುರಿದಕಾಲು ದಂಟಿನಂತೆ ನೇತಾಡುತ್ತಿತ್ತು. ಆ ಹುಣ್ಣು ಮಂಜಿಗೆ ತಗುಲಿ ಮತ್ತಷ್ಟು ನೋವನ್ನುಂಟುಮಾಡುತ್ತಿತ್ತು. ನರಿ ಕಷ್ಟ ದಿಂದ ಕಾಲನ್ನು ಮೇಲಕ್ಕೆತ್ತಿ ಹಿಡಿದುಕೊಂಡಿತು.

"ನನ್ನನ್ನು ಬಿಟ್ಟುಬಿಡು. ನಿನಗೆ ಪುಣ್ಯ ಬರುತ್ತೆ, ನನ್ನ ಬಿಡು." ಎಂದು ನಾಯಿಯನ್ನು ಬೇಡಿಕೊಂಡಿತು,

"ಉಹೂಂ. ನಿನ್ನ ಬಿಡೋಲ್ಲ ನಾನು" ಎಂದಿತು ನಾಯಿ.

ನರಿ ಮತ್ತೆ ಬೇಡಿಕೊಳ್ಳಲಾರಂಭಿಸಿತು,

"ನನ್ನ ಬದುಕು ಮುಗಿದಂತೆಯೇ, ಕೊನೆಕಾಲದಲ್ಲಿದ್ದೇನೆ. ನನ್ನನ್ನು ಹೋಗಗೊಡು. ಕನಿಷ್ಟಪಕ್ಷ ಹಾಯಾಗಿ ಸಾಯಲು ಬಿಡು..."

"ಸಾಧ್ಯವಿಲ್ಲ" ಎಂದಿತು ನಾಯಿ

"ನಾವಿಬ್ಬರೂ ಒಂದೇ ಜಾತಿಗೆ ಸೇರಿದವರು, ಅಣ್ಣತಮ್ಮಂದಿರು, ಬಿಟ್ಟುಬಿಡು, ನನ್ನವರ ಬಳಿಗೆ ಹೋಗಿ ಪ್ರಶಾಂತವಾಗಿ ಪ್ರಾಣ ಬಿಡುತ್ತೇನೆ ನನ್ನನ್ನು ಹೋಗಗೊಡು."

"ಸಾಧ್ಯವಿಲ್ಲ" ಎಂದಿತು ನಾಯಿ ಗಟ್ಟಿಯಾಗಿ ಕೂಗುತ್ತಾ.

ನರಿ, ನಾಯಿಯ ಮುಖವನ್ನು ತೀಕ್ಷ್ಣವಾಗಿ ನೋಡಿತು. ಅಳಿದುಳಿದ ಶಕ್ತಿಯನ್ನೆಲ್ಲಾ ಕೂಡಿಸಿಕೊಂಡಿತು. ಅದರ ಕಂಠದಲ್ಲಿ ಬದಲಾವಣೆ ಬಂದಿತು. ಹಿಂದಿನ ನಡುಕ ಕಡಿಮೆಯಾಗಿ ತೀವ್ರತೆ ಹೆಚ್ಚಿತು. ಸಿಟ್ಟು, ರೋಷ ಭುಗಿಲ್ಲೆಂದಿತು.

"ನಿನಗೆ ನಾಚಿಕೆ, ಮಾನ ಎಂಬುದಿದೆಯೇ, ನೀನೊಬ್ಬ ದ್ರೋಹಿ."

"ಬಾ...ಬಾ..." ಎಂದಿತು ನಾಯಿ.

"ನಾಚಿಕೆಗೆಟ್ಟವ, ಆತ್ಮವಂಚಕ, ಜಾತಿ ಭ್ರಷ್ಟ" ಎಂದು ಬಾಯಿಗೆ ಬಂದಂತೆಲ್ಲಾ ಬೈದುಬಿಟ್ಟಿತು ನರಿ. ಆದರೆ ಕಣ್ಣಿನಲ್ಲಿ ಕೋಪ, ಜುಗುಪ್ಸೆ ಮನೆಮಾಡಿತ್ತು.

"ಅವನು ಹುಡುಕಿ ಹಿಡಿದುಕೊಳ್ಳಲಾರದ ನನ್ನನ್ನು ನೀನು ಹುಡುಕಿ ಕೊಡುತ್ತಿದ್ದೀಯೆ. ಅವನು ಬರಲಾರದ ಸ್ಥಳಗಳಿಗೆ ನಮ್ಮನ್ನು ಹಿಂಬಾಲಿಸಿ ನೀನು ಬರುತ್ತಿದ್ದೀಯೆ. ಒಂದೇ ಜಾತಿಗೆ ಸೇರಿದವರು ನಾವು, ಅಣ್ಣತಮ್ಮಂದಿರ ಸಮಾನ. ಹಾಗಿದ್ದೂ ನಿನಗೊಂದಿಷ್ಟೂ ಪ್ರೀತಿ ಇರಲಿ, ಕನಿಕರವೂ ಇಲ್ಲ. ನನ್ನನ್ನು ಅವನಿಗೆ ಹಿಡಿದುಕೊಟ್ಟು ಕೊಲ್ಲಿಸುತ್ತಿದ್ದೀಯ. ನೀಚ, ನಾಚಿಕೆಗೆಟ್ಟವ ನೀನು" ನರಿ ಮೂದಲಿಸಿತು.

ಸುತ್ತಲೂ ಅನೇಕ ಕಂಠಗಳು ನರಿಯ ಮಾತುಗಳನ್ನು ಪ್ರತಿಧ್ವನಿಸಿದುವು.

"ನಾಚಿಕೆಗೆಟ್ಟವನೇ...." ಎಂದು ಗಿಡದ ಮೇಲಿನ ಕಾಗೆ ಕೂಗಿತು.

"ಆತ್ಮವಂಚಕನೇ" ಎಂದಿತು ಮುಂಗುಸಿ.

"ಜಾತಿ ಭ್ರಷ್ಟ" ಎಂದಿತು ಗುಬ್ಬಚ್ಚಿ.

ಎಲ್ಲಾ ಕಡೆಗಳಿಂದಲೂ, ಎಲ್ಲ ಗಿಡಮರಗಳ ಮೇಲಿನಿಂದಲೂ, ಹಳ್ಳಕೊಳ್ಳಗಳಿಂದಲೂ, ಕೋಪ, ರೋಷಗಳಿಂದ ಪಕ್ಷಿಗಳೂ ಜಂತುಗಳೂ ಕೂಗಿದುವು.

"ನಮ್ಮ ಮಧ್ಯದಲ್ಲೊಬ್ಬ ದ್ರೋಹಿ ಇದ್ದಾನೆ, ಎಚ್ಚರಿಕೆ" ಎಂದು

ಕೂಗುತ್ತಾ ಕಾಗೆಗಳು ಹಾರಿಹೋದುವು.

ತಮ್ಮ ಸಿಟ್ಟು, ಕೋಪಗಳನ್ನು ಪ್ರದರ್ಶಿಸಲು ಜಂತುಗಳೂ, ಪಕ್ಷಿಗಳೂ ಅಲ್ಲಿ ನೆರೆದಿದ್ದುವು. ನರಿಯಲ್ಲಿ ಕಾಣಿಸಿಕೊಂಡ ರೋಷ, ಜುಗುಪ್ಸೆ ಎಲ್ಲಾ ಜೀವಿಗಳಲ್ಲಿಯೂ ಪ್ರತಿಬಿಂಬಿಸಿತು. ಹಿಂದೆ ನಾಯಿಗಳು ತಮಗೂ ತಮ್ಮವರಿಗೂ ಮಾಡಿದ ಅಪಕಾರಗಳನ್ನು ನೆನೆನೆನೆದು ಅವುಗಳೆಲ್ಲಾ ಕೋಪದಿಂದ ಕುದಿದವು. ಮಂಜಿನಲ್ಲಿ ಬಿದ್ದ ರಕ್ತವನ್ನು ನೋಡಿದಮೇಲೆ ಅವುಗಳಿಗೆ ಸಹಜವಾಗಿ ಉಂಟಾಗುವ ಭಯ ಇಂಗಿಹೋಯಿತು.

ನಾಯಿ ಹಲ್ಲುಬಿಟ್ಟು ಕೋಪದಿಂದ ಕಿರುಚಿತು,

"ಏನು ನಿಮ್ಮ ಗಲಾಟೆ? ಏನು ಬೇಕು ನಿಮಗೆ? ಯಾಕೆ ಹಾಗೆ ಕೂಗಾಡುತ್ತೀರಿ? ನೀವು ಮಾತಾಡೋದರಲ್ಲಿ ಏನಾದರೂ ಅರ್ಥವಿದೆಯೇ? ನಿಮಗೊಂದಿಷ್ಟಾದರೂ ತಿಳುವಳಿಕೆಯಿದೆಯೇ? ಸುಮ್ಮನೆ ಕೂಗಾಡಿದರೆ ಬಂತೇ ಭಾಗ್ಯ? ಚೆನ್ನಾಗಿ ತಿಳಿದುಕೊಳ್ಳಿ, ಇವೆಲ್ಲಾ ಆತನಿಗೆ ಸೇರಿದ್ದೇ, ನಾನೂ ಸಹ, ಆತನೆಂದರೆ ನನಗೆ ಪ್ರಾಣಕ್ಕೆ ಪ್ರಾಣ. ನಾನಾತನ ಸೇವಕ, ನನಗದೇ ಸಂತೋಷ. ನೀವೇನಂದುಕೋತಾ ಇದೀರಿ? ಆತನಿಗೆ ಎದುರು ಬೀಳೋಣ ಅಂತಲೇ? ನಿಮ್ಮಂತಹ ಅಲ್ಪರಿಗೆ ಅಷ್ಟು ಸಾಹಸದ ಆಲೋಚನೆಯೇ? ಆತ ನಮ್ಮೆಲ್ಲರಿಗೂ ಒಡೆಯ, ಸಾರ್ವಭೌಮ. ನಿಮ್ಮಲ್ಲಿರುವುದೆಲ್ಲಾ ಆತನದೇ. ಆತನಿಂದಲೇ ನೀವು ಬೆಳೆಯುತ್ತಿದೀರಿ, ನೀವು ಉಸಿರಾಡುತ್ತಿರುವುದೇ ಆತನ ಕರುಣೆಯಿಂದ..."

"ದ್ರೋಹಿ! ವಂಚಕ! ಜಾತಿ ಭ್ರಷ್ಟ!" ಎಂದು ಹಲ್ಲು ಮಸೆಯಿತು ನರಿ.

ನಾಯಿ ರೋಷಾವೇಶದಿಂದ ನರಿಯ ಮೇಲೆ ಬಿದ್ದು ಅದರ ಕಂಠ ಹಿಡಿದುಕೊಂಡಿತು.

ಇಬ್ಬರೂ ಗುರ್ ಗುರ್ರೆನ್ನುತ್ತಾ ಆ ಮಂಜಿನಲ್ಲಿ ಒಬ್ಬರ ಮೇಲೊಬ್ಬರು ಬಿದ್ದು ಹೊರಳಾಡಿದರು. ಮಂಜು, ರಕ್ತ, ಜೂಲು ಎಲ್ಲಾ ಬೆರೆತು ತುಂತುರು–ತುಂತುರಾಗಿ ಮೇಲಕ್ಕೆ ಹಾರಿತು.

ಸ್ವಲ್ಪ ಸಮಯದಲ್ಲಿಯೇ ಯುದ್ಧ ಪೂರ್ತಿಯಾಯಿತು. ನರಿ ಮಂಜಿನಲ್ಲಿ ಅಂಗಾತ ಬಿದ್ದು ಬಿಟ್ಟಿತು. ಸ್ವಲ್ಪ ಹೊತ್ತು ಕಾಲು ಬಡಿದುಕೊಂಡಿತು. ನಂತರ ನಿಶ್ಚಲವಾಯಿತು.

ನಾಯಿ ಮತ್ತೊಂದು ಸಲ ನರಿಯನ್ನು ಕದಲಿಸಿ ನೋಡಿ, ಅದು ಸತ್ತು ಹೋಗಿದೆಯೆಂಬುದನ್ನು ಸ್ಥಿರಪಡಿಸಿಕೊಂಡು ಮತ್ತೆ ಗಟ್ಟಿಯಾಗಿ ಕೂಗತೊಡಗಿತು.

"ಇಗೋ...ಇಲ್ಲಿ. ಇಗೋ ಇಲ್ಲಿ"

ಪ್ರೇಕ್ಷಕರೆಲ್ಲಾ ಭಯವಿಹಲ್ವರಾಗಿ ನಾಲ್ಕೂ ಮೂಲೆಗೆ ಚೆದುರಿ ಹೋದರು.

"ಎಷ್ಟು ಭಯಂಕರ !" ಎಂದ ಬೇಂಬಿ.

"ಹೌದು, ಭಯಂಕರವಾದ ಸಾವು" ನಾಯಕ ದನಿ ಗೂಡಿಸಿದ. ಒಂದು ಕ್ಷಣ ಸುಮ್ಮನಿದ್ದು ಮತ್ತೆ ಹೇಳಿದ.

"ಆ ನಾಯಿ ಮಾತುಗಳನ್ನು ಕೇಳಿದೆಯಲ್ಲವೇ ? ಆ ಭಾವನೆ ಸಾವಿಗಿಂತ ಭಯಂಕರವಾದದ್ದು, ಅವನಿಗಿಂತ ದೊಡ್ಡವರಿಲ್ಲ ಅವನು ಮಾಡಲಾರದ ಕೆಲಸವೇ ಇಲ್ಲ ಎಂಬ ಭಾವನೆ ಎಲ್ಲಕ್ಕಿಂತ ಭಯಂಕರವಾದದ್ದು. ಆದ್ದರಿಂದಲೇ ಬದುಕಿನುದ್ದಕ್ಕೂ ಭಯಾನ್ವಿತರಾಗಿಯೇ ಕಳೆಯುತ್ತಾರೆ. ಆ ಭಯದಿಂದಾಗಿಯೇ ಕೈಕಾಲು ಆಡಿಸಲೂ ಕೈಲಾಗದೆ ಆತನ ಕೈಯಲ್ಲಿ ಸಾವನ್ನಪ್ಪುತ್ತಾರೆ."

ಅಕಸ್ಮಾತ್ತಾಗಿ ಚಳಿ ಕಡಿಮೆಯಾಗಿತ್ತು. ಚಳಿಗಾಲದಲ್ಲಿ ಇದೊಂದು ತಿರುವು. ಕರಗಿದ ಮಂಜಿನ ನೀರನ್ನು ಭೂದೇವಿ ಹೆಚ್ಚು–ಹೆಚ್ಚಾಗಿ ಕುಡಿದಿದ್ದಳು. ನೆಲವೆಲ್ಲಾ ತೇವದಿಂದ ಕೂಡಿ ಕಪ್ಪನೆಯ ಮಚ್ಚೆಗಳಿಂದಾವೃತವಾಗಿತ್ತು. ನೆಲದ ಒಳಗಿನಿಂದ ಬರುತ್ತಿದ್ದ ಮಣ್ಣು ಹುಳುಗಳನ್ನು ಗುಬ್ಬಚ್ಚಿಗಳು ಆಸೆಯಿಂದ ನುಂಗುತ್ತಿದ್ದವು ಮರಕುಟುಕಗಳ ಕೂಗು ದೂರದಿಂದ ಕೇಳಿ ಬರುತ್ತಿತ್ತು. ಮೈನಾ ಕಾಗೆಗಳು ಒಂದೇ ಸಮನೆ ಹರಟೆ ಹೊಡೆಯುತ್ತಾ ಗಂದರಗೋಳವನ್ನು ಸೃಷ್ಟಿಸುತ್ತಿದ್ದುವು. ಚಳಿಗಾಲವನ್ನೆಲ್ಲಾ ಗಿಡಗಳ ಕೊಂಬೆಗಳ ಮೇಲೆಯೇ ಕಳೆದ ಕಾಡುಕೋಳಿಗಳು, ಕೆಳಗಿಳಿದು ಬಂದುವು. ನವಿಲುಗಳು ಉದಯ ಸೂರ್ಯನಿಗೆ ಸ್ವಾಗತ ಕೋರಿದುವು. ಅರಣ್ಯವೆಲ್ಲಾ

ಕ್ರೇಂಕಾರಗಳಿಂದ ತುಂಬಿ ಹೋಗಿತ್ತು.

ವಸಂತಮಾಸ ಪ್ರಾರಂಭವಾಗಿತ್ತು.

ಒಂದು ದಿನ ಬೇಂಬಿ ದೂರದಲ್ಲಿದ್ದ ಕಣಿವೆಯ ಪ್ರದೇಶಕ್ಕೆ ಹೋಗಿದ್ದ. ಅಲ್ಲಿಂದಾಚೆಯ ಕಡೆಯಲ್ಲಿ ಯಾವುದೋ ಜೀವಿ ಕದಲುತ್ತಿದ್ದಂತೆ ಅನ್ನಿಸಿತವ ನಿಗೆ. ಪೊದೆಗಳ ಹಿಂದೆ ನಿಂತು ಹುಷಾರಾಗಿ ಗಮನಿಸಿದ. ತನ್ನ ಜಾತಿ ಯದೇ ಜೀವ. ನೆಲದ ಮೇಲೆ ಆಗ ತಾನೇ ಮೊಳಕೆಯೊಡೆಯುತ್ತಿದ್ದ ಹುಲ್ಲಿನ ಕಡ್ಡಿಗಳಿಗಾಗಿ ಹುಡುಕಾಡುತ್ತಿತ್ತು.

ಹಿಂತಿರುಗಿ ಹೊರಟು ಹೋಗೋಣ ಎಂದುಕೊಂಡ ಬೇಂಬಿ. ಅಷ್ಟ ರಲ್ಲಿ ಆಕೆ ಫಲೀನಾ ಎಂದು ಗುರ್ತು ಹಿಡಿದ. ಒಂದೇ ಉಸಿರಿಗೆ ಅವಳ ಬಳಿಗೆ–ಓಡಿಹೋಗ ಬೇಕೆನಿಸಿತು. ಆದರೆ ಕಾಲುಗಳು ನೆಲಕ್ಕೆ ಅಂಟಿಕೊಂಡಂ ತಾಗಿ ಅಲುಗಾಡಿಸಲೂ ಆಗಲಿಲ್ಲ.

ಫಲೀನಾಳನ್ನು ನೋಡಿ ಎಷ್ಟೊಂದು ದಿನಗಳಾದುವಲ್ಲ!

ಅವಳು ನಿಧಾನವಾಗಿ ನಡೆಯಲಾರದೆ ನಡೆಯುತ್ತಿದ್ದಂತೆ ಅನ್ನಿಸಿತು. ದಣಿದಿದ್ದಾಳೆಯೇ. ಇಲ್ಲಾ ಚಿಂತೆಯಿಂದ ಹಾಗಾಗಿದ್ದಾಳೆಯೇ ಅರ್ಥವಾಗಲಿಲ್ಲ,

ಆಕೆ ಈಗ ಎಲ್ಲಾ ಅವರ ತಾಯಿಯಂತೆಯೇ ಕಾಣುತ್ತಿದ್ದಳು. ಸಂದೇ ಹವೇ ಇಲ್ಲ. ಪೂರ್ತಿ ಏಣಿ ಚಿಕ್ಕಮ್ಮನ ಹೋಲಿಕೆ, ಬೇಂಬಿಯ ಮನಸ್ಸು ವ್ಯಾಕುಲಗೊಂಡಿತು.

ಫಲೀನಾ, ಬೇಂಬಿಯ ಇರುವನ್ನು ಗ್ರಹಿಸಿದವಳಂತೆ ತಲೆಯೆತ್ತಿ ಸುತ್ತಲೂ ನೋಡಿದಳು.

ಮಹೋತ್ಸಾಹದಿಂದ ಅವಳ ಬಳಿಗೆ ಓಡಲು ಪ್ರಯತ್ನಿಸಿದ ಬೇಂಬಿ. ಮತ್ತೆ ಈ ಸಲ ಸಹ ಅವನು ಕಾಲುಗಳು ಕದಲಲಿಲ್ಲ. ಹುಚ್ಚು ಫಲೀನಾ ಎಷ್ಟು ಮುದುಕಿಯಂತೆ ಕಾಣುತ್ತಿದ್ದಾಳೆ! ಕಿವಿಗಳ ಬಳಿ ನರೆತಂತಿದೆ. ಬಾಲ್ಯ ದಲ್ಲಿನ ಉಲ್ಲಾಸದ ದಿನಗಳು, ಆಟ ಪಾಠಗಳ ನೆನಪಾಯಿತು ಬೇಂಬಿಗೆ.

"ಎಷ್ಟು ಹಾಯಾಗಿ ಕುಣಿ, ಕುಣಿಯುತ್ತಾ, ನಗು–ನಗುತ್ತಾ ಎಷ್ಟು

ಸುಂದರವಾಗಿದ್ದಳು ಫಲೀನಾ, ಗೋಬೋರೊಂದಿಗೆ ಪರಿಚಯವಾದ ಮೈದಾನ, ಕಣ್ಣಾಮುಚ್ಚಾಲೆ, ಜೂಟಾಟ ಆಡುತ್ತಿದ್ದುದು. ಫಲೀನಾ ಗೋಸ್ಕರ, ರೋನೋ ಕಾರೊಂದಿಗೆ ಯುದ್ಧ ಮಾಡಿದ್ದು ಎಲ್ಲಾ ನೆನಪಾಯಿತು.

ದೂರದಲ್ಲಿದ್ದ ಫಲೀನಾ ಚಿಂತಾಕ್ರಾಂತಳಾಗಿ ತಲೆಬಾಗಿಸಿ, ಹಿಂತಿರುಗಿ ದಣಿದವಳಂತೆ ನಿಧಾನವಾಗಿ ನಡೆಯುತ್ತಾ ಹೊರಟು ಹೋದಳು. ಅವಳನ್ನು ನೋಡುತ್ತಿದ್ದಂತೆ ಹಿಂದೆಂದೂ ಅನಿಸದಷ್ಟು ಪ್ರೀತಿ ಉಕ್ಕಿಬಂತು ಅವನ ಮನಸಿನಲ್ಲಿ. ಒಂದು ನೆಗೆತದಲ್ಲಿ ಕಣಿವೆದಾಟಿ ಅವಳ ಬಳಿ ಹೋಗಬೇಕೆಂದೂ ಮನಸಾರೆ ಮಾತನಾಡಬೇಕೆಂದೂ ಅನ್ನಿಸಿತು. ತಾವು ಆಡಿದ ಆಟಗಳನ್ನು ಕುರಿತು. ಒಂದೇ–ಎರಡೇ ಎಷ್ಟೋ ವಿಷಯಗಳನ್ನು ಮಾತನಾಡಬೇಕೆಂದು ಅನ್ನಿಸಿತು. ಆದರೆ ಅವನ ಕಾಲುಗಳು ಕದಲದಂತೆ ನೆಲಕ್ಕೆ ಅಂಟಿಕೊಂಡಿದ್ದುವು.

ಫಲೀನಾ ಗಿಡ ಗಂಟಿಗಳಲ್ಲಿ ಹೊಕ್ಕು ಮಾಯವಾದಳು.

ಬೇಂಬಿ ಶೂನ್ಯಾಕಾಶದ ಕಡೆ ನೋಡುತ್ತಾ ಬಹಳ ಹೊತ್ತು ಅಲ್ಲಿಯೇ ನಿಂತಿದ್ದ.

ಹಠಾತ್ತಾಗಿ ಗುಡುಗಿದ ಶಬ್ದ ಕೇಳಿಸಿತು.

ಬೇಂಬಿ ಬೆಚ್ಚಿಬಿದ್ದ, ಗುಡುಗಿನ ಸದ್ದು ಹತ್ತಿರದಿಂದ ಬಂದಿರಲಿಲ್ಲ. ದೂರದಿಂದ ಕೇಳಿಸಿತ್ತು. ಅಷ್ಟರಲ್ಲಿ ಮತ್ತೊಂದು, ಮತ್ತೆ ಇನ್ನೊಂದು ಗುಡುಗು ಕೇಳಿಸಿತು.

ನಾಲ್ಕು ಹೆಜ್ಜೆಗಳಲ್ಲಿ ಗಿಡಗಳ–ಮಧ್ಯೆ ಪ್ರವೇಶಿಸಿ ಮರೆಯಾದ ಜಾಗದಲ್ಲಿ ನಿಂತ, ಬೇಂಬಿ. ಕಿವಿ ನಿಮಿರಿಸಿ ಕೇಳಿದ. ಎಲ್ಲೆಲ್ಲೂ ನಿಶ್ಶಬ್ದ. ಹುಷಾರಾಗಿ ಮನೆ ಸೇರಿದ. ಮುರಿದುಬಿದ್ದ ನೇರಳೆಯ ಬಳಿ ಮುದಿನಾಯಕ, ಬೇಂಬಿಗಾಗಿ ಎದುರು ನೋಡುತ್ತಿದ್ದ.

ಅವನನ್ನು ಕಂಡ ಕೂಡಲೇ "ಕೇಳಿಸಿತೇ ?" ಎಂದ.

"ಹಾಂ ಮೂರು ಸಲ ಗುಡುಗಿತು. ಅವನು ಕಾಡಿನಲ್ಲಿಯೇ ಇದ್ದಾನೆ."

"ಹೌದು, ಇಲ್ಲಿಯೇ ಇದ್ದಾನೆ. ನಾವು ಹೊರಡ ಬೇಕೀಗ."

ಎಲ್ಲಿಗೆಂದು ಅರ್ಥವಾಗಲಿಲ್ಲ ಬೇಂಬಿಗೆ ತಾವೀಗ ವಾಸಿಸುತ್ತಿದ್ದ ಸ್ಥಳಕ್ಕಿಂತ ಭದ್ರವಾದ ಸ್ಥಳ ಮತ್ತೊಂದು ಇರಬಹುದೆಂದು ಅವನು ಊಹಿಸಿರಲಿಲ್ಲ.

"ಆ ಕಡೇನೇ, ಅವನಿರುವ ಸ್ಥಳಕ್ಕೇ ಹೋಗಬೇಕು ನಾವು" ಎಂದ ನಾಯಕ ಭಾರವಾದ ಕಂಠದಿಂದ.

ಬೇಂಬಿ ಬೆಚ್ಚಿ ಬಿದ್ದ.

"ಹೆದರಿಕೆಯೇನಿಲ್ಲ. ಪ್ರಮಾದ ಭಯವೂ ಇಲ್ಲ. ಪೂರ್ತಿಯಾಗಿ ಬೇರೆಯಾಗುವ ಮೊದಲೇ ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಲು ಸಾಧ್ಯವಾಗುತ್ತಿದೆಯಲ್ಲಾ ಎಂದು ಸಂತೋಷವಾಗಿದೆ ನನಗೆ..." ಮುದಿನಾಯಕನ ಕಂಠ ಕಂಪಿಸಿತು.

ಆತನ ಕಂಠದಲ್ಲಿ ಕಂಪನ ಕೇಳಿದ್ದು ಇದೇ ಮೊದಲು ಸಲ. ಬೇಂಬಿಗೆ ಆಶ್ಚರ್ಯವಾಯ್ತು. ನಾಯಕನ ತಲೆ ಮೊದಲಿಗಿಂತಲೂ ಬೆಳ್ಳಗೆ ನರೆತು ಹೋಗಿತ್ತು. ಮುಖ ಸುಕ್ಕು ಗಟ್ಟಿತ್ತು. ಆಳವಾದ ಕಣ್ಣುಗಳಲ್ಲಿ ಹಿಂದಿನ ಕಾಂತಿ ಇರಲಿಲ್ಲ. ಅವು ದಣಿದು ತಿಳಿಹಸಿರು ಬಣ್ಣಕ್ಕೆ ತಿರುಗಿದ್ದುವು. ಇಬ್ಬರೂ ಗುಂಡಿಯಿಂದ ಹೊರಬಂದರು.

ಚಿರಪರಿಚಿತವಾದ ಘಾಟುವಾಸನೆ, ಗಬ್ಬುನಾತ ಗಾಳಿಯಲ್ಲಿ ತೇಲಿ ಬಂದಿತ್ತು. ಅದು ಭಯ–ಪ್ರಮಾದಗಳ ಸಂಕೇತ ಎಂದು ಅವರಿಗೆ ಚೆನ್ನಾಗಿ ಗೊತ್ತು.

ಬೇಂಬಿ ನಿಂತುಬಿಟ್ಟ. ಆದರೆ ನಾಯಕ ಆ ವಾಸನೆ ಬರುತ್ತಿದ್ದ ಕಡೆಗೇ ಹೊರಟಿದ್ದ. ವಿಧಿಯಿಲ್ಲದೆ ಬೇಂಬಿ ಅವನನ್ನು ಅನುಸರಿಸಿದ.

ಆ ವಾಸನೆ. ಮಿಕ್ಕ ಅಡವಿಯ ವಾಸನೆಗಳನ್ನೆಲ್ಲಾ ಅಧಿಗಮಿಸಿ ಗಾಳಿಯಲ್ಲಿ ತೇಲಿ ಬರುತ್ತಿತ್ತು. ಮುಂದೆ–ಮುಂದೆ ಹೋಗುತ್ತಿದ್ದಂತೆ ಅದು ಮತ್ತಷ್ಟು ಹೆಚ್ಚಾಗಿ ಅಮಲು ಬರಿಸುವಂತಾಗುತ್ತಿತ್ತು. ಮೂಗು, ಬಾಯಿ ಎಲ್ಲಾ ಗಬ್ಬುನಾತದಿಂದ ತುಂಬಿ ಉಸಿರಾಡುವುದೇ ಕಷ್ಟವಾಯಿತು. ಅಲ್ಲಿಂದ

ಓಡಿ ಹೋಗಬೇಕೆಂಬ ಆಲೋಚನೆಯೊಂದೇ ಬೇಂಬಿಯ ಮನಸ್ಸನ್ನು ಆಕ್ರಮಿಸಿತ್ತು. ಮನಸ್ಸಿನ ತುಂಬಾ ಯಾವುದೇ ತೆರೆ ಮುಚ್ಚಿ ಬಿಟ್ಟಂತೆ ಮಿಕ್ಕ ಆಲೋಚನೆಗಳೊಂದೂ ಅವನ ಬಳಿ ಸುಳಿಯದಂತಾಗಿತ್ತು. ಶರೀರ ತನ್ನ ಅರಿವಿಲ್ಲದೆಯೇ ಮರಗಟ್ಟಿದ ಅನುಭವ. ಆಲೋಚನಾರಹಿತನಾಗಿ ಅವನು ಬೊಂಬೆಯಂತೆ ನಾಯಕನ ಹಿಂದೆ ನಡೆದ.

"ಹುಂ .. ಇಗೋ ನೋಡು ಇಲ್ಲಿ ನೋಡು" ಎನ್ನುತ್ತಾ ನಾಯಕ ಪಕ್ಕಕ್ಕೆ ಜರುಗಿದ.

ಪೊದೆಗಳ ಪಕ್ಕದಲ್ಲಿ ಕರುಗುತ್ತಿದ್ದ ಮಂಜಿನಲ್ಲಿ ಅಂಗತ್ತಲಾಗಿ ಕೈಕಾಲುಗಳನ್ನು ಚಾಚಿಕೊಂಡು ಬಿದ್ದಿದ್ದ—ಮನುಷ್ಯ !

ಹಿಂದಿನ, ಎಂದಿನ ಭಯ ಎದೆಯನ್ನು ಹಿಂಡುವಂತಹ ಭಯ—ಬೇಂಬಿಯ ಉಸಿರು ಕಟ್ಟಿತ್ತು. ಬಹಳ ಹೊತ್ತಿನಿಂದಲೂ ಬಿಗಿಹಿಡಿದ ಬಯಕೆ ಉಕ್ಕಿಬರಲು ತಡೆಯಲಾರದೆ ಓಡಲು ಪ್ರಯತ್ನಿಸಿದ.

"ನಿಲ್ಲು."

ನಾಯಕನ ಆಜ್ಞೆ ಕೇಳಿ ನಿಂತಲ್ಲಿಯೇ ನಿಂತ ಬೇಂಬಿ.

ನಾಯಕ ಧೈರ್ಯವಾಗಿ ನೆಲದ ಮೇಲೆ ಬಿದ್ದಿದ್ದ ಮನುಷ್ಯನ ಬಳಿ ಹೋಗಿ ನಿಂತ.

ಮನುಷ್ಯ ಅಂಗತ್ತಲಾಗಿ ಬಿದ್ದಿದ್ದ. ಮುಖ ಅಸಹ್ಯ ಹುಟ್ಟಿಸುವ ಆ ಮುಖ—ಮತ್ತಷ್ಟು ವಿಕೃತವಾಗಿ ಆಕಾಶದ ಕಡೆ ನೋಡುತ್ತಿತ್ತು. ಅವನ ಟೋಪಿ ಪಕ್ಕದಲ್ಲಿಯೇ ಬಿದ್ದಿತ್ತು. ಟೋಪಿ ಎಂದರೇನೆಂದು ಅರಿಯದ ಬೇಂಬಿ ಅವನ ತಲೆ ಎರಡು ಹೋಳಾಗಿರಬಹುದೆಂದುಕೊಂಡ.

ಅವನ ಕಂಠದ ಬಳಿ ಆಗಿದ್ದ ಗಾಯ ಎರಡನೆಯ ಬಾಯಿಯಂತೆ ಕಾಣುತ್ತಿತ್ತು. ಅದರೊಳಗಿನಿಂದ ರಕ್ತ ಕಾಲುವೆಯಂತೆ ಹರಿದು, ಕರಗುತ್ತಿದ್ದ ಮಂಜಿನೊಂದಿಗೆ ಬೆರೆತು ನೆಲದಲ್ಲಿ ಇಂಗಿ ಹೋಗುತ್ತಿತ್ತು.

ನಾಯಕ ಅವನ ಕಡೆ ತೋರಿಸಿ, ಬೇಂಬಿಗೆ ಹೇಳಿದ.

"ನೋಡೀಗ, ಇವನ ಪಕ್ಕದಲ್ಲಿಯೇ ನಿಂತಿದ್ದೇವೆ. ಅಷ್ಟೆಲ್ಲಾ ಹೊಗಳಿದ ಇವನಲ್ಲಿ ಈಗ ಎಲ್ಲಿದೆ ಶಕ್ತಿ ?"

ಬೇಟೆ ಕೆಳಗೆ ಬಿದ್ದಿದ್ದ ಮನುಷ್ಯನ ಕಡೆ ನೋಡಿದ. ಅವನ ಆಕಾರ, ಅವಯವಗಳು. ಎಲ್ಲದರಲ್ಲೂ ಏನೋ ಹೊಸತು ಇರುವಂತೆ ಅನ್ನಿಸಿತು. ಎಂತಹುದೋ ವೈಚಿತ್ರ್ಯ–ನಿಗೂಢತೆ, ಅಜೇಯತೆ ಕಾಣಿಸಿತು–ಆದರೆ ಕಣ್ಣುಗಳಲ್ಲಿ ಜೀವ ಇರಲಿಲ್ಲ.

ಬೇಟೆಗದೇನೆಂದು ಅರ್ಥವಾಗಲಿಲ್ಲ.

ನಾಯಕ ಹೇಳತೊಡಗಿದ.

"ಬೇಟೆ, ಗೋಟೋ ಹೇಳಿದ್ದು ನೆನಪಿದೆಯೇ ? ಮೊನ್ನೆ–ಮೊನ್ನೆ ಆ ಜೂಲು ನಾಯಿ ಏನು ಹೇಳಿತೆಂದು ನೆನಪಿದೆಯೇ ? ಇವನೆಷ್ಟರ ಮಟ್ಟಿಗೆ ಅಜೇಯನೆಂಬುದು ಈಗರ್ಥವಾಯಿತೇ ? ಇವನೂ ನಮ್ಮೆಲ್ಲರಂತಹವನೇ ಇವನಿಗೂ ಭಯ, ಭೀತಿ, ಬಯಕೆ, ನೋವು, ಸಾವು ಎಲ್ಲಾ ಇವೆ. ನಮ್ಮ ಮೇಲಕ್ಕೆ ನಿರ್ಭಯವಾಗಿ, ಕ್ರೂರ್ರವಾಗಿ, ಕರ್ಕಶವಾಗಿ ದಂಡೆತ್ತಿ ಬಂದ. ಈಗ ? ನಿರ್ಜೀವವಾಗಿ ನೆಲದ ಮೇಲೆ ಬಿದ್ದಿದ್ದಾನೆ. ಇವನನ್ನು ನೋಡಿ ಎಲ್ಲರೂ ನಡುಗುತ್ತಿದ್ದರು. ಏಕೆ ? ಇವನಿಗೇನೂ ಬಲಿಷ್ಠವಾದ ಕಾಲುಗಳಿಲ್ಲ. ಕಾಗೆಗಿದ್ದಂತೆ ರೆಕ್ಕೆಗಳೂ ಇಲ್ಲ. ಮುಂಗುಸಿಗಿರುವಂತಹ ಲಾಘವವೂ ಇಲ್ಲ. ನರಿಗೆ ಇದ್ದಂತಹ ಚೂಪಾದ ಹಲ್ಲಿಲ್ಲ. ಆದರೂ ಇವನು ಎಲ್ಲರಿಗಿಂತಲೂ ಬಲಿಷ್ಠ ಹೇಗಾದ ? ಅವನಿಗೆ ಧೈರ್ಯ–ಸಾಹಸಗಳಿವೆಯಾದ್ದರಿಂದಲೇ ಸಾಧ್ಯವಾಯಿತು. ನಮ್ಮ ಜಿಂಕೆಗಳು ಯಾರನ್ನೂ ಕೊಲ್ಲುವುದಿಲ್ಲ ಅವನೂ, ನಾವೂ ಸಮಾನ ಜೀವಿಗಳೇ. ಆದರೆ ಅವನು ನಮ್ಮನ್ನು ನಿಷ್ಕಾರಣವಾಗಿ ಮೃತ್ಯುಪಾಗೀಡು....... ಮಾಡುತ್ತಿದ್ದಾನೆ. ಆದರೂ ನಾವು ಬದುಕಬೇಕು. ನಮ್ಮ ಸಂತತಿ ಸಾವಿರ, ಸಾವಿರವಾಗಿ ವೃದ್ಧಿಯಾಗಬೇಕು ನಮ್ಮ ಜಾತಿ ಅಸಂಖ್ಯಾತವಾಗಬೇಕು. ನಮ್ಮನ್ನು ಕಾಪಾಡಿಕೊಳ್ಳಬೇಕು. ನಮ್ಮ ಬದುಕನ್ನು ರಕ್ಷಿಸಿಕೊಳ್ಳಬೇಕು. ಹತ್ತಿರದವರನ್ನೆಲ್ಲಾ ಒಟ್ಟುಗೂಡಿಸಬೇಕು. ಇವನಿಗ ವ್ಯತಿರೇಕವಾಗಿ ಮಿಕ್ಕ ಜೀವಿಗಳಿಗೆ ಸಹಾಯ ಮಾಡ

ಬೇಕು. ಚಾತುರ್ಯ, ಲಾಘವ ಉಪಾಯಗಳನ್ನು ಮೈಗೂಡಿಸಿಕೊಳ್ಳ ಬೇಕು. ನಮ್ಮ ನೆಲೆಯನ್ನು ತಿಳಿಯಗೊಡ ಬಾರದು. ಶೀಘ್ರಗಾಮಿ ಗಳಾಗಬೇಕು. ಅಷ್ಟೇ ಹೊರತು ಹೇಡಿಗಳಾಗಬಾರದು, ಇದೇ ಜೀವನ ಧರ್ಮ. ಬದುಕಿನ ಗುರಿ ಕೇಳ್ತಿದೀಯಾ ?"

"ಹೂಂ," ಎಂದ ಮೆಲ್ಲನೆ ಬೇಂಬಿ. ಜೀವನ ಧರ್ಮ ಹೋರಾಟ."

ಮುದಿನಾಯಕ ವಾತ್ಸಲ್ಯದಿಂದ ಬೇಂಬಿಯ ಕಡೆ ದೃಷ್ಟಿ ಹರಿಸಿದ. ಆತನ ಕಣ್ಣುಗಳಲ್ಲಿ ಕೊನೆಯ ಬಾರಿಗೆ ರಾಜನ ಸಾತ್ವಿಕತೆ ಫಳಕ್ಕೆಂದು ಹೊಳೆಯಿತು.

"ಇಷ್ಟನ್ನೇ ನಾನು ನಿನಗೆ ಹೇಳಬೇಕೆಂದಿದ್ದದ್ದು. ಇನ್ನು ಪ್ರಶಾಂತವಾದ ಮನಸ್ಸಿನಿಂದ ನಿನ್ನನ್ನು ಬಿಟ್ಟು ಹೊರಡಬಲ್ಲೆ ಕಣಪ್ಪಾ..."

ಇಬ್ಬರೂ ಹಿಂತಿರುಗಿದರು, ಹಳೆಯ ಕದಂಬ ವೃಕ್ಷದ ಬಳಿ ಬಂದಮೇಲೆ ಮುದಿನಾಯಕ ನಿಂತ.

"ಬೇಂಬಿ, ಇನ್ನು ನನ್ನ ಹಿಂದೆ ಬರಬೇಡ. ನನ್ನ ಬದುಕು ಕೊನೆಯ ಘಟ್ಟಕ್ಕೆ ಬಂದಿದೆ. ಇನ್ನು ಬಹಳ ದಿನ ಬದುಕಲಾರೆ ನಾನು. ಯಾವುದಾ ದರೊಂದು ಪ್ರಶಾಂತವಾದ ಸ್ಥಳವನ್ನು ಅರಿಸಿಕೊಂಡು ಹಾಯಾಗಿ ಪ್ರಾಣ ಬಿಡುತ್ತೇನೆ".... ಎಂದ ಮುದಿ ನಾಯಕ.

"ನಾನು ಕೂಡಾ ತಮ್ಮೊಂದಿಗೆ..." ಬೇಂಬಿಯ ಕಂಠ ನಡುಗಿತು.

"ಬೇಡ–ಬೇಡ, ನಾವು ಇಲ್ಲಿಯೇ ಬೇರೆಯಾಗೋಣ. ಪ್ರತಿಯೊ ಬ್ಬನೂ ಕೊನೆಯ ಘಟ್ಟದಲ್ಲಿ ಏಕಾಂತವಾಗಿರಬೇಕು, ಹುಷಾರಾಗಿ ಹೊರಡು ..."

ಮುದಿನಾಯಕ ಮುಂದಕ್ಕಡಿಯಿಟ್ಟ.

ಆ ದಿನ ಅರುಣೋದಯ ಸಮಯದಲ್ಲಿ ಮೋಡಗಳಿಲ್ಲದ ಆಕಾಶ, ಕಾಂತಿಯನ್ನು ಬೀರುತ್ತಿತ್ತು. ನಕ್ಷತ್ರಗಳು ಮಾಯವಾಗುತ್ತಿದ್ದಂತೆಯೇ ಸೂರ್ಯ ಅವಸರ ಪಟ್ಟವನಂತೆ ಉದಯಿಸಿ ಬಿಟ್ಟಿದ್ದ ಮೈದಾನದಲ್ಲಿ ಹುಲ್ಲನ್ನು

ಅಂಟಿಕೊಂಡಿದ್ದ ತೆಳ್ಳನೆಯ ಮಂಜು ಕ್ಷಣಮಾತ್ರದಲ್ಲಿ ವಾಯುವಾಯಿತು. ನೆಲ ಒಣಗಿದಂತಾಯಿತು.

ಅರಣ್ಯದ ನಾಲ್ಕೂ ಮೂಲೆಗಳಿಂದ ಜೀವಿಗಳಿನ್ನೂ ಹೊರಬಂದಿರಲಿಲ್ಲ. ಅಲ್ಲಲ್ಲಿ ಮರಕುಟುಕಗಳ ಕುಟುಕು ಸದ್ದು—ಪಾರಿವಾಳಗಳ ಗುರಗುರ ಮಾತ್ರ ಕೇಳಿಸುತ್ತಿತ್ತು.

ಯಾರೂ ಇಲ್ಲದ ಏಕಾಂತದ ಪ್ರದೇಶಕ್ಕಾಗಿ ಹುಡುಕಾಡುತ್ತಾ, ಬೇಂಬಿ ಗಿಡಗಂಟಿಗಳ ಮರೆಯಲ್ಲಿ ನಿಂತಿದ್ದ. ಅವನ ತಲೆಯ ಮೇಲ್ಭಾಗದಲ್ಲಿ ನೊಣಗಳ ಗುಂಪೊಂದು ಬೆಚ್ಚನೆಯ ಬಿಸಿಲಿನಲ್ಲಿ ಸುತ್ತುತ್ತಿತ್ತು.

ಅಷ್ಟರಲ್ಲಿ ದೊಡ್ಡ ಚಿಟ್ಟೆಯೊಂದು ಜುಯ್ಯೆಂದು ಸದ್ದು ಮಾಡುತ್ತಾ, ನೊಣಗಳ ಮಧ್ಯದಿಂದ ತೂರಿಹೋಯಿತು. ಅದರ ರಭಸಕ್ಕೆ ಚದುರಿ ಹೋದ ನೊಣಗಳು ಮತ್ತೆ ಬೇಂಬಿಯ ತಲೆಯ ಮೇಲೆ ಮುತ್ತಿಕೊಂಡುವು. ಸೂರ್ಯ ಕಿರಣಗಳ ಕಾಂತಿಯಲ್ಲಿ ಕಪ್ಪಗೆ ಹೊಳೆಯುತ್ತಿದ್ದ ಚಿಟ್ಟೆಯನ್ನೂ, ಅದರ ರೆಕ್ಕೆಗಳ ಮೇಲಿನ ಬಣ್ಣಗಳನ್ನೂ ನೋಡುತ್ತಾ ಬೇಂಬಿ ಮುಂದಕ್ಕೆ ನಡೆದ.

ಅವನನ್ನು ನೋಡುತ್ತಾ ನೊಣಗಳು ತಮ್ಮಲ್ಲಿ—ತಾವು ಮಾತನಾಡಿ ಕೊಳ್ಳ ತೊಡಗಿದುವು.

"ಈತ ಯಾರೆಂದು ಗೊತ್ತೇ?" ಎಂದು ಕೇಳಿತು ಒಂದು ನೊಣ.

"ಈತನೇ ಮುದಿನಾಯಕ" ಎಂದಿತು ಮತ್ತೊಂದು.

"ಈತನ ವಯಸ್ಸೆಷ್ಟಿರಬಹುದು ?" ಎಂದು ಮತ್ತೊಂದು ನೊಣ ಕುತೂಹಲದಿಂದ ಪ್ರಶ್ನಿಸಿತು.

"ಅದನ್ನು ಹೇಳುವುದು ಕಷ್ಟ. ಈತ ಚಿರಂಜೀವಿ. ಈತನ ಜತೆ ಗಾರರೆಲ್ಲಾ ಎಂದೋ ಸತ್ತು ಹೋದರು" ಎಂದಿತು, ಮುದಿನೊಣವೊಂದು. "ಜಿಂಕೆಗಳು ಬಹಳ ಕಾಲ ಬದುಕುತ್ತವೆ. ನಮ್ಮ ಆಯುಸ್ಸೂ ಕಡಿಮೆಯೇ ನಲ್ಲ. ಆದರೆ ನಾವು ಸೂರ್ಯನನ್ನು ಒಂದೇ ಬಾರಿ ನೋಡುತ್ತೇವೆ. ಒಂದೊಂದುಸಲ ಎರಡುಸಲ ನೋಡಿದ ನೊಣಗಳೂ ಇಲ್ಲದಿಲ್ಲ."

"ಮತ್ತೆ ಮುದಿನಾಯಕ?"

"ಓ…ಆತ ಎಲ್ಲರಿಗಿಂತ ದೊಡ್ಡವನು. ಆತ ಬದುಕಿದಷ್ಟು ದಿನ ಇದುವರೆಗೂ ಯಾರೂ ಬದುಕಿಲ್ಲ. ಆತ ಎಷ್ಟೋ ವಿಷಯಗಳನ್ನೂ ನೋಡಿ ಅನುಭವ ಸಂಪಾದಿಸಿದ್ದಾನೆ. ಅದು ನಮ್ಮ ಊಹೆಗೂ ನಿಲುಕದು"

ಅವರ ಸಂಭಾಷಣೆ ಕೇಳಿ ಬೇಂಬಿ ತನ್ನಲ್ಲಿ—ತಾನೇ ನಕ್ಕ.

ಭೀತಿಯಿಂದ ಯಾರೋ ಸಣ್ಣದನಿಯಲ್ಲಿ ಕೂಗಿಕೊಂಡಂತಾಯಿತು. ಬೇಂಬಿ ನಿಧಾನವಾಗಿ ಕಿವಿಗೊಟ್ಟು ಕೇಳಿದ. ಸದ್ದು ಮಾಡದೆ ಗಿಡಗಳ ಗುಂಪಿನೆಡೆಗೆ ನಡೆದ. ಆ ವಿಧವಾಗಿ ನಡೆಯುವುದು ಅವನಿಗೆ ಅಭ್ಯಾಸವಾಗಿ ಬಿಟ್ಟಿತ್ತು. ಅದೇ ಕೂಗು ಕೇಳಿಸಿತು. ಚಿಂತೆ, ಹೆದರಿಕೆಗಳಿಂದ ಕೂಗುತ್ತಿದ್ದ ಪ್ರಾಣಿಗಳ ಕಂಠ. ಅದನ್ನು ಕೇಳಿದಾಕ್ಷಣ ಬೇಂಬಿಗೆ ತನ್ನ ಬಾಲ್ಯ ನೆನಪಾಯಿತು.

"ಅಮ್ಮಾ ಅಮ್ಮಾ…"

ಸೀಳುದಾರಿಯಲ್ಲಿ ಒಬ್ಬರನ್ನೊಬ್ಬರು ಕಾಣುತ್ತಾ, ನಡೆಯುತ್ತಿದ್ದ ಇಬ್ಬರು ಚಿಕ್ಕಮಕ್ಕಳು—ಅಣ್ಣ, ತಂಗಿ, ಕೆಂಪು ಚುಕ್ಕಿಯ ಮೃದು ಚರ್ಮದ ಹಸುಳೆಗಳು.

"ಅಮ್ಮಾ, ಅಮ್ಮಾ."

ಬೇಂಬಿ ಅವರ ಮುಂದೆ ಪ್ರತ್ಯಕ್ಷನಾದ.

"ಅಮ್ಮ ಎಲ್ಲೋ ಕೆಲಸದ ಮೇಲಿದ್ದಾಳೆ" ಎಂದ ಕಠಿಣವಾಗಿ, ನಂತರ ಹುಡುಗನ ಕಡೆ ನೋಡುತ್ತಾ,

"ಅಮ್ಮನಿಲ್ಲದೆ ಒಂಟಿಯಾಗಿರಲಾರೆ ಎನ್ನಲು ನಾಚಿಕೆಯಾಗುವುದಿಲ್ಲವೇನು?" ಎಂದ.

ಮಕ್ಕಳಿಬ್ಬರೂ ಹೆದರಿಕೆಯಿಂದ ಕೂಗಾಲಾದರು. ಬಾಯಿ ಮುಚ್ಚಿಕೊಂಡರು.

ಬೇಂಬಿ ಸರ್ರನೆ ಹಿಂದಿರುಗಿ ಗಿಡಗಳ ಗುಂಪಿನಲ್ಲಿ ಸೇರಿ ಹೋದ.

"ಹುಡುಗ ಚೆನ್ನಾಗಿದ್ದಾನೆ. ನನಗೆ ತುಂಬಾ ಹಿಡಿಸಿದ. ಇನ್ನೂ ಸ್ವಲ್ಪ ದೊಡ್ಡವನಾದ ಮೇಲೆ ಪತ್ತೆ ನೋಡಬೇಕು. ಹುಡುಗಿ ಎಷ್ಟು ಮುದ್ದಾಗಿದ್ದಾಳೆ? ಫಲೀನಾ ಚಿಕ್ಕಂದಿನಲ್ಲಿ ಹೀಗೇ ಇದ್ದಿದ್ದು" ಎಂದುಕೊಂಡ.

ಅವನು ಹಾಗೆಯೇ ಆಲೋಚಿಸುತ್ತಾ ಮುಂದು–ಮುಂದಕ್ಕೆ ಸಾಗಿ ಹೋದ. ಕಾನನದ ಗಿಡಮರಗಳ ಕತ್ತಲ ಮುಸುಕಿನಲ್ಲಿ ಅಂತರ್ಹಿತನಾದ.

---